# ಉದ್ಯೋಗ ಖಾತ್ರಿ ಯೋಜನೆ : ಲಿಂಗಸಂಬಂಧಿ ಅಧ್ಯಯನ

(ಮಾನ್ವಿ ತಾಲ್ಲೂಕನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಆಂಶಿಕ ಪದವಿಗಾಗಿ
ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ಭೀಮೇಶ

ಮಾರ್ಗದರ್ಶಕರು
ಡಾ. ಶೈಲಜ ಇಂ.ಹಿರೇಮಠ
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ



ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೯

# ಉದ್ಯೋಗ ಖಾತ್ರಿ ಯೋಜನೆ : ಲಿಂಗಸಂಬಂಧಿ ಅಧ್ಯಯನ

(ಮಾನ್ವಿ ತಾಲ್ಲೂಕನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ಭೀಮೇಶ

ಮಾರ್ಗದರ್ಶಕರು
ಡಾ. ಶೈಲಜ ಇಂ.ಹಿರೇಮಠ
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ



ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೯

## ಮಾರ್ಗದರ್ಶಕರ ದೃಢೀಕರಣ ಪತ್ರ

ಉದ್ಯೋಗ ಖಾತ್ರಿ ಯೋಜನೆ : ಲಿಂಗಸಂಬಂಧಿ ಅಧ್ಯಯನ ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಭೀಮೇಶ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಶೈಲಜ ಇಂ.ಹಿರೇಮಠ
ಮಾರ್ಗದರ್ಶಕರು ಮತ್ತು ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 5-10-09

# ಸಂಶೋಧಕರ ಪ್ರಮಾಣ ಪತ್ರ

ಉದ್ಯೋಗ ಖಾತ್ರಿ ಯೋಜನೆ : ಲಿಂಗಸಂಬಂಧಿ ಅಧ್ಯಯನ ಎಂಬ ಸಂಪ್ರಬಂಧವನ್ನು ಡಾ.ಶೈಲಜ ಇಂ.ಹಿರೇಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಭಾಷಾ ನಿಕಾಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಭೀಮೇಶ
ಸಂಶೋಧಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 05-10-2009

# ಪರಿವಿಡಿ

ಅಧ್ಯಾಯ ೧

# ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಿ-ವಿಧಾನಗಳು

೧.೪. ಅಧ್ಯಯನದ ಮಹತ್ವ

೧.೫. ಅಧ್ಯಯನದ ಸ್ವರೂಪ

೧

# ಪ್ರಸ್ತಾವನೆ

ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿಯು ತನ್ನದೇ ಆದ ರೀತಿಯಲ್ಲಿ ಹಲವಾರು ರೀತಿಯ ಮಹತ್ವವನ್ನು ಪಡೆದುಕೊಂಡಿದೆ. ಭಾರತವು ಹಳ್ಳಿಗಳಿಂದ ಕೂಡಿದ ದೇಶ. ಈ ಗ್ರಾಮಗಳು ಕೃಷಿ ಮೂಲವಾಗಿವೆ. ಗ್ರಾಮೀಣ ದಾರಿದ್ರ್ಯತನವನ್ನು ನಿರ್ಮೂಲನೆ ಮಾಡುವುದು ಮತ್ತು ಅಲ್ಲಿನ ಜನರನ್ನು ಆರ್ಥಿಕವಾಗಿ ಸಾಮಾಜಿಕವಾಗಿ ಮೇಲಕ್ಕೆತ್ತುವುದಕ್ಕಾಗಿ ಗ್ರಾಮೀಣ ಅಭಿವೃದ್ಧಿಯ ಅವಶ್ಯಕತೆ ಇದೆ. ಗ್ರಾಮೀಣ ಅಭಿವೃದ್ಧಿಯ ಕಾರ್ಯಕ್ಷೇತ್ರ ವಿಶಾಲವಾಗಿರುವುದರಿಂದ ಕೇಂದ್ರ ಮತ್ತು ರಾಜ್ಯಸರಕಾರಗಳು ಆಯಾ ಕ್ಷೇತ್ರ ಮತ್ತು ವರ್ಗಗಳ ಅಭಿವೃದ್ಧಿಗೆ ಸಂಬಂಧಪಟ್ಟಂತೆ ಹಲವಾರು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಸಮುದಾಯದ ಪರಿಸ್ಥಿತಿಗೆ ತಕ್ಕಂತೆ ವಿಶೇಷ ಯೋಜನೆಗಳನ್ನು ಹಮ್ಮಿಕೊಳ್ಳುತ್ತಾ ಬಂದಿದೆ. ಅಂತಹ ಯೋಜನೆಗಳಲ್ಲಿ ಈ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯೂ ಒಂದಾಗಿದೆ. ಈ ಯೋಜನೆ ಜಾರಿಗೆ ಬಂದು ಸುಮಾರು ವರ್ಷಗಳೇ ಕಳೆದಿದ್ದರೂ ಸಹ ಗ್ರಾಮೀಣಾಭಿವೃದ್ಧಿಯು ಕುಂಟುತ್ತಾ ಸಾಗಿರುವುದು ಕಂಡುಬರುತ್ತದೆ. ಏಕೆಂದರೆ ಈ ಯೋಜನೆಯಲ್ಲಿ ಹಲವಾರು ದೋಷಗಳಿವೆ. ಅಂತಹ ದೋಷಗಳಲ್ಲಿ ಪ್ರಮುಖವಾದವೆಂದರೆ ಲಿಂಗ ಅಸಮಾನತೆಯಿಂದ ಕೂಡಿರುವುದಾಗಿದೆ. ತದನಂತರ ಪ್ರಾದೇಶಿಕ ಅಸಮಾನತೆಯನ್ನು ಒಳಗೊಂಡಿದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯು ಲಿಂಗ ಸಮಾನತೆಯ ಅಂಶಗಳನ್ನು ಒಳಗೊಂಡಿದೆ ಎಂದು ಹೇಳಲಾಗುತ್ತಿದ್ದರೂ ಸಹ ಅದನ್ನು ಸೂಕ್ಷ್ಮವಾಗಿ ಪರಿಶೀಲಿಸಿ ವಾಸ್ತವಕ್ಕೆ ತಂದು ನೋಡಿದಾಗ ಅದರಲ್ಲಿಯೂ ಲಿಂಗ ಅಸಮಾನತೆಯ ಅಂಶಗಳಿರುವುದು ಗೋಚರಿಸುತ್ತದೆ. ಈ ಯೋಜನೆಯು ಸಂಪೂರ್ಣವಾಗಿ ಮಹಿಳೆಯರನ್ನು ಕಡೆಗಾಣಿಸಿದೆ. "ಒಂದು ದೇಶ ಪ್ರದೇಶದಲ್ಲಿ ಅಭಿವೃದ್ಧಿಯು ಮಹಿಳೆಯರ ಬದುಕಿನ ಸ್ಥಿತಿಗತಿಗಳನ್ನು ಉತ್ತಮಪಡಿಸಿದೆಯೋ ಅಥವಾ ಹಾನಿಗೊಳ ಪಡಿಸಿದೆಯೋ ಎಂಬುದರ ಬಗ್ಗೆ ಭಾರತದಲ್ಲಿ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ತೀವ್ರ ರೀತಿಯ ಚರ್ಚೆ ೧೯೭೦ರ ದಶಕದ ಪ್ರಾರಂಭದಿಂದಲೂ ನಡೆಯುತ್ತಾ ಬಂದಿದೆ. "ಅಭಿವೃದ್ಧಿಯ ಪ್ರಕ್ರಿಯೆಯು ಮಹಿಳೆಯರ ಬದುಕಿನ ಸ್ಥಿತಿಗತಿಗಳನ್ನು ಹಾನಿಗೊಳಪಡಿಸಿದೆ. ಎಂಬ ಚರ್ಚೆಗೆ ಮೊದಲು ಚಾಲನೆ ನೀಡಿದವರು ಉಸ್ತರ್ ಬೋಸರಪ್ (೧೯೭೧). ಅಭಿವೃದ್ಧಿ ಪ್ರಕ್ರಿಯೆಯು ಮಹಿಳೆಯರ ಬದುಕಿನ

ಸ್ಥಿತಿಗತಿಗಳ ಮೇಲೆ ಹಾನಿಕಾರಕ ಪರಿಣಾಮ ಉಂಟು ಮಾಡುತ್ತಿದೆ ಎಂಬುದಕ್ಕೆ ಅದರ ಲಿಂಗ ನಿರಪೇಕ್ಷ ಸ್ವರೂಪಕ್ಕಿಂತ ಬೇರಾವ ಪುರಾವೆಯೂ ಬೇಕಾಗಿಲ್ಲ."(ಚಂದ್ರಶೇಖರ್ ಟಿ.ಆರ್., ಪು.೧೬೩)

"ಗಾಂಧೀಜಿಯವರ ಪ್ರಕಾರ ಒಂದು ಗ್ರಾಮ ಆದರ್ಶವಾಗಬೇಕಾದರೆ ಗ್ರಾಮದಲ್ಲಿ ನಿರುದ್ಯೋಗಿಗಳಿರಬಾರದು, ಯಾರೂ ಬೋಗದಲ್ಲಿ ಲೀಲಾಡುವವರೂ ಆಗಿರಬಾರದು. ಪ್ರತಿಯೊಬ್ಬರೂ ಶ್ರಮ ಜೀವನದಲ್ಲಿ ಪಾಲ್ಗೊಂಡು ತಮ್ಮ ಸೇವೆ ಸಲ್ಲಿಸುತ್ತಿರಬೇಕು. ಅಷ್ಟೇ ಅಲ್ಲದೆ ಅತ್ಯಂತ ಬುದ್ಧಿವಂತ ವ್ಯಕ್ತಿಗಳಾಗಿರಬೇಕು. ಸ್ವತಂತ್ರರಾದ ಸ್ತ್ರೀ-ಪುರುಷರಾಗಿ ಜಗತ್ತಿನ ಮಾನವರೆಲ್ಲರ ಸರಿಸಮಾನರಾಗಿ ಬಾಳುವಂಥವರಾಗಬೇಕು" ಎಂದು ಹೇಳುತ್ತಾರೆ(ಉದ್ಧೃತ : ಗಾಂಧೀಜಿ, ಬಡಿಗೇರ ಜಿ.ಎಲ್., ಪು.೨೧೩). ಈ ಗಾಂಧೀಜಿಯ ಕನಸು ನನಸಾಗಿಸಲು ಸರಕಾರವು ಹಲವಾರು ಯೋಜನೆಗಳನ್ನು ಜಾರಿಗೆ ತರುತ್ತಿದ್ದರೂ ಕೂಡ ಅವು ಯಾವುವೂ ಸಫಲವಾಗುತ್ತಿಲ್ಲ. ಇಂದಿನ ಅಭಿವೃದ್ಧಿ ಯೋಜನೆಗಳು ಏಕಮುಖಿ ಚಲನೆಯನ್ನು ಹೊಂದಿವೆ. ಅಂದರೆ ಕೇವಲ ಪುರುಷರನ್ನೊಳಗೊಂಡಂತೆ ಮಾತ್ರ ರೂಪಿತವಾಗುತ್ತಿವೆ. ಮಹಿಳೆಯರನ್ನು ಕಡೆಗಾಣಿಸುತ್ತಿವೆ. ಹಾಗಾಗಿ ಇಂದು ಅಭಿವೃದ್ಧಿ ಎಂಬುದನ್ನು ಸಮಾಜದಲ್ಲಿ ಅಂಚಿಗೆ ದೂಡಲ್ಪಟ್ಟ ವಂಚಿತರ-ನಿಕೃಷ್ಟರ ನೆಲೆಯಿಂದ ಅಭಿವೃದ್ಧಿಯನ್ನು ನಿರ್ವಚಿಸಬೇಕಾದ ಅಗತ್ಯತೆಯನ್ನು ಒತ್ತಿ ಹೇಳಲಾಗುತ್ತದೆ. ಈ ಕುರಿತಂತೆ ಆಶೀಶ್ ನಂದಿಯ ಹೇಳಿಕೆ ಹೀಗಿದೆ.

"one must choose the slave stand point not only because the slave is oppressed but also because he represents a higher- order cognition which preforce includes the master a human where as the master's cognition has to exclude. the slave except as a thing"(ಚಂದ್ರಶೇಖರ್ ಟಿ.ಆರ್., ಮಹಿಳೆ, ಆರ್ಥಿಕತೆ ಮತ್ತು ಅಭಿವೃದ್ಧಿ, ಪು.೧೫೦).

ಹೀಗೆ ಸಮಾಜದಲ್ಲಿ ಅಧಿಕಾರ ವಂಚಿತರ-ನಿಕೃಷ್ಟರ ನೆಲೆಯಿಂದ ತಮ್ಮ ವ್ಯಾಖ್ಯಾನವನ್ನು ನೀಡಿದ್ದಾರೆ. ಈ ಎಲ್ಲಾ ನಿಟ್ಟಿನಿಂದಲೂ ಸಹ ಇಂದು ಅಭಿವೃದ್ಧಿ ಎಂಬುದು ಕೇವಲ ಪುರುಷರನ್ನೊಳಗೊಂಡಂತೆ ರೂಪಿತವಾಗುತ್ತಿದೆ. ಈ ವ್ಯವಸ್ಥೆಯಿಂದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯು ಹೊರತಾಗಿಲ್ಲ. ಏಕೆಂದರೆ ಈ ಯೋಜನೆಯು ಸಮಾಜದ ಅಂಚಿನಲ್ಲಿರುವವರನ್ನು ಮೇಲೆತ್ತುವ ಉದ್ದೇಶವನ್ನು ಹೊಂದಿದ್ದರೂ ಸಹ ಸಮಾಜದ ರೂಢ-ನಿಯಮಗಳು ಸಂಪ್ರದಾಯಗಳು, ಪಿತೃಪ್ರಧಾನ ವ್ಯವಸ್ಥೆಯ ಚಿಂತನೆಗಳು ಮೇಲೇಳಲು ಬಿಡುತ್ತಿಲ್ಲ. ಹೀಗೆ ಮಾಡುವ ಸಂದರ್ಭದಲ್ಲಿ ಮಹಿಳೆಯರಿಗೆ ಹಲವು ಬಗೆಯ ಸಮಸ್ಯೆಗಳನ್ನು ತಂದೊಡ್ಡುತ್ತವೆ. ಈ ಹಿನ್ನೆಲೆಯಲ್ಲಿ ಉದ್ಯೋಗಖಾತ್ರಿ ಯೋಜನೆಯಲ್ಲಿ ಅಸಮಾನತೆಯ ನೆಲೆಗಳನ್ನು ಕಂಡುಕೊಳ್ಳುವ ಅಗತ್ಯತೆಯು ಇದೆ.

ಇಂದು ಈ ಯೋಜನೆಯ ಹಿಂದೆ ಬಂಡವಾಳಶಾಹಿ ಮತ್ತು ಪುರುಶಾಹಿಗಳೆರಡೂ ಆಳುತ್ತಿವೆ. ಹಾಗೂ ಸಮಾಜದ ಶ್ರೇಣೀಕೃತ ವ್ಯವಸ್ಥೆಯನ್ನು ರೂಪಿಸುವ ಚಾಲಕ ಶಕ್ತಿಗಳಾಗಿವೆ. ಬಂಡವಾಳ ಮತ್ತು ಶ್ರಮಗಳು ಬಂಡವಾಳಶಾಹಿಯ ಎರಡು ಮುಖ್ಯ ಅಂಶಗಳಾಗಿದ್ದರೆ ಪುರುಷರ ಮತ್ತು ಮಹಿಳೆಯರ ಶ್ರಮ ಪುರುಷಶಾಹಿಯ ಅಂಗವಾಗಿವೆ. ಇಲ್ಲಿ ಪುರುಷರ ಶ್ರಮವು ಶ್ರೇಷ್ಠ ಮತ್ತು ಮಹಿಳೆಯರ ಶ್ರಮವು ಕನಿಷ್ಠವಾಗಿದೆ. ಈ ನಿಟ್ಟಿನಲ್ಲಿ ಹೇಳುವುದಾದರೆ ಈ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಜಾರಿಗೆ ಬಂದು ಹಲವಾರು ವರ್ಷಗಳೇ ಕಳೆದರೂ ಸಹ ಇಂದಿಗೂ ಗ್ರಾಮೀಣ ಪ್ರದೇಶಗಳು ಅಭಿವೃದ್ಧಿಯ ಪಥದತ್ತ ಸಾಗುತ್ತಿಲ್ಲ. ಇದಕ್ಕೆ ಮುಖ್ಯ ಕಾರಣ ಮೇಲೆ ತಿಳಿಸಿದ ಅಂಶಗಳಾಗಿವೆ. ಹಿಂದೆಂದಿನಂತೆ ಇಂದು ಕೂಡ ಗಂಡು-ಹೆಣ್ಣು ಎನ್ನುವ ಜೈವಿಕ ಭಿನ್ನತೆಯನ್ನು ಆಧರಿಸಿ ಸಮಾಜದಲ್ಲಿ ಲಿಂಗ ಅಸಮಾನತೆಯನ್ನು ಸೃಷ್ಟಿಗೊಳಿಸಿರುವುದರೊಂದಿಗೆ ಶ್ರಮ ವಿಭಜನೆಯು ನಡೆಯುತ್ತಿದೆ. ಹೀಗೆ ಮಾಡುವುದರ ಹಿನ್ನಲೆಯಲ್ಲಿ ಅಧಿಕಾರ ಎಂಬುದು ಪುರುಷನ ಸ್ವತ್ತಾಗಿ ಹೋಗಿದೆ. ಹಾಗೂ ದುಡಿಮೆ ಎಂದರೆ ಕೇವಲ ಪುರುಷನದ್ದು ಮಾತ್ರವೇ ಎಂಬ ನಿಲುವುಗಳಿರುವುದರಿಂದ ಸಮಾಜದಲ್ಲಿ ಮಹಿಳೆಯರ ದುಡಿಮೆಗೆ ಬೆಲೆಯೇ ಇಲ್ಲದಂತಾಗಿದೆ. ಯೋಜನೆಯನ್ನು ರೂಪಿಸುವವರು ಪುರುಷರೇ ಆಗಿರುವುದರಿಂದ ಅವರಿಗೆ ಮಹಿಳೆಯರ ಸಮಸ್ಯೆಗಳೇನು ಎಂಬುದು ತಿಳಿದಿರುವುದಿಲ್ಲ. ಹಾಗಾಗಿ ಯೋಜನೆಯಲ್ಲಿ ಮಹಿಳೆಯರನ್ನು ನಿರಾಕರಿಸಲಾಗಿದೆ. ಇಂತಹ ಸಂಕೀರ್ಣ ಪರಿಸ್ಥಿತಿ ನಿರ್ಮಾಣವಾಗಲು ಉದ್ದೇಶಪೂರ್ವಕವಾಗಿಯೇ ಹೀಗೆ ಮಾಡಲಾಗಿದೆಯೇ ಅಥವಾ ವ್ಯವಸ್ಥೆಯ ಹಳೆಯ ನಿಯಮಗಳ ರೂಢಿಯಿಂದಾಗಿ ಅರಿವಿಲ್ಲದೆಯೇ ಬೆಳೆದು ಬಂದ ಸಾಮಾಜಿಕ ವ್ಯವಸ್ಥೆಯೇ ಎಂಬುದನ್ನು ತಿಳಿಯುವುದು ಇಲ್ಲಿ ಮುಖ್ಯವಾಗಿದೆ. ಇಲ್ಲಿ ಯೋಜನೆ ಎಂದರೇನು? ಯೋಜನೆಯನ್ನು ಜಾರಿಗೊಳಿಸುವಲ್ಲಿ ಇರಬಹುದಾದ ತೊಡರುಗಳೇನು? ಸ್ತ್ರೀ-ಪುರುಷರಿಗೆ ಸಮಾನ ಅವಕಾಶ ಹಾಗೂ ಸೌಲಭ್ಯಗಳು ಲಭ್ಯವಾಗುವುದರ ಬಗ್ಗೆ ಈ ಯೋಜನೆಯ ನಿಲುವುಗಳೇನು? ಈ ಯೋಜನೆಯಲ್ಲಿ ಮಹಿಳೆ ಭಾಗವಹಿಸುವಿಕೆಗೆ ಇರುವಂತಹ ತೊಂದರೆಗಳೇನು? ಮಹಿಳೆಯರು ಸ್ವಾವಲಂಬಿಗಳಾಗಲು ಅಥವಾ ಸಬಲರಾಗಲು ಈ ಯೋಜನೆ ಯಾವ ಮಹತ್ವದ ಪಾತ್ರವನ್ನು ವಹಿಸುತ್ತದೆ? ಹೀಗೆ ಹಲವಾರು ವಿಷಯಗಳನ್ನು ಲಿಂಗ ಸಂಬಂಧಿ ಅಧ್ಯಯನದ ಮೂಲಕ ತಿಳಿಯಬಹುದಾಗಿದೆ.

## ೧.೧. ಅಧ್ಯಯನದ ಉದ್ದೇಶ

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಗ್ರಾಮೀಣ ಮಟ್ಟದ ಜನರ ಜೀವನ ಮಟ್ಟ ಸುಧಾರಿಸುವ ಕನಸನ್ನು ಹೊಂದಿ ಜಾರಿಗೆ ಬಂದಿದೆ. ಆದರೆ ಇದು ನನಸಾಗುವುದು ತುಂಬಾ ಕಷ್ಟ. ಏಕೆಂದರೆ ಈ ಯೋಜನೆಯಲ್ಲಿ ಹಲಾವರು ಲೋಪದೋಷಗಳಿದ್ದು ಅವುಗಳಿಂದಾಗಿ ಇದು ಪರಿಪೂರ್ಣತೆಯನ್ನು ಸಾಧಿಸುವಲ್ಲಿ ತೊಡಕುಗಳನ್ನು ಎದುರಿಸುತ್ತದೆ. ಹಾಗಾಗಿ ಈ ಅಧ್ಯಯನವು ಈ

ಯೋಜನೆಯಲ್ಲಿನ ಲೋಪದೋಷಗಳನ್ನು ಎತ್ತಿ ಹಿಡಿದು ಎಲ್ಲೆಲ್ಲಿ ತೊಡಕುಗಳನ್ನು ಅನುಭವಿಸುತ್ತಿದೆ ಮತ್ತು ಜನರ ಜೀವನ ಮಟ್ಟ ಸುಧಾರಿಸಲು ಕೈಗೊಳ್ಳಬೇಕಾದ ಕ್ರಮಗಳೇನು ಎಂಬಂತಹ ಅಂಶಗಳನ್ನಿಟ್ಟುಕೊಂಡು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ.

೧. ಉದ್ಯೋಗ ಖಾತ್ರಿ ಯೋಜನೆಯ ಕಾರ್ಯಾನುಷ್ಠಾನದಲ್ಲಿನ ಲಿಂಗ ಅಸಮಾನತೆಯನ್ನು ಗುರುತಿಸುವುದರೊಂದಿಗೆ ಅದರ ಕಾರ್ಯ ಸ್ವರೂಪಗಳನ್ನು ಕುರಿತು ಅಧ್ಯಯನ ಮಾಡುವುದು.

೨. ಯೋಜನೆಯ ಲಿಂಗ ಸಂಬಂಧಿ ಅಧ್ಯಯನ ಮಾಡುವುದರ ಜೊತೆಗೆ ಸ್ತ್ರೀವಾದಿ ಹಿನ್ನಲೆಯ ಒಳನೋಟಗಳನ್ನು ಗುರುತಿಸಿ ವಿಶ್ಲೇಷಣೆಗೆ ಒಳಪಡಿಸುವುದು.

೩. ಗ್ರಾಮ ಪಂಚಾಯ್ತಿಗಳು ಈ ಯೋಜನೆಯ ಬಗ್ಗೆ ಜನರಿಗೆ ಅರಿವನ್ನು ಮೂಡಿಸಲು ಯಾವ ಕ್ರಮಗಳನ್ನು ಕೈಗೊಳ್ಳುತ್ತವೆ. ಮತ್ತು ಗ್ರಾಮ ಸಭೆಗಳಲ್ಲಿ ಮಹಿಳೆಯರ ಸಹಭಾಗಿತ್ವ ಎಷ್ಟಿದೆ ಎಂಬುದನ್ನು ತಿಳಿಯುವುದು.

೪. ಈ ಉದ್ಯೋಗ ಖಾತ್ರಿ ಯೋಜನೆಯು ಮಹಿಳೆಯರಿಗೆ ಯಾವ ರೀತಿಯ ಭದ್ರತೆಯನ್ನು (ಸಾಮಾಜಿಕವಾಗಿ, ರಾಜಕೀಯ, ಆರ್ಥಿಕವಾಗಿ) ಒದಗಿಸಿದೆ ಎಂಬುದನ್ನರಿಯುವುದು.

೫. ಉದ್ಯೋಗ ಖಾತ್ರಿ ಯೋಜನೆಯಲ್ಲಿ ಎಲ್ಲೆಲ್ಲಿ ಲಿಂಗ ತಾರತಮ್ಯವನ್ನು ಅನುಸರಿಸುತ್ತದೆ ಎಂಬುದನ್ನು ತಿಳಿಯುವುದು.

೬. ಸಂವಿಧಾನದ ನೀತಿ ನಿಯಮಗಳು, ಕಾಯಿದೆಗಳು ಈ ಯೋಜನೆಯಲ್ಲಿ ಎಷ್ಟರ ಮಟ್ಟಿಗೆ ಪಾಲಿತವಾಗುತ್ತಿವೆ ಮತ್ತು ಇವು ಮಹಿಳಾ ಪರವಾಗಿವೆಯೇ ಎಂಬುದನ್ನು ತಿಳಿಯುವುದು.

೭. ಉದ್ಯೋಗ ಖಾತ್ರಿ ಯೋಜನೆಯಲ್ಲಿ ಸರ್ಕಾರೇತರ ಸಂಘ-ಸಂಸ್ಥೆಗಳ ಮತ್ತು ಸ್ವ-ಸಹಾಯ ಸಂಘಗಳ ಪಾತ್ರದ ಬಗ್ಗೆ ತಿಳಿಯುವುದು.

೮. ಮಹಿಳೆಯರ ಅಭಿವೃದ್ಧಿ ಮತ್ತು ಮಹಿಳೆಯರ ಸಬಲೀಕರಣದಲ್ಲಿ ಈ ಯೋಜನೆಯ ಪಾತ್ರವೇನು ಎಂಬುದನ್ನರಿಯುವುದು.

೯. ಇತ್ತೀಚಿನ ದಿನಮಾನಗಳಲ್ಲಿ, ವಾಸ್ತವವಾಗಿ ಈ ಯೋಜನೆ ಯಾವ ಸ್ಥಿತಿಯಲ್ಲಿ ಇದೆ ಎಂಬುದನ್ನು ತಿಳಿಯುವುದು.

೧೦. ಈ ಯೋಜನೆಯು ಎಲ್ಲೆಲ್ಲಿ ತೊಡಕುಗಳನ್ನು ಎದುರಿಸುತ್ತದೆ. ಮತ್ತು ಈ ಯೋಜನೆಯ ದೋಷಗಳೇನು ಎಂಬುದನ್ನು ಲಿಂಗ ಸಂಬಂಧಿ ಅಧ್ಯಯನದ ಮೂಲಕ ತಿಳಿಯುವುದು ಮತ್ತು ಅವುಗಳಿಗೆ ಪರಿಹಾರಗಳನ್ನು ಸೂಚಿಸುವುದು.

ಹೀಗೆ ಮಹಿಳಾ ಅಧ್ಯಯನದ ನೆಲೆಗಳಲ್ಲಿ ಈ ಉದ್ಯೋಗ ಖಾತರಿ ಯೋಜನೆಯನ್ನು ವಿಶ್ಲೇಷಿಸುವುದು ಇದರ ಮುಖ್ಯ ಉದ್ದೇಶವಾಗಿದೆ.

## ೧.೩. ಅಧ್ಯಯನದ ವ್ಯಾಪ್ತಿ

ಉದ್ಯೋಗ ಖಾತರಿ ಯೋಜನೆಯ ವ್ಯಾಪ್ತಿ ಬಹಳ ವಿಸ್ತಾರವಾದುದು. ಇದು ರಾಜ್ಯ, ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮಗಳನ್ನು ಒಳಗೊಂಡಂತೆ ನಡೆಯುವ ಯೋಜನೆಯಾಗಿದೆ. ಸಧ್ಯ ಈ ಯೋಜನೆಯ ಅಧ್ಯಯನದ ವ್ಯಾಪ್ತಿಯನ್ನು ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನ ಅತ್ತನೂರು ಮತ್ತು ಗಣದಿನ್ನಿ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ಸೀಮಿತಗೊಳಿಸಲಾಗಿದೆ. ಈ ವ್ಯಾಪ್ತಿಯಲ್ಲಿ ಬರುವಂತಹ ನೂರಾರು ಜನರನ್ನು ಅಧ್ಯಯನಕ್ಕೆ ಒಳಪಡಿಸಿ ವಿಷಯಗಳನ್ನು ಸಂಗ್ರಹಿಸಲಾಗುವುದು.

## ೧.೩. ಅಧ್ಯಯನದ ವಿಧಿ-ವಿಧಾನಗಳು

ಸಂಶೋಧನೆ ಎಂಬುದು ಒಂದು ಹೊಸ ಸಿದ್ಧಾಂತವನ್ನು ಕಟ್ಟಿಕೊಡುವುದಾಗಿದೆ. ಮತ್ತು ಈ ಸಿದ್ಧಾಂತದಲ್ಲಿ ಹೊಸ ಹೊಸ ವಿಷಯಗಳನ್ನು ತಿಳಿಸುವುದಾಗಿದೆ. ಇದೊಂದು ಮುಖ್ಯವಾಗಿ ವಿಮರ್ಶಾತ್ಮಕ ಆಲೋಚನೆಯಾಗಿದ್ದು ಒಂದು ವಿಷಯವನ್ನು ಹಲವಾರು ದೃಷ್ಟಿಕೋನಗಳಿಂದ ನೋಡುವ ವಿಧಾನವಾಗಿದೆ. ಹಾಗಾಗಿ ಪ್ರಸ್ತುತ ಅಧ್ಯಯನವು ಉದ್ಯೋಗ ಖಾತರಿ ಯೋಜನೆಯಲ್ಲಿನ ಲಿಂಗ ಸಂಬಂಧಿ ಅಧ್ಯಯನದ ವಿಷಯವಾಗಿದ್ದು ಹೆಚ್ಚಾಗಿ ಕ್ಷೇತ್ರಕಾರ್ಯದ ಮಾಹಿತಿಯನ್ನು ಪ್ರಥಮ ಆಕರವಾಗಿ ಬಳಸಿಕೊಳ್ಳಲಾಗುವುದು. ಈ ಸಂದರ್ಭದಲ್ಲಿ ಸಂದರ್ಶನ, ಅವಲೋಕನ, ರಚಿತ ಮತ್ತು ಅರಚಿತ ಪ್ರಶ್ನಾವಳಿಗಳನ್ನು ಅಳವಡಿಸುವುದರ ಮೂಲಕ ಪರಿಮಾಣಾತ್ಮಕ ಮತ್ತು ಗುಣಾತ್ಮಕ ಸಂಶೋಧನಾ ವಿಧಾನಗಳ ಮೂಲಕ ವಿಷಯಗಳನ್ನು ಸಂಗ್ರಹಿಸಲಾಗುವುದು. ಹಾಗೂ ಆಕರ ಗ್ರಂಥಗಳು ಮತ್ತು ಪತ್ರಿಕಾ ಪ್ರಕಟಣೆಗಳನ್ನು ಪೂರಕ ಮಾಹಿತಿಗಾಗಿ ಬಳಸಿಕೊಂಡು ಅಧ್ಯಯನವನ್ನು ನಡೆಸಲಾಗಿದೆ.

## ೧.೪. ಅಧ್ಯಯನದ ಮಹತ್ವ

ಬಹಳ ಹಿಂದಿನಿಂದಲೂ ಸಮಾಜ ವ್ಯವಸ್ಥೆಯಲ್ಲಿ ಲಿಂಗ ತಾರತಮ್ಯ ಎನ್ನುವಂತಹದ್ದು ಬಲಿಷ್ಟವಾಗಿ ಬೆಳೆದು ನಿಂತಿದೆ. ಇದು ಸಹಜ ಪ್ರಕ್ರಿಯೆಯೇನಲ್ಲ. ಸ್ತ್ರೀಯರನ್ನು ತಮ್ಮ ಅಧೀನದಲ್ಲಿಯೇ ಇರಿಸಿಕೊಳ್ಳಬೇಕೆಂಬ ಪುರುಷ ಚಿಂತನೆಯಿಂದ ಈ ಲಿಂಗತಾರತಮ್ಯ ಎನ್ನುವಂತಹದ್ದು ಎಲ್ಲಾ ವಲಯಗಳಲ್ಲಿಯೂ ಗೋಚರಿಸುತ್ತಿದೆ. ಸಮಾಜ ವ್ಯವಸ್ಥೆಯಲ್ಲಿ ಪುರುಷ ಅಧಿಕಾರದ ಸ್ಥಾನದಲ್ಲಿದ್ದರೆ ಮಹಿಳೆ ಅಧಿಕಾರವನ್ನು ಕಳೆದುಕೊಂಡು ಪರಾಧೀನ ಸ್ಥಿತಿಯಲ್ಲಿದ್ದಾಳೆ. ಮತ್ತು ಮಹಿಳೆಯರನ್ನು

ಅನುಭೋಗಿಗಳು, ಪರಾವಲಂಬಿಗಳು, ಗೃಹ ಕೆಲಸಗಳಿಗೆ ಮಾತ್ರ ಸೀಮಿತವಾಗಿರಬೇಕು ಎಂಬಂತಹ ನಿಲುವುಗಳು ಇಂದಿನ ಆಧುನಿಕ ಯುಗದಲ್ಲಿಯೂ ಇರುವುದರಿಂದ ಅವರನ್ನು ಸಮಾಜವು ಎರಡನೇ ದರ್ಜೆಯವಳೆಂದೇ ಗುರುತಿಸುತ್ತಿದೆ. ಇಂತಹ ವ್ಯವಸ್ಥೆಗೆ ಸಮಾನತೆಯನ್ನು ಒದಗಿಸಿಕೊಡುವ ದೃಷ್ಟಿಯಿಂದ ಅಧ್ಯಯನ ಮಹತ್ವ ಪಡೆಯುತ್ತದೆ.

ಇಂದು ಸರಕಾರದ ಹಲವು ಯೋಜನೆಗಳು ಸಫಲ-ವಿಫಲತೆಗಳ ನಡುವೆ ಪರಿಪೂರ್ಣತೆಯನ್ನು ಸಾಧಿಸಿಕೊಳ್ಳಲಾಗದ ಸ್ಥಿತಿಯಲ್ಲಿವೆ. ಈ ಯೋಜನೆಗಳು ಕೇವಲ ಏಕಮುಖಿ ಚಲನೆಯನ್ನು ಹೊಂದಿರುತ್ತವೆ. ಅಂದರೆ ಪುರುಷನ ಪರವಾಗಿರುತ್ತವೆ ಮತ್ತು ಮಹಿಳೆಯನ್ನು ಸಂಪೂರ್ಣವಾಗಿ ಕಡೆಗಾಣಿಸಿರುತ್ತವೆ ಅಥವಾ ಉದಾರವಾದಿ ನೆಲೆಯಲ್ಲಿ ನೋಡುತ್ತಿರುತ್ತವೆ. ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯ ದುಡಿಮೆಯನ್ನು ಅಪಮೌಲ್ಯೀಕರಿಸಲಾಗಿದೆ. ಹಾಗಾಗಿ ಅವಳು ಆರ್ಥಿಕವಾಗಿ ಸ್ವಾತಂತ್ರ್ಯತೆಯನ್ನು ಪಡೆಯುವುದರಿಂದ ವಂಚಿತಳಾಗಿದ್ದಾಳೆ. ಈ ನಿಟ್ಟಿನಲ್ಲಿ ಉದ್ಯೋಗ ಖಾತರಿ ಯೋಜನೆಯಲ್ಲಿ ದುಡಿಯುವ ಮಹಿಳೆಯ ಬದುಕಿನ ಚಿತ್ರಣವನ್ನು ದಾಖಲಿಸಿ, ವಿಶ್ಲೇಷಣೆಗೆ ಒಳಪಡಿಸಿ, ಸ್ತ್ರೀವಾದಿ ಹಿನ್ನೆಲೆಯಲ್ಲಿ ಮಹಿಳಾ ದುಡಿಮೆಯನ್ನು ಅರ್ಥೈಸಿಕೊಂಡು ಮತ್ತು ನಿರ್ವಚಿಸುವ ಅನಿವಾರ್ಯತೆ ಇದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನವು ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ.

## ೧.೫. ಅಧ್ಯಯನದ ಸ್ವರೂಪ

"ಉದ್ಯೋಗ ಖಾತರಿ ಯೋಜನೆ : ಲಿಂಗ ಸಂಬಂಧಿ ಅಧ್ಯಯನ" ಎಂಬ ವಿಷಯದ ಮೇಲೆ ಸಂಶೋಧನೆಯನ್ನು ಕೈಗೊಂಡು ಅಧ್ಯಯನದ ಅನುಕೂಲಕ್ಕಾಗಿ ವಿಷಯ ವಸ್ತುವನ್ನು ಎಂಟು ಅಧ್ಯಾಯಗಳಲ್ಲಿ ವಿವರಿಸಲಾಗಿದೆ.

ಮೊದಲನೆಯ ಅಧ್ಯಾಯವು ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನದ ವಿಧಿ-ವಿಧಾನಗಳು, ಅಧ್ಯಯನದ ಮಹತ್ವ ಮತ್ತು ಸ್ವರೂಪಗಳನ್ನು ಒಳಗೊಂಡಿದೆ. ಈ ಮೂಲಕ ಸಂಶೋಧನೆಯ ಸ್ಥೂಲ ವಿವರಣೆಯನ್ನು ನೀಡಲಾಗಿದೆ.

ಎರಡನೆಯ ಅಧ್ಯಾಯವು ಕ್ಷೇತ್ರ ಪರಿಚಯವಾಗಿದ್ದು ಇದರಲ್ಲಿ ರಾಯಚೂರು ಜಿಲ್ಲೆಯನ್ನು ಮತ್ತು ಮಾನ್ವಿ ತಾಲೂಕು ಹಾಗೂ ಅಧ್ಯಯನದ ವ್ಯಾಪ್ತಿಗೆ ಬರುವ ಎರಡು ಗ್ರಾಮಪಂಚಾಯ್ತಿಗಳಾದ ಅತ್ತನೂರು ಮತ್ತು ಗಣದಿನ್ನಿ ಗ್ರಾಮಪಂಚಾಯ್ತಿಗಳ ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನಲೆಯನ್ನು ಕುರಿತಾಗಿದೆ.

ಮೂರನೆಯ ಅಧ್ಯಾಯವು ಗ್ರಾಮಪಂಚಾಯ್ತಿಯು ಯಾವ ರೀತಿ ಉಗಮವಾಯಿತು ಮತ್ತು ಅದರ ಬೆಳವಣಿಗೆ ಹಾಗೂ ಕಾರ್ಯಗಳನ್ನು ಒಳಗೊಂಡಿದೆ. ಹಾಗೆಯೇ ಇಂದಿನ ಸಂದರ್ಭದಲ್ಲಿ ಗ್ರಾಮ

ಪಂಚಾಯ್ತಿಗಳಲ್ಲಿ ಮಹಿಳೆಯರು ಯಾವ ರೀತಿ ಪಾಲ್ಗೊಳ್ಳುತ್ತಿದ್ದಾರೆ ಮತ್ತು ಗ್ರಾಮ ಪಂಚಾಯ್ತಿಗಳಲ್ಲಿ ಅಧಿಕಾರವನ್ನು ಹೇಗೆ ವಿಕೇಂದ್ರೀಕರಿಸಲಾಗಿದೆ ಎಂಬಂತಹ ವಿಷಯಗಳನ್ನು ಒಳಗೊಂಡಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಅಭಿವೃದ್ಧಿ ಯೋಜನೆಗಳನ್ನು ಈ ಹಿಂದೆ ಬಹಳಷ್ಟು ಜಾರಿಗೆ ಬಂದಿದ್ದರೂ ಸಹ ಅವುಗಳು ವಿಫಲತೆಯನ್ನು ಅನುಭವಿಸಿದವು. ಹಾಗಾಗಿ ಈ ಅಭಿವೃದ್ಧಿ ಯೋಜನೆಗಳು ಯಾವುವು ಮತ್ತು ಅವುಗಳ ಗುರಿ ಉದ್ದೇಶಗಳು ಏನಾಗಿದ್ದವು ಮತ್ತು ಮುಖ್ಯವಾಗಿ ಮಹಿಳೆಯರಿಗೆ ಈ ಯೋಜನೆಗಳು ಯಾವ ರೀತಿಯ ಸೌಲಭ್ಯಗಳನ್ನು ಒದಗಿಸಿದ್ದವು ಎಂಬಂತಹ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತವೆ.

ಐದನೆಯ ಅಧ್ಯಾಯವು "ಉದ್ಯೋಗ ಖಾತರಿ ಯೋಜನೆ ಮತ್ತು ಮಹಿಳೆ" ಎಂಬುದಾಗಿದ್ದು ಇದರಲ್ಲಿ ಈ ಯೋಜನೆಯು ಏಕೆ ಜಾರಿಗೆ ಬಂದಿತು ಅದರ ಚಾರಿತ್ರಿಕ ಹಿನ್ನಲೆ ಏನು ಎಂಬುದನ್ನು ಹಾಗೂ ಕರ್ನಾಟಕದಲ್ಲಿ ಈ ಯೋಜನೆ ಯಾವ ರೀತಿ ಸಂಪೂರ್ಣ ವಿವರವನ್ನು ನೀಡಲಾಗಿದೆ. ಹಾಗೆಯೇ ಮಹಿಳೆಗೆ ಸಂಬಂಧಿಸಿದಂತೆ ಈ ಯೋಜನೆ ಎಷ್ಟು ಅನುಕೂಲ ಮತ್ತು ಅನಾನುಕೂಲತೆಯನ್ನು ಒದಗಿಸಿದೆ ಎಂಬುದನ್ನು ಒಳಗೊಂಡಿದೆ.

ಆರನೆಯ ಅಧ್ಯಾಯವು "ಪ್ರಕರಣ ಅಧ್ಯಯನ"ವಾಗಿದ್ದು ಸಂಶೋಧನೆಯ ವ್ಯಾಪ್ತಿಗೆ ಒಳಪಡುವ ಅತ್ತನೂರು ಮತ್ತು ಗಣದಿನ್ನಿ ಗ್ರಾಮಪಂಚಾಯ್ತಿಗಳ ವ್ಯಾಪ್ತಿಯಲ್ಲಿ ಬರುವ ಜನರೊಂದಿಗೆ ಮಾಡಿದಂತಹ ಸಂದರ್ಶನಗಳನ್ನು ಒಳಗೊಂಡಿದೆ. ಹಾಗೆಯೇ ಕ್ಷೇತ್ರಕಾರ್ಯದ ಸಂಪೂರ್ಣ ವಿಷಯಗಳನ್ನು ಈ ಅಧ್ಯಾಯವು ಒಳಗೊಂಡಿದೆ.

ಏಳನೆಯ ಅಧ್ಯಾಯವು ಯೋಜನೆಯಲ್ಲಿ ಲಿಂಗ ಅಸಮಾನತೆಯ ಅಂಶಗಳು ಎಲ್ಲೆಲ್ಲಿ ಒಳಗೊಂಡಿವೆ ಮತ್ತು ಈ ಲಿಂಗ ಅಸಮಾನತೆಯಿಂದ ಮಹಿಳೆಯರ ಮೇಲೆ ಏನೇನು ಪರಿಣಾಮಗಳು ಬೀರಿವೆ. ಹಾಗೆಯೇ ಅತ್ತನೂರು ಮತ್ತು ಗಣದಿನ್ನಿ ಗ್ರಾಮ ಪಂಚಾಯ್ತಿಗಳ ವ್ಯಾಪ್ತಿಯಲ್ಲಿ ಯಾವ ಯಾವ ಕಾಮಗಾರಿಗಳು ಜಾರಿಯಲ್ಲಿವೆ ಹಾಗೂ ಎಷ್ಟು ಜನರು ಈ ಯೋಜನೆಯಲ್ಲಿ ತೊಡಗಿಕೊಂಡಿದ್ದಾರೆ ಎಂಬಂತಹ ವಿಷಯಗಳನ್ನು ಒಳಗೊಂಡಿದೆ. ಹಾಗೆಯೇ ಸ್ತ್ರೀವಾದಿ ಹಿನ್ನಲೆಯಲ್ಲಿ ಮಹಿಳೆಯ ದುಡಿಮೆಯನ್ನು ಪರಿಭಾವಿಸುವ ಅಂಶಗಳನ್ನು ಈ ಅಧ್ಯಾಯವು ಒಳಗೊಂಡಿದೆ.

ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು ಅಧ್ಯಯನದಿಂದ ಕಂಡುಕೊಂಡ ಫಲಿತಗಳು ಮತ್ತು ಅವುಗಳ ಸಲಹೆಗಳನ್ನು ಒಳಗೊಂಡಿದೆ.

# ಅಧ್ಯಾಯ ೨

# ಕ್ಷೇತ್ರ ಪರಿಚಯ

೨.೧. ಮಾನ್ವಿ ತಾಲೂಕಿನ ಚಾರಿತ್ರಿಕ ಇತಿಹಾಸ

೨.೨. ಮಾನ್ವಿಯ ಭೌಗೋಳಿಕತೆ

೨.೩. ಮಾನ್ವಿಯ ಮೂಲ

೨.೪. ಭೌಗೋಳಿಕ ಅಂಕಿ ಅಂಶಗಳು

೨.೫. ಮಾನ್ವಿ ತಾಲೂಕಿನ ಸ್ಥಳನಾಮಗಳು

೨

# ಕ್ಷೇತ್ರ ಪರಿಚಯ

ಐತಿಹಾಸಿಕ ಪ್ರಸಿದ್ಧವಾದ ರಾಯಚೂರು ಜಿಲ್ಲೆಯು ಭಾರತದ ಮತ್ತು ಕರ್ನಾಟಕದ ಚರಿತ್ರೆಯಲ್ಲಿ ತನ್ನದೇಯಾದ ಹತ್ತು-ಹಲವು ವೈಶಿಷ್ಟ್ಯಗಳಿಂದ ಮಹತ್ವದ್ದಾಗಿದೆ. ಕ್ರಿ.ಪೂ.೨೦೦೦ ವರ್ಷಗಳಷ್ಟು ಪ್ರಾಚೀನವಾದ ಇತಿಹಾಸವನ್ನು ಹೊಂದಿದ್ದು, ಹಳೆಯ ಶಿಲಾಯುಗದ ಸಂಸ್ಕೃತಿಯಿಂದ ಪ್ರಾರಂಭವಾಗಿ ಕರ್ನಾಟಕದ ಎಲ್ಲಾ ಅರಸು ಮನೆತನಗಳ ಆಳ್ವಿಕೆಯ ಪರಂಪರೆಯನ್ನು ಮೈಗೂಡಿಸಿಕೊಂಡು ವಿಭಿನ್ನವಾಗಿ ಅಸ್ಥಿತ್ವವನ್ನು ಕಾಯ್ದುಕೊಂಡಿದೆ. ಬ್ರಿಟಿಷರ ಅಧಿಕಾರದ ವಿರುದ್ಧ ಹಾಗೂ ಹೈದರಾಬಾದ್ ನಿಜಾಮನ ದಬ್ಬಾಳಿಕೆಯ ಸರಕಾರದ ವಿರುದ್ಧ ನಡೆದಂತಹ ಸ್ವಾತಂತ್ರ್ಯ ಸಂಗ್ರಾಮದಲ್ಲಿ ರಾಯಚೂರು ಮುಖ್ಯ ಪಾತ್ರವನ್ನು ವಹಿಸಿತ್ತು. ಜಿಲ್ಲೆಯ ಬೇರೆ ಬೇರೆ ಕಡೆಗಳಲ್ಲಿ ದೊರೆತ ಶಿಲಾಶಾಸನಗಳು, ಅಳಿದುಳಿದು ನಿಂತಿರುವ ಕೋಟೆ ಕೊತ್ತಲಗಳು ಹಾಗೂ ದೇವಸ್ಥಾನಗಳು ಈ ಜಿಲ್ಲೆಯ ಇತಿಹಾಸವನ್ನು ಎತ್ತಿ ಹೇಳುತ್ತವೆ.

ರಾಯಚೂರು ಜಿಲ್ಲೆಯು ಕೃಷ್ಣ ತುಂಗೆಯರ ಮಂಗಳ ಅಂಗಳ, ಎಡೆದೊರೆ ನಾಡು ಹಾಗೂ ದೋಅಬ್ ಎಂದು ಪ್ರತೀತಿ ಪಡೆದ ಪ್ರದೇಶವಾಗಿದೆ. ದೋಅಬ್ ಎಂದರೆ ಎರಡು ನದಿಗಳ ನಡುವಿನ ಪ್ರದೇಶ. ಈ ಜಿಲ್ಲೆಯು ಕರ್ನಾಟಕದ ಈಶಾನ್ಯ ಭಾಗದ ಎತ್ತರ ತಪ್ಪಲು ಪ್ರದೇಶದಲ್ಲಿ ನೆಲಸಿದೆ. ಬಂಡೆಗಲ್ಲುಗಳ ಪರ್ವತಗಳಿಂದ, ಗಿಡಮರಗಳಿಲ್ಲದ ಬಯಲು ಭೂಮಿಯಿಂದ ಕೂಡಿದ ಒಣಹವೆ ಹಾಗೂ ಕಪ್ಪು ಮಣ್ಣಿನಿಂದ ಕೂಡಿದ ಫಲವತ್ತಾದ ಪ್ರದೇಶವಾಗಿದೆ. ಸಮುದ್ರ ಪಾತಳಿಯಿಂದ ಇದರ ಸಾಮಾನ್ಯವಾದ ಎತ್ತರ ೧೩೧೧ ಅಡಿ ಇರುತ್ತದೆ. ಈ ಜಿಲ್ಲೆಯು ಉತ್ತರದಲ್ಲಿ ಕಲಬುರ್ಗಿ, ಪಶ್ಚಿಮದಲ್ಲಿ ವಿಜಾಪುರ ಹಾಗೂ ಧಾರವಾಡ, ಪೂರ್ವದಲ್ಲಿ ಆಂಧ್ರ ಪ್ರದೇಶದ ಮೆಹಬೂಬನಗರ ಜಿಲ್ಲೆ ಹಾಗೂ ದಕ್ಷಿಣದಲ್ಲಿ ಕರ್ನೂಲು ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಗಳಿಂದ. ಆವೃತ್ತವಾಗಿದೆ. ಕೃಷ್ಣ ನದಿಯು ಈ ಜಿಲ್ಲೆಯ ಉತ್ತರ ಹಾಗೂ ತುಂಗಭದ್ರಾ ನದಿಯು ದಕ್ಷಿಣ ಮೇರೆಗಳಾಗಿವೆ(ಮೃತ್ಯುಂಜಯ ಹೊರಕೇರಿ ಮತ್ತು ಬಸವಲಿಂಗ ಸೊಪ್ಪಿಮಠ(ಸಂ), ೨೦೦೫ ರಾಯಚೂರು ಜಿಲ್ಲಾ ದರ್ಶನ, ಪು.೧). ಎಡೆದೊರೆ ಎಂಬುದು ಎರಡು ಸಾವಿರ ಗ್ರಾಮಗಳ, ಆಡಳಿತವನ್ನು ಹೇಳುತ್ತದೆ. ಆದರೆ ಏನೇ ಆಗಲಿ 'ಎಡೆದೊರೆ' ನಾಡಾಗಿ ಮುಸ್ಲಿಮರ ಕಾಲಕ್ಕೆ 'ದೋ ಅಬ್' ಆಗಿ ಚೆನ್ನಕ್ಕೆ ಹೆಸರಾಗಿರುವಂತೆಯೇ ಹತ್ತಿಯ ಕಣಜ,

ರತ್ನದ ಬೀಡಾಗಿರುವ ರಾಯಚೂರು ಪರಿಸರದ ಸಾಂಸ್ಕೃತಿಕ ಪುಟಗಳು ತೆರೆದುಕೊಳ್ಳುವುದು ಹಳೆ ಶಿಲಾಯುಗದಿಂದ ಎಂಬುದಕ್ಕೆ ಪಿಕಳಿಹಾಳ್, ಲಿಂಗಸೂಗೂರು ತಾಲೂಕಿನ ಮಸ್ಕಿ, ಮಾನವಿ ತಾಲೂಕಿನ ಏಟಗಲ್, ಕಲ್ಲೂರಿನಲ್ಲಿ ದೊರೆತ ಉತ್ಖನನದ ಅವಶೇಷಗಳೇ ಸೂಕ್ತ ನಿದರ್ಶನಗಳಾಗಿವೆ. ರಾಯಚೂಗು ಜಿಲ್ಲೆಯ ಲಿಂಗಸೂಗುರು ತಾಲೂಕಿನ ಮಸ್ಕಿ ಪ್ರದೇಶವು ತನ್ನದೇ ಆದ ಐತಿಹಾಸಿಕ ಹಿನ್ನೆಲೆ ಮತ್ತು ವೈಶಿಷ್ಟ್ಯತೆಯನ್ನು ಪಡೆದಿದೆ. ದೇವನಾಂಪ್ರಿಯ ಅಶೋಕ ಮಸ್ಕಿಯ ಅಶೋಕ ಶಾಸನವಂತೂ ಭಾರತೀಯ ಇತಿಹಾಸ ಸಂದರ್ಭದಲ್ಲಿಯೇ ಅಪೂರ್ವವಾದದ್ದು, ಅಂತಯೇ ದೇವನಾಂಪ್ರಿಯನೆಂದರೆ ಅಶೋಕನೆ ಎಂಬುದನ್ನು ಸಾಬೀತುಪಡಿಸಿದ ವಿಶಿಷ್ಟ ಶಾಸನ ಪರಿಸರದ ತುಂಬ ಶಾಸನಗಳು ದೇವಾಲಯಗಳು ಯಥೇಚ್ಛವಾಗಿ ತುಂಬಿಕೊಂಡಿವೆ. ದೇವದುರ್ಗ ತಾಲೂಕಿನ ಹೇಮಗಲ್ (ಹೇಮನೂರು)ನಲ್ಲಿ ವೀರಗಲ್ , ಮಾಸ್ತಿಕಲ್ಲು, ಹಲವು ಶಾಸನಗಳು ಹಳ್ಳದಲ್ಲಿ ಅಸಂಖ್ಯಾತವಾಗಿ ಅನಾಥವಾಗಿ ಬಿದ್ದಿವೆ. ಇಲ್ಲಿಯ ಶಾಸನಗಳು ವಿವಿಧ ರಾಜರ ಆಳ್ವಿಕೆಯ ವಿವರವನ್ನು ಸ್ಪಷ್ಟಪಡಿಸುತ್ತವೆ. ಈ ಪರಿಸರದ ಸಾಂಸ್ಕೃತಿಕ ಚಿತ್ರಣ ಸ್ವರೂಪವನ್ನು ಬಿಂಬಿಸುತ್ತವೆ. ಮದ್ಯಕಾಲದ ಸಂದರ್ಭವಲ್ಲಂತೂ ದೂರದ ದೆಹಲಿ ಅನುಭವಿಸಿದ್ದನ್ನೇ ರಾಯಚೂರು ಕೂಡ ಅನುಭವಿಸಿತ್ತು. ಏಕೆಂದರೆ ಶ್ರೇಷ್ಠ ಮೊಗಲರು ಈ ಪ್ರದೇಶವನ್ನು ಮುಖ್ಯ ಕೇಂದ್ರವಾಗಿರಿಸಿಕೊಂಡು ಆಳ್ವಿಕೆ ನಡೆಸಿದ್ದರು. ಅನಂತರದಲ್ಲಿ ಬೆಳೆದು ಬಂದ ರಾಜಕೀಯ ರಂಗ ರಣರಂಗವಾಗಿಯೇ ಈ ಪರಿಸರದ ಸ್ವಾಸ್ಥ್ಯವನ್ನು ಹದಗೆಡಿಸಿತ್ತು. ವಿಜಯನಗರದ ಅರಸರು, ಬಹಮನಿ ಸುಲ್ತಾನರು, ಆದಿಲ್ ಶಾಹಿಗಳ ಪರಸ್ಪರ ಮುಖಾಮುಖಿಯಿಂದಾಗಿ ಸುಮಾರು ಹದಿನಾಲ್ಕರಿಂದ ಹದಿನಾರನೇಯ ಶತಮಾನದವರೆಗೆ ಉಸಿರು ಬಿಗಿಹಿಡಿದುಕೊಂಡು ಬದುಕುವ ವಾತಾವರಣ ಇಲ್ಲಿ ನಿರ್ಮಾಣವಾಗಿತ್ತು. ಕತ್ತಿಯ ಕೆಳಗಡೆ ಕಾಲ ಕಳೆಯುವ ಇಲ್ಲಿಯ ಜನರಿಗೆ ಯುದ್ಧಗಳು ದಿನಗಳೆದಂತೆ ಅವರ ಬದುಕನ್ನು ಜರ್ಜರಿತಗೊಳಿಸಿದವು. ಇಂತಹವುಗಳ ಮಧ್ಯೆಯೇ ಹಲವು ಕೋಟೆಗಳು ನಿರ್ಮಾಣಗೊಂಡು ಇಲ್ಲಿಯ ಜನರು ಭಯ ಭೀತರಾಗಿ ಜೀವಿಸುವಂತಹ ಕಾಲ ಆದಾಗಿತ್ತು. ಇಂತಹ ಸಂಘರ್ಷಮಯ ವಾತಾವರಣದಲ್ಲಿಯೇ ಮುಸ್ಲಿಂ ಕ್ರೈಸ್ತ ಕುಟುಂಬಗಳ ಸಮನ್ವಯ - ಸಹಕಾರದ ಸನ್ನಿವೇಶಗಳು ಇಲ್ಲಿ ನಿರ್ಮಾಣವಾಗಿದ್ದವೆಂಬುದಕ್ಕೆ ಮುದಗಲ್ ನ ದಿವಾನ್ ದಿಲಾವರ್ ಖಾನ್ ಹಾಗೂ ಕ್ರೈಸ್ತ ಧರ್ಮದ ಪ್ರಚಾರಕ ಫ್ರಾನ್ಸಸ್ -ಡಿ-ಆಲ್ಮೋಡಾರ್ ಆತ್ಮೀಯ ಸ್ನೇಹವೇ ನಿದರ್ಶನ. ಈ ಸಮನ್ವಯತೆ ಸಹಿಸದ ಮತಿಯರಿಂದಲೇ ಇವರುಗಳು ಸಾಕಷ್ಟು ನೋವು ಅನುಭವಿಸಿದರೆಂಬ ಸಂಗತಿಗಳು ನಮಗೆ ಕ್ಯಾಪ್ಟನ್ ಮೆಡೋಸ್ ಟೇಲರ್ ಬರೆದ 'ಸ್ಮೃತಿ ಪತ್ರಗಳು' 'ನೋಬಲ್ ಕ್ವೀನ್' ಬರಹಗಳ ಆಧಾರದಿಂದ ಪಡೆದುಕೊಳ್ಳಬಹುದಾಗಿದೆ.

ಅಂತೆಯೇ ಜಲದುರ್ಗದ ಐತಿಹಾಸಿಕತೆಯ ವಿವರಗಳ ಬೆನ್ನು ಹತ್ತಿದರೆ ಅಪೂರ್ವ ಸಾಂಸ್ಕೃತಿಕ ಪರಿಸರವೇ ನಮ್ಮ ಕಣ್ಮುಂದೇ ಬರುತ್ತದೆ. ಮತಾಂದನಾಗಿದ್ದ ಉಸ್ಮಾನ್ ಬೇಗ್ ಅಧಿಕಾರಿಯಾಗಿದ್ದ

ಜಲದುರ್ಗದಲ್ಲಿಯೇ 'ಕೋಡೆಕಲ್ ಬಸವಣ್ಣ'ನಂತಹ ಶರಣರು ಬದುಕಿ ಅಪೂರ್ವ ಶರಣ ಸಾಹಿತ್ಯ ಸೃಷ್ಟಿಸಿದರೆಂಬುದೇ ದೊಡ್ಡ ಆಶ್ಚರ್ಯ. ಅಂತೆಯೇ ಧರವೇಷನಂತಹ ನೈತಿಕ, ಸಾತ್ವಿಕ ಮುಸಲ್ಮಾನ ಜೊಹರಾಳಂತಹ ಮಮತಾಮಯಿ ಹಲವು ದಿನಗಳ ಕಾಲ ಕಳೆದದ್ದು ಜಲದುರ್ಗದಲ್ಲಿಯೇ. ಶರಣ ಚಳುವಳಿಯು ಆರಂಭಿಕ ಸಿದ್ಧತಾ ಹಂತಗಳು ಮೂಡಿದ್ದು ಈ ಪರಿಸರದ ನೆಲದಿಂದಲೇ ದಾಸ ಸಾಹಿತ್ಯ ತವನಿಧಿಯಾಗಿ ಬೆಳೆದು ಕನ್ನಡ ಸಾಹಿತ್ಯದಲ್ಲಿ ದಾಸ ಸಾಹಿತ್ಯಕ್ಕೆ ಹೊಸ ತಿರುವನ್ನು ಮೂಡಿಸಿದ್ದು ರಾಯಚೂರು ಜಿಲ್ಲೆಯ ಮಾನವಿ ಪರಿಸರದಾಗಿದೆ ಎಂದರೆ ಅತಿಶಯೋಕ್ತಿಯಲ್ಲ. ಈ ರೀತಿಯ ಐತಿಹಾಸಿಕ ಹಿನ್ನಲೆಯನ್ನು ಹೊಂದಿರುವಂತಹ ರಾಯಚೂರು ಜಿಲ್ಲೆಯು ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕು ಸುಮಾರು ವರ್ಷಗಳು ಕಳೆದರೂ ಕೂಡ ಇಂದಿಗೂ ಬರಪೀಡಿತ ಪ್ರದೇಶವಾಗಿರುವುದು ಕಂಡುಬರುತ್ತದೆ. ಇಲ್ಲಿನ ಜನರು ಬಡತನ ನಿರುದ್ಯೋಗದಂತಹ ಸಮಸ್ಯೆಗಳಿಂದ ಬಿಡಿಸಿಕೊಳ್ಳಲಾರದಂತಹ ಪರಿಸ್ಥಿತಿಯನ್ನೇ ಹೊಂದಿದ್ದಾರೆ. ಇಲ್ಲಿ ಭೂಮಾಲಿಕರು ಹೆಚ್ಚಾಗಿದ್ದು ಬಡ ಕೂಲಿಕಾರ್ಮಿಕರನ್ನು ಶೋಷಿಸುವುದು ಕಂಡುಬರುತ್ತದೆ. ಹೀಗಾಗಿ ಈ ಭೂಮಾಲೀಕರ ವಿರುದ್ಧ ಹಾಗೂ ಬಂಡವಾಳಶಾಹಿಗಳ ವಿರುದ್ಧ ಹೋರಾಡುವುದರ ಸಲುವಾಗಿ ಎಡಪಂಥೀಯ ಚಿಂತನೆಗಳನ್ನು ಹೊಂದಿರುವಂತಹ ಅಥವಾ ನಕ್ಸಲೈಟ್ ಹಿನ್ನೆಲೆಯನ್ನು ಹೊಂದಿರುವಂತಹ ರೈತ ಕೂಲಿ ಕಾಮಿರಕರ ಸಂಘವು ಹುಟ್ಟಿಕೊಂಡಿದೆ. ಇದು ೧೯೭೦ರ ದಶಕದಲ್ಲಿ ರೈತರನ್ನು ಸಂಘಟಿಸುವುದರಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಿತ್ತು. ಈ ಸಂಘವು ರಾಜಕೀಯವಾಗಿ ಸಿ.ಪಿ.ಐ(ಎಂ.ಎಲ್) ಪೀಪಲ್ಸ್ ವಾರ್ ಗ್ರೂಪ್ ಎನ್ನುವ ಸಂಘಟನೆಯೊಂದಿಗೆ ಗುರುತಿಸಿಕೊಂಡಿದೆ. ಇದರ ಜೊತೆ ಜೊತೆಗೆ ಪಿ.ಡಬ್ಲ್ಯೂ.ಜಿ.ಯ ಇನ್ನಿತರ ಘಟಕಗಳಾದ ಕರ್ನಾಟಕ ವಿಮೋಚನಾ ರಂಗ ಪೀಪಲ್ಸ್ ಡೆಮಾಕ್ರೆಟಿಕ್ ಫಾರಂ, ಪ್ರಗತಿಪರ ವಿದ್ಯಾರ್ಥಿ ಕೇಂದ್ರ ಹಾಗೂ ಪ್ರಗತಿಪರ ಯುವಜನ ಸಂಘಗಳ ಸಹಕಾರಗಳೊಂದಿಗೆ ರೈತರ ಸಮಸ್ಯೆಗಳಿಗೆ ತನ್ನದೇ ಆದ ರೀತಿಯಲ್ಲಿ ಪರಿಹಾರ ಕಂಡುಕೊಳ್ಳಲು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಈ ಸಂಸ್ಥೆಗಳ ಮುಖವಾಣಿಯಾದ ಜನವಿಮುಕ್ತಿ (ಸೆಪ್ಟೆಂಬರ್ ೧೯೯೮) ಪ್ರಕಾರ ಕರ್ನಾಟಕ ರೈತ ಕೂಲಿ ಸಂಘದ ಹೋರಾಟವು ರೈತ ಕೂಲಿಗಳಲ್ಲಿ ಸ್ವಾಭಿಮಾನದ ಕಿಚ್ಚನ್ನು ಹಚ್ಚಿ ಹೋರಾಟಕ್ಕೆ ಪ್ರೇರೆಪಿಸಿರುವುದಷ್ಟೇ ಅಲ್ಲ ತನ್ನ ಸ್ಪಷ್ಟ ಸೈದಾಂತಿಕ ತಿಳುವಳಿಕೆಯ ಮೂಲಕ ಭೂ ಮಾಲಿಕತ್ವವನ್ನು ಸಂರಕ್ಷಿಸುತ್ತಿರುವ ಪ್ರಭುತ್ವದ ಸ್ವರೂಪವನ್ನು ಬದಲು ಮಾಡುತ್ತವೆ. ಈ ಹಿಂದೆಯೇ ತಿಳಿಸಿದಂತಹ ಸಂಘಟನೆಗಳೆಲ್ಲವು ನಕ್ಸಲೈಟ್ ಸಿದ್ಧಾಂತ ಹಿನ್ನೆಲೆಯಲ್ಲಿಯೇ ತಮ್ಮ ಚಟುವಟಿಕೆಗಳನ್ನು ನಡೆಸುತ್ತದೆ. ಏಕೆಂದರೆ ರಾಯಚೂರಿನಲ್ಲಿ ಸಮಸ್ಯೆ ಇರುವುದು ಭೂಮಾಲಿಕರಿಗೂ ಅಥವಾ ಬಂಡವಾಳಶಾಹಿಗಳಿಗೂ ಮತ್ತು ಕೃಷಿ ಕೂಲಿಕಾರರಿಗೆ ಇರುವುದರಿಂದ ಹೆಚ್ಚಾಗಿ ಕಾರ್ಮಿಕರು ದಂಗೆ ಏಳುವುದು ಸಹಜವಾಗಿದೆ. ಇದಕ್ಕೆ ಸಂಘಟನೆಗಳು ಬೆಂಬಲ ಸೂಚಿಸುತ್ತಿರುವುದು ಅಷ್ಟೇ ಪ್ರಮುಖವಾಗಿದೆ. ಇದಕ್ಕೆ ಒಂದು ಉತ್ತಮ ಉದಾಹರಣೆಯೆಂದರೆ "ಸಿ.ಪಿ.ಡಿ.(ಎಂ.ಎ) ರೆವಲ್ಯೂಷನರಿ

ಯೂತ್ ಫೆಡರೇಷನ್ (ಆರ್.ವೈ.ಎಫ್) ಎನ್ನುವ ನಕ್ಸಲೈಟ್ ಸಿದ್ಧಾಂತದ ಹಿನ್ನೆಲೆಯಲ್ಲಿ ಚಟುವಟಿಕೆಗಳನ್ನು ನಡೆಸುತ್ತಿರುವ ಸಂಸ್ಥೆ ದಲಿತ ಪರವಾದ ಭೂ ಹೋರಾಟಗಳನ್ನು ಇದು ಕೈಗೆತ್ತಿಕೊಂಡಿದೆ. ೧೯೯೫ರ ನೆಂಬರ್ ೧೩ರಂದು ರಾಯಚೂರು ಜಿಲ್ಲೆಯ ಸಿಂಧನೂರಿನಲ್ಲಿ ೮೦೦ ಎಕರೆ ಅರಣ್ಯ ಭೂಮಿಯನ್ನು ವಶಪಡಿಸಿಕೊಂಡು ಆರ್.ವೈ.ಎಸ್. ಭೂರಹಿತರಿಗೆ ಹಂಚಬೇಕು. ರೈತ ಹೋರಾಟಗಾರರನ್ನು ಈ ಸಂದರ್ಭದಲ್ಲಿ ಉದ್ದೇಶಿಸಿ ಮಾತನಾಡಿದ ಆರ್.ವೈ.ಎಫ್.ನಾಯಕ ಮಾನಸಯ್ಯನವರು ಇದು ನಕ್ಸಲ್ ಬರಿ ಹೋರಾಟದ ಮುಂದುವರಿಕೆಯೆಂದು ಹೇಳಿದರು. ಪುಟ್ಟಯ್ಯನವರನ್ನು ಉದ್ಧರಿಸುವುದಾದರೆ ಭೂ ಹೋರಾಟಗಳು ತೀವ್ರವಾದಷ್ಟು ಇದರ ವ್ಯತಿರಿಕ್ತ ಪರಿಣಾಮಗಳು ದಲಿತರ ಕೊಲೆ, ಹತ್ಯೆ, ಅತ್ಯಾಚಾರಗಳಲ್ಲಿ ಪ್ರಕಟಗೊಂಡಿವೆ. ಅವರ ಪ್ರಕಾರ ೧೯೭೬ರಲ್ಲಿ ಇಂತಹ ೫೯೬೮ ಘಟನೆಗಳು ನಡೆದಿದ್ದರೆ, ೧೯೭೭ರಲ್ಲಿ ೧೦೮೭೬ ಪ್ರಕರಣಗಳು ನಡೆದ ವರದಿಯಾಗಿವೆ. ಕ್ರಮವಾಗಿ ೧೯೮೯ರಲ್ಲಿ ೧೪೨೦೦ ಮತ್ತು ೧೯೯೦ರಲ್ಲಿ ೧೫೬೦೦ ಹತ್ಯೆ, ಅತ್ಯಾಚಾರ, ಕೊಲೆ ನಡೆದ ವರದಿಗಳು ಇವೆ.''(ಚರಿತ್ರೆ ವಿಶ್ವಕೋಶ-೪, ಕೆ.ವಿ.ವಿ.ಹಂಪಿ, ಪು.ಸಂ.೮೬೦) ಈ ರೀತಿಯ ನಕ್ಸಲ್ ಚಟುವಟಿಕೆಗಳನ್ನು ಹೊಂದಿರುವಂತಹ ಅನೇಕ ಹೋರಾಟಗಳು ಇಂದಿಗೂ ಕಂಡುಬರುತ್ತವೆ. ರಾಯಚೂರು ಜಿಲ್ಲೆಯಲ್ಲಿನ ಯಾಪಲದಿನ್ನಿ, ಗಂಜಳ್ಳೀ, ಬೂರ್ದಿಪಾಡ, ಜೇಗರಕಲ್ ಮಲ್ಲಾಪುರು, ಗಿಲ್ಲೇಸೂಗೂರು, ಯಂಗೇರಾ, ತಲಮಾರಿ, ಕುರುಬದೊಡ್ಡಿ, ಎಡವಟ್ಟಿ, ಚಂದ್ರಬಂಡ, ಸಿಂಗನೋಡಿ, ಗುಂಜಳ್ಳಿ, ಮರ್ಚೇಡ್, ದೇವಸೂಗುರು, ಸಿಂದನೂರು ಇನ್ನು ಮುಂತಾದವು ನಕ್ಸಲ್ ಪೀಡಿತ ಪ್ರದೇಶಗಳಾಗಿವೆ.

## ೨.೧. ಮಾನ್ವಿ ತಾಲೂಕಿನ ಚಾರಿತ್ರಿಕ ಇತಿಹಾಸ

ಕರ್ನಾಟಕದ ಚರಿತ್ರೆಯಲ್ಲಿ ಮಾನ್ವಿಯ ಇತಿಹಾಸ ವೈಶಿಷ್ಟ್ಯಪೂರ್ಣವಾದದ್ದು ಕ್ರಿ.ಪೂ.೨೦೦೦ ವರ್ಷಗಳಷ್ಟು ಹಿಂದಿನ ಇತಿಹಾಸ ಹೊಂದಿದ್ದು ಹಳೆಯ ಹಾಗೂ ಹೊಸ ಶಿಲಾಯುಗದ ಸಂಸ್ಕೃತಿಗಳನ್ನು ಬೆಳೆಸಿಕೊಂಡು ಬಂದ ಹೆಮ್ಮೆ ಮಾನವಿ ತಾಲೂಕಿಗಿದೆ. ಈ ಪ್ರದೇಶವನ್ನು ಆಳಿದ ರಾಜಮನೆತನಗಳಲ್ಲಿ ವಿಜಯನಗರ ಸಾಮ್ರಾಜ್ಯ, ಬಹುಮನಿ ಸುಲ್ತಾನರು, ಹೈದ್ರಾಬಾದ್ ನಿಜಾಮರ ಆಳ್ವಿಕೆಗಳು ಪ್ರಮುಖ ವಾದವುಗಳು. ಇಂತಹ ಬಲಿಷ್ಠ ಮನೆತನಗಳು ಇಲ್ಲಿ ನೆಲೆಯೂರಿ ಆಳಲಿಲ್ಲವೆಂಬುದು ಗಮನಿಸುವಂತಹ ಅಂಶವಾಗಿದೆ. ಹಿಂದೂ ಮತ್ತು ಮುಸ್ಲಿಂ ದೊರೆಗಳ ಆಳ್ವಿಕೆಗೊಳಗಾದ ಮಾನ್ವಿ ತಾಲೂಕಿನಲ್ಲಿ ನಿಜಾಮ ದೊರೆಗಳ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ಅದರಲ್ಲೂ ಮಹಿಳೆಯರ ಸ್ಥಿತಿಗತಿಗಳನ್ನು ನಿರ್ಧರಿಸುವಾಗಲಂತು ಅದು ಹೆಚ್ಚು ಕುತೂಹಲಕಾರಿಯೆನಿಸುತ್ತದೆ. ಸ್ವಾತಂತ್ರ್ಯದ ನಂತರವು ನಿಜಾಮರ ಆಳ್ವಿಕೆಯ ಪರತಂತ್ರದಲ್ಲಿ ಇಲ್ಲಿಯ ಪರಿಸರ ಬಂದಿಯಾಗಿತ್ತು. ಹೈದ್ರಾಬಾದ ನಿಜಾಮರ ಆಳ್ವಿಕೆ ಇಡೀ ಜನರ ಬದುಕನ್ನೇ ಅಲುಗಾಡಿಸುವುದರ ಜೊತೆಗೆ ಸಾಂಸ್ಕೃತಿಕ ಪರಿವರ್ತನೆಯನ್ನು ಉಂಟು ಮಾಡಿದುದಲ್ಲದೆ ಜೊತೆಗೆ ಭಾಷೆ, ಆಚಾರ-ವಿಚಾರ, ಉಡುಗೆ-ತೊಡುಗೆಗಳಿಗೆ ಸಂಪೂರ್ಣವಾಗಿ ಬದಲಾಗಿದ್ದವು. ಸ್ವಾತಂತ್ರ್ಯದ

ನಂತರವು ನಾಡಿನ ಕನ್ನಡ ಭಾಷೆಗೆ ಕತ್ತರಿ ಪ್ರಯೋಗವಾಗಿ ಉರ್ದು ಭಾಷೆಯು ಈ ಪ್ರದೇಶವನ್ನು ಆವರಿಸಿಕೊಂಡಿರುವುದು ಇಂದಿಗೂ ಸಹ ಕಾಣಬಹುದಾಗಿದೆ. ಮಾನವಿ ತಾಲೂಕಿನ ಇಂದಿನ ರಾಜಕೀಯ ಪರಿಸರವು ಮೊದಲಿಗಿಂತ ಭಿನ್ನವಾಗಿ ಕಂಡುಬರುವುದಿಲ್ಲ. ಹೊರನೋಟಕ್ಕೆ ನಮ್ಮದಾಗಿದ್ದರೂ ಇಲ್ಲಿಯ ರಾಜಕೀಯ ಹಿಡಿತ, ಅಧಿಕಾರದ ಸೂತ್ರ ಹೊಂದಿದವರು ಹೊರಗಿನವರು ಎಂಬುದು ಸೂಕ್ಷ್ಮ ಅವಲೋಕನಗಳಿಂದ ತಿಳಿದು ಬರುತ್ತದೆ. ಮಾನ್ವಿ ತಾಲೂಕು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಹಿಂದುಳಿದಿದ್ದರೂ ಕೂಡ ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಇತಿಹಾಸದಿಂದ ಇಂದಿಗೂ ತನ್ನ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿದೆ.

ಮಾನವಿ ತಾಲೂಕು ಅಪಾರವಾದ ಶಾಸನ ಸಂಪತ್ತಿನಿಂದ ಕೂಡಿದ್ದು, ಕನ್ನಡ ನಾಡಿನ ಪ್ರಮುಖ ರಾಜ ಮನೆತನಗಳ ಆಡಳಿತಕ್ಕೆ ಒಳಪಟ್ಟಿತ್ತು. ವಿಜಯನಗರ ಸಾಮ್ರಾಜ್ಯದ ಅರಸರು ಮತ್ತು ಕಲ್ಯಾಣಿ ಚಾಲುಕ್ಯರು ಬರೆಸಿದ ಶಾಸನಗಳು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಇವೆರಡು ರಾಜಮನೆತನಗಳು ಈ ತಾಲೂಕಿನಲ್ಲಿ ಅನೇಕ ದೇವಾಲಯಗಳನ್ನು ನಿರ್ಮಿಸಿದರಲ್ಲದೆ ಧಾರ್ಮಿಕ ಪರಂಪರೆಗೆ ಮಹತ್ವದ ಸ್ಥಾನ-ಮಾನಗಳನ್ನು ಪ್ರೋತ್ಸಾಹಿಸಿದವು ವಿಜಯನಗರದ ಕೃಷ್ಣದೇವರಾಯ, ಚಾಲುಕ್ಯರ ಜಯಸಿಂಹ ಸೋಮೇಶ್ವರ, ಜಗದೇಕಮಲ್ಲ ಮತ್ತು ಆರನೇಯ ವಿಕ್ರಮಾದಿತ್ಯನ ಹಾಗೂ ಸದಾಶಿವರಾಯರ ಕಾಲದಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡವು. ಹಲವಾರು ಪುಣ್ಯಕ್ಷೇತ್ರಗಳು ಮತ್ತು ಯಾತ್ರಾಸ್ಥಳಗಳಿಂದ ಇಲ್ಲಿಯ ಭೂಮಿ ಪಾವನಗೊಂಡಿದೆ.

## ೨.೨. ಮಾನ್ವಿಯ ಭೌಗೋಳಿಕತೆ

ಒಂದು ಪ್ರದೇಶದ ಅಭಿವೃದ್ಧಿ ಮತ್ತು ಬೆಳವಣಿಗೆ ಆಗಬೇಕಾದರೆ ಅಲ್ಲಿನ ಭೌಗೋಳಿಕ ಪರಿಸರ ಮತ್ತು ನೈಸರ್ಗಿಕ ಖನಿಜ ಸಂಪತ್ತು ಬಹಳ ಮುಖ್ಯವಾದ ಪಾತ್ರವಹಿಸುತ್ತದೆ. ಹಿಂದುಳಿದ ತಾಲೂಕು ಎನ್ನುವ ಹಣೆಪಟ್ಟಿಯನ್ನು ಕಟ್ಟಿಕೊಂಡಿರುವ ರಾಯಚೂರು ಜಿಲ್ಲೆಯ ಮಾನವಿ ತಾಲೂಕು ಹಲವಾರು ಸಮಸ್ಯೆಗಳ ಆಗರವಾಗಿದೆ ಇಂತಹ ಸಮಸ್ಯೆಗಳಲ್ಲಿ ನಿರುದ್ಯೋಗ, ಬಡತನ, ಅನಕ್ಷರತೆ, ಅನ್ನ ನೀರು, ಅರಿವೆಯಂತಹ ಮೂಲಭೂತ ಸಮಸ್ಯೆಗಳು ಪ್ರಧಾನವಾಗಿ ಕಂಡುಬರುತ್ತವೆ. ಭೌಗೋಳಿಕವಾಗಿ ಮಾನ್ವಿ ತಾಲೂಕು ಬಯಲು ಪ್ರದೇಶವಾಗಿದೆ. ಕಪ್ಪು ಮತ್ತು ಕೆಂಪು ಬಣ್ಣದ ಇಲ್ಲಿಯ ಮಣ್ಣು ಫಲವತ್ತಾಗಿದೆ. ತಾಲೂಕಿನ ಪೂರ್ವ ಮತ್ತು ಆಗ್ನೇಯದಲ್ಲಿ ತುಂಗಭದ್ರಾನದಿಯು ಹರಿದು ಇಲ್ಲಿಯ ಭೂಮಿ ಫಲವತ್ತಾಗಿದ್ದು, ಈ ಪ್ರದೇಶಕ್ಕೆ ನೀರಾವರಿಯನ್ನು ಒದಗಿಸಿದೆ. ಈ ನದಿಯನ್ನು ಉತ್ತರ ಕರ್ನಾಟಕದ ಭಾಗಕ್ಕೆ ಜೀವನದಿಯೆಂದು ಹೇಳಬಹುದು. ನದಿಯ ಆಚೆಯ ದಂಡೆಯಲ್ಲಿ ಆಂಧ್ರಪ್ರದೇಶ ಹಬ್ಬಿಕೊಂಡಿದೆ. ಆಂಧ್ರದ ಸಂಸ್ಕೃತಿಯು ಈ ತಾಲೂಕಿನ ಮೇಲೆ ಭಾವನಾತ್ಮಕ ಸಂಬಂಧವನ್ನು ಮೂಡಿಸಿದೆ. ಇಲ್ಲಿ ಮಾನ್ವಿ ಮತ್ತು ಕಲ್ಲೂರಿನ ಬೆಟ್ಟಗಳು ಈ ತಾಲೂಕಿನಲ್ಲಿ ಅತ್ಯಂತ ಎತ್ತರವಾಗಿದ್ದು, ಅವುಗಳಲ್ಲಿ ಗಣಿಗಾರಿಕೆಗೆ

ಅನುಕೂಲಕರವಾದ ಕಣಿಶಿಲೆಗಳು ಗುಡ್ಡಗಳು ಈ ತಾಲೂಕಿನಲ್ಲಿವೆ. ಕೆಲವೆಡೆ ಇಳಿಜಾರು ಪ್ರದೇಶವಿದ್ದರೆ, ಮತ್ತೊಂದೆಡೆ ದಿನ್ನಿ ಮತ್ತು ಮೊರಡಿ ಪ್ರದೇಶಗಳು ಆವರಿಸಿಕೊಂಡಿವೆ. ನದಿ ಮತ್ತು ಚಿಕ್ಕ ತೊರೆ (ನಾಲಾ)ಗಳು ತಾಲೂಕಿನ ಕೃಷಿಗೆ ಅನುಕೂಲವಾಗಿವೆ. ಇಲ್ಲಿಯ ಅಂತರ್ಜಲ ಸೌಲಭ್ಯದಿಂದಾಗಿ ತೋಟಗಾರಿಕೆಗೆ ಹೆಚ್ಚು ಅನುಕೂಲವಾಗಿದೆ. ಇಷ್ಟೆಲ್ಲಾ ಗಣಿಗಾರಿಕೆ, ಗಿಡಮೂಲಿಕೆ, ನೀರಾವಾರಿ ಇದ್ದರೂ ಕೂಡ ಇಲ್ಲಿಯ ಜನರು ಬಡತನ, ಮೂಲಭೂತ ಸೌಲಭ್ಯಗಳ ಕೊರತೆ ಇಲ್ಲಿಯ ಜನರನ್ನು ಕಾಡುತ್ತಿದೆ ಏಕೆಂದರೆ ಇಲ್ಲಿಯ ಮೂಲ ಉದ್ಯೋಗ ಕೃಷಿ ಆಗಿರುವುದರಿಂದ ಕಾಲುವೆಗೆ ಸರಿಯಾಗಿ ನೀರು ಬಾರದೆ ಇರುವುದರಿಂದ ಮತ್ತು ಇತ್ತೀಚಿನ ದಿನಗಳಲ್ಲಿ ಕೃಷಿಯಲ್ಲಿ ಆಧುನಿಕ ಯಂತ್ರಗಳನ್ನು ಬಳಸುವುದರಿಂದ ಜನರಿಗೆ ಹೊಲಗದ್ದೆಗಳಲ್ಲಿ ಕೆಲಸ ಸಿಗದೆ ಹೊಟ್ಟೆಪಾಡಿಗಾಗಿ ಬೇರೆ ಊರುಗಳಿಗೆ ವಲಸೆ ಹೋಗುವುದು ಅನಿವಾರ್ಯವಾಗಿದೆ. ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ತೀರಾ ಹಿಂದುಳಿದ ಪ್ರದೇಶವಾಗಿರುವುದರಿಂದ ಇಲ್ಲಿಯ ಬಹಳಷ್ಟು ಜನರು ಅನಕ್ಷರಸ್ಥರಾಗಿದ್ದು ನಿರುದ್ಯೋಗದಂತಹ ಸಮಸ್ಯೆಯು ತಾಂಡವಾಡುತ್ತಿದೆ. ಆದ್ದರಿಂದ ಸರಕಾರ ಈ ತಾಲೂಕನ್ನು ಹಿಂದುಳಿದ ಪ್ರದೇಶವೆಂದು ಘೋಷಿಸಲ್ಪಟ್ಟಿದೆ.

## ೨.೩. ಮಾನ್ವಿಯ ಮೂಲ

ಮಾನ್ವಿ ತಾಲೂಕಿನ ಹೆಸರು ಮೊದಲು ಮಾನುವೆ ಎಂದಿತ್ತು ಎಂದು ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ.೧೧೯೪ರಲ್ಲಿ ಹಿರೇಕೊಟ್ನೇಕಲ್ ಶಾಸನದಲ್ಲಿ ಮಾನ್ವಿಯ ಹೆಸರು ಉಲ್ಲೇಖವಾಗಿದೆ. ೧೨೯೫ರಲ್ಲಿ ರಾಯಚೂರಿನ ಒಳಗಿನ ಕೋಟೆಯ ಮತ್ತು ೧೫೯೧ರ ಚೀಕಲಪರ್ವಿ ಶಾಸನವೊಂದರಲ್ಲಿ ಮಾನ್ವಿಯ ಹೆಸರು ಉಲ್ಲೇಖವಾಗಿರುವುದು ತಿಳಿದುಬರುತ್ತದೆ(ಬಸವಪ್ರಭು ಪಾಟೀಲ ಬೆಟ್ಟದೂರು, ದರ್ಶನ ಮಾಲಿಕೆ ಮಾನವಿ, ಪು.೧).

## ೨.೪. ಭೌಗೋಳಿಕ ಅಂಕಿ ಅಂಶಗಳು

ಮಾನವಿ ತಾಲೂಕಿನ ಭೌಗೋಳಿಕ ವಿಸ್ತೀರ್ಣ, ೧, ೭೯೩ ಚದರ ಕಿ.ಮೀ.ಇದೆ. ತಾಲೂಕಿನ ಒಟ್ಟು ಜನಸಂಖ್ಯೆ ೩.೩೦.೭೧೯, ಅದರಲ್ಲಿ ೧,೬೬,೦೬೩ ಪುರುಷರು ಮತ್ತು ೧,೬೪,೬೫೬ ಮಹಿಳೆಯರಿದ್ದಾರೆ. ಒಟ್ಟು ಅಕ್ಷರಸ್ಥರ ಸಂಖ್ಯೆ ೯೮,೪೭೫ ಅದರಲ್ಲಿ ಪುರುಷರು ೬೪,೩೯೯ ಮತ್ತು ೩೪೦೭೬ ಮಹಿಳೆಯರಿದ್ದಾರೆ. ಮಾನ್ವಿ ತಾಲೂಕಿನ ಒಟ್ಟು ಭೂಮಿ ೧೭೯೨೭೩ ಹೆಕ್ಟೇರ್ ಇದ್ದು ಅದರಲ್ಲಿ ಬಿತ್ತನೆ ಪ್ರದೇಶ, ೧,೬೦,೭೪೪ ಹೆಕ್ಟೇರ್, ಅದೇ ರೀತಿಯಾಗಿ ತಾಲೂಕಿನ ಅರಣ್ಯ ಭೂಮಿ ೨,೩೧೩ ಹೆಕ್ಟೇರ್ ಇದ್ದರೆ ವ್ಯವಸಾಯೇತರ ಭೂಮಿ ೩,೫೧೮ ಹೆಕ್ಟೇರ್, ಬಂಜರು ಭೂಮಿ ೬೧೩ ಹೆಕ್ಟೇರ್, ಸಾಗುವಳಿಯೋಗ್ಯ ಬಂಜರು ಭೂಮಿ ೨,೪೩೯ ಹೆಕ್ಟೇರ್ ಇದೆ. ಬೀಳು ೩೬,೮೮೪ ಹೆಕ್ಟೇರ್

ಇದೆ. ಇಲ್ಲಿನ ವಾಡಿಕೆ ಮಳೆ ೬೪೦ ಮಿ.ಮೀ. ಈಗ ೫೯೦.೪ ಮಿ.ಮೀ ಆಗಿರುತ್ತದೆ. ರಾಯಚೂರಿನಿಂದ ಪಶ್ಚಿಮಕ್ಕೆ ೪೪ ಕಿ.ಮೀ. ಬಂದರೆ ರಾಯಚೂರು - ಸಿಂದನೂರು ರಾಜ್ಯ ಹೆದ್ದಾರಿ ಮೇಲೆ ಮಾನ್ವಿ ಸಿಗುತ್ತದೆ ಇದು ತಾಲೂಕಿನ ಕೇಂದ್ರ ಸ್ಥಳವಾಗಿದ್ದು ಪಟ್ಟಣ ವೇಗವಾಗಿ ಬೆಳೆಯುತ್ತಿದೆ. ಮಾನ್ವಿಯ ಮೂಲಕ ಹಾದು ಹೋಗುವಂತಹ ಹೆದ್ದಾರಿಯು ಅಗಲವಾಗಿರುತ್ತದೆ. ಮಾನ್ವಿ ತಾಲೂಕು ಒಟ್ಟು ೯ ಹೋಬಳಿಗಳನ್ನು ಒಳಗೊಂಡಿದ್ದು, ೩೬ ಗ್ರಾಮ ಪಂಚಾಯತ್ ಗಳಿವೆ. ಒಂದು ಸುಸಜ್ಜಿತವಾದ ತಾಲೂಕ ಪಂಚಾಯಿತಿ ಇದೆ. ಒಟ್ಟು ಮಾನ್ವಿ ತಾಲೂಕು ೧೭೧ ಹಳ್ಳಿಗಳಿಂದ ಕೂಡಿದೆ. ಇದರಲ್ಲಿ ೧೬೪ ಹಳ್ಳಿಗಳಲ್ಲಿ ಜನವಸತಿ ಇದೆ. ೭ ಹಳ್ಳಿಗಳಲ್ಲಿ ಜನವಸತಿ ಇರುವುದಿಲ್ಲ. ನನ್ನ ಅಧ್ಯಯನ ಕ್ಷೇತ್ರಗಳಾದ ಗಣದಿನ್ನಿ ಗ್ರಾಮ ಪಂಚಾಯಿತಿಯಲ್ಲಿ ೮೨೦೦ ಮತ್ತು ಅತ್ತನೂರು ಗ್ರಾಮ ಪಂಚಾಯಿತಿ ೮೭೦೦ ಜನಸಂಖ್ಯೆಯನ್ನು ಹೊಂದಿದೆ.

ತಾಲೂಕಿನಲ್ಲಿ ನೀರಾವರಿ ಆದ ನಿವ್ವಳ ಪ್ರದೇಶ ೫೬೦೧೦ ಹೆಕ್ಟೇರ್ ತುಂಗಭದ್ರ ಎಡದಂಡೆ ಕಾಲುವೆ, ಕೆರೆ, ಬಾವಿ, ಕೊಳವೆಬಾವಿ, ಏತ ನೀರಾವರಿಯಿಂದ ಈ ಪ್ರದೇಶವು ನೀರಾವರಿ ಆಗಿರುತ್ತದೆ, ೪೫, ೫೭೫ ಹೆಕ್ಟೇರ್ ಪ್ರದೇಶದಲ್ಲಿ ಭತ್ತ ಬೆಳೆಯುತ್ತಾರೆ. ೨೯,೬೬೪ ಪ್ರದೇಶದಲ್ಲಿ ಜೋಳ, ೮,೫೮೮ ಹೆಕ್ಟೇರ್ ಪ್ರದೇಶದಲ್ಲಿ ಸಜ್ಜೆ, ೧೫೬ ಹೆಕ್ಟೇರ್ ಪ್ರದೇಶದಲ್ಲಿ ಗೋಧಿ, ೧೩೪ ಹೆಕ್ಟೇರ್ ಪ್ರದೇಶದಲ್ಲಿ ಉಳಿದ ಏಕದಳ ಧಾನ್ಯಗಳನ್ನು ಬೆಳೆಯಲಾಗುತ್ತಿದೆ. ದ್ವಿದಳ ಧಾನ್ಯಗಳಾದ ಕಡಲೆಯನ್ನು ೭೨೧ ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದೆ. ಒಟ್ಟು ಆಹಾರ ಧಾನ್ಯ ೯೬,೨೩೧ ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯಲಾಗುತ್ತದೆ. ೪೧೯ ಹೆಕ್ಟೇರ್‌ನಲ್ಲಿ ಮೆಣಸಿನಕಾಯಿ, ೫೧೯ ಹೆಕ್ಟೇರ್ ಕಾಯಿಪಲ್ಯೆ, ೧೦೬ ಹೆಕ್ಟೇರ್ ನಲ್ಲಿ ಹಣ್ಣು ಹಂಪಲು ಬೆಳೆ ತೆಗೆದರೆ ಶೇಂಗಾ ೮೧೧೧ ಹೆಕ್ಟೇರ್‌ನಲ್ಲಿ, ಸೂರ್ಯಕಾಂತಿ ೫೦,೪೦೪ ಹೆಕ್ಟೇರ್ ಮತ್ತು ಇತರ ಎಣ್ಣೆ ಬೀಜಗಳನ್ನು ೧,೭೭೭ ಹೆಕ್ಟೇರ್‌ನಲ್ಲಿ ಬೆಳೆಯಲಾಗುತ್ತಿದೆ. ಈ ಮೇಲಿನ ಎಲ್ಲಾ ಅಂಶಗಳಿಂದ ಮಾನವಿ ತಾಲೂಕಿನ ಒಟ್ಟು ಭೌಗೋಳಿಕತೆಯ ಬಗ್ಗೆ ತಿಳಿದುಬರುತ್ತದೆ.

## ೨.೫. ಮಾನ್ವಿ ತಾಲೂಕಿನ ಸ್ಥಳನಾಮಗಳು

ಮಾನ್ವಿ ತಾಲೂಕಿನ ಸ್ಥಳನಾಮಗಳು ಆ ಪ್ರದೇಶದ ಸಂಸ್ಕೃತಿಯ ದ್ಯೋತಕವಾಗಿದೆ. ಅಚ್ಚಗನ್ನಡದ ಪದಗಳು ಇವುಗಳ ಪ್ರಮುಖ ಲಕ್ಷಣಗಳಾಗಿದ್ದು, ಸಂಸ್ಕೃತ-ತೆಲುಗು-ಉರ್ದು ಭಾಷೆಗಳ ಪ್ರಭಾವ ಇಲ್ಲಿಯ ಸ್ಥಳನಾಮಗಳಲ್ಲಿ ಪ್ರಭಾವ ಬೀರಿವೆ. ಶುದ್ಧ ಕನ್ನಡ ಪದಗಳು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಅನ್ಯಭಾಷೆ ಒತ್ತಡದಿಂದ, ಜನಪರರ ಸೌಲಭ್ಯಕಾಂಕ್ಷಿತ್ವದಿಂದ ಕಾಲಾಂತರ ಬೇದಗಳಿಂದ ಕನ್ನಡದ ಮೂಲ ರೂಪಗಳು ವ್ಯತ್ಯಾಸಗೊಂಡಿವೆ. ಮುಖ್ಯವಾಗಿ ೧. ಎಕಾರಾಂತ ಪದಗಳು ಇಕಾರಾಂತ ಮತ್ತು ಅಕಾರಾಂತಗಳಾಗಿವೆ. ಉದಾ: ಮಾನುವೆ-ಮಾನವಿ, ಬಲ್ಲಟಗೆ-ಬಲ್ಲಟಗಿ, ಹಣಗೆ-ಹಣಗಿ, ಹರಿವೆ-

ಹರವಿ ಮತ್ತು ಹುಡೆ-ಹುಡಾ, ೨. ಕರೆ ಪದಗಳು 'ಕೇರೆ' ಎಂದು ದೀರ್ಘ ಪದಗಳಾಗಿ ಮಾರ್ಪಟ್ಟಿವೆ. ೩. ಊರು ಪದದಿಂದ ಕೊನೆಗೊಳ್ಳುವ ಪದಗಳಿಗೆ 'ವರ', 'ವಾರ' ಎಂದು ಹೊರ ರೂಪ ಧರಿಸಿದೆ. ಉ ದಾಹರಣೆ. ಶ್ರೀವೂರ-ಸಿರವಾರ ಎಂದಾಗಿದೆ" ಶಾಸನಗಳಲ್ಲಿ ಉಕ್ತವಾದ ಸ್ಥಳನಾಮಗಳು ತನ್ನ ಮೂಲ ರೂಪವನ್ನು ಬದಲಿಸಿಕೊಂಡು ಹೊಸ ಪದವನ್ನು ಸೃಷ್ಟಿಸಿಕೊಂಡಿವೆ. ಉದಾ : ಕೊಟ್ಟೇಕಲ್ ಈಗಿನ ಹೆಸರು ಶಾಸನಗಳಲ್ಲಿ 'ಕೊಟ್ಟಕುಣಿಹೆ' ಎಂದಿದೆ. ಈ ಕೊಟ್ಟುಕುಣೆಹೆ ಶಾಸನೋಕ್ತ ಪದವು 'ಕೊಟ್ನೇಕಲ್ ಎಂದು ಹೊಸ ರೂಪಧರಿಸಿದ್ದು ಸೋಜಿಗವೇ ಸರಿ. ಇದರಂತೆ ಇಂದಿನ ಕುರುಡಿ ಸ್ಥಳನಾಮವು ಶಾಸನಗಳು ರೂಢಿ ಎಂದು ಉಲ್ಲೇಖವಾಗಿದೆ. ಈ ರೂಢಿ ಪದದ ಹಿಂದೆ 'ಕು' ಅಕ್ಷರ ಯಾವ ಭಾಷಾಶಾಸ್ತ್ರದ ನಿಯಮದಿಂದ ಬಂದು ಸೇರಿತು ಎಂಬುದಕ್ಕೆ ಭಾಷಾಶಾಸ್ತ್ರದಲ್ಲಿ ಆಸ್ಪದ ಸಿಕ್ಕದು, ಇನ್ನು 'ಬಲ್ಲಟಗಿ'ಯನ್ನು 'ಬಳ್ಳನಿಟ್ಟಗಿ' ಎಂದು 'ಬಾಗಲವಾಡ'ವನ್ನು 'ಬಾಗಲಪಳಲ' ಎಂದು ಶಾಸನಗಳ್ಲಲಿ ಉಕ್ತವಾಗಿದೆ. ೫. 'ಬೆಟ್ಟ' ಮತ್ತು 'ಗುಡ್ಡ' ಪದಗಳು ತಮ್ಮ ದ್ವಿತ್ವಾಕ್ಷರಗಳನ್ನು ಕಳೆದುಕೊಂಡು 'ಬೆಟ್ಟ' ಮತ್ತು 'ಗುಡ್ಡ' ಎಂದಾಗಿವೆ. ಉದಾ : ಬೆಟ್ಟದೂರು, ಗುಡಿದಿನ್ನಿ. ೬. 'ಪುರ' ಪದಾಂತ್ಯವುಳ್ಳ ಹೆಸರುಗಳು ಇಲ್ಲಿ ಹೆಚ್ಚು ಸಂಖ್ಯೆಯಲ್ಲಿವೆ. ಮೇಲೆ ಹೇಳಿರುವ ನೇಮಗಳ ಬೆಳಕಿನಲ್ಲಿ ಮಾನವಿ ತಾಲೂಕಿನ ಸ್ಥಳನಾಮಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ದಿನ್ನಿ(ದಪ್ಪ)**

ಮಣ್ಣಿನ ಗುಡ್ಡೆ ವಿಶಾಲವಾಗಿ ಹರಡಿಕೊಂಡ ಎತ್ತರದ ಪ್ರದೇಶವೆಂದು ಇದರ ಅರ್ಥ. ದ್ರಾವಿಡ ಭಾಷೆಯ ಮೂಲರೂಪ ದಿಣ್ಣೆ ಪದ ದಿನ್ನೆ-ದಿನ್ನಿ ಎಂದಾಗಿದೆ. ಇಂತಹ ದಿನ್ನಿ ಪದಗಳನ್ನು ಕೊನೆಗೊಂಡ ಸ್ಥಳನಾಮಗಳು ಈ ತಾಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ೧. ಗಾರಲದಿನ್ನಿ, ೨. ಖರಾಬದಿನ್ನಿ, ೩. ಗಣದಿನ್ನಿ, ೪. ಗೊಲ್ದಿನ್ನಿ, ೫. ಬುದ್ದಿನ್ನಿ, ೬. ಬಾದರದಿನ್ನಿ, ೭. ಚಿಕ್ಕದಿನ್ನಿ, ೮. ಜಕ್ಕಲದಿನ್ನಿ, ೯. ಜಂಬಲದಿನ್ನಿ, ೧೦. ಗುಡದಿನ್ನಿ, ೧೧.ನಾಗರದಿನ್ನಿ, ೧೨. ನಲಗಮದಿನ್ನಿ, ೧೩. ನರಕಮದಿನ್ನಿ, ೧೪. ಲಕ್ಕಮದಿನ್ನಿ, ೧೫. ವಲಕಮದಿನ್ನಿ, ೧೬. ಮರಕಮದಿನ್ನಿ, ೧೭. ರಾಜಲದಿನ್ನಿ, ೧೮. ಸಿಂಗಡದಿನ್ನಿ, ೧೯. ಸಣ್ಣರಾಮಲದಿನ್ನಿ. ಇವೆಲ್ಲವುಗಳು ದಿನ್ನಿ ಪದಗಳಿಂದ ಕೊನೆಗೊಳ್ಳುವಂತಹ ತಾಲೂಕಿನ ಸ್ಥಳನಾಮಗಳಾಗಿವೆ.

**ತೋರಣದಿನ್ನಿ**

ಮೇಲೆ ಹೇಳಿರುವ ದಿನ್ನಿಗಳನ್ನು ಸವಣಿಸಿ ತೋರಣ ಕಟ್ಟಿದರೆ ಅದೊಂದು ಸುಂದರ ಮತ್ತು ಉತ್ತಮ ಬಾಗಿಲು ಇಲ್ಲವೆ ಬೀದಿಗೆ ಅಲಂಕರಿಸುವ ತೋರಣದಿನ್ನಿಯಾಗುತ್ತದೆ. ಇಂತಹ ತೋರಣದಿನ್ನಿ ಹೆಸರಿನ ಸ್ಥಳನಾಮವೊಂದು ಮಾನವಿ ತಾಲೂಕಿನಲ್ಲಿರುವುದು ಒಂದು ವೈಶಿಷ್ಟ್ಯ.

**ವಟ-ವಾಟ**

ಇವು ಶುದ್ಧ ಕನ್ನಡದ ಪದಗಳು, ವಟ ಶಬ್ದಕ್ಕೆ ತೋಟವೆಂಬ ಅರ್ಥವಿದೆ. ವಾಟ ಪದಕ್ಕೆ ಇಳಿಜಾರು ಪ್ರದೇಶವೆಂದರ್ಥ. ತೋಟ ಇಲ್ಲವೆ ಇಳಿಜಾರು ಪ್ರದೇಶವಾಗಿ ಸೂಚಿಸುವ ಸ್ಥಳನಾಮಗಳು ಇಲ್ಲಿ ಕಾಣಸಿಗುತ್ತವೆ. ೧. ಬ್ಯಾಗವಾಟ, ೨. ಬೆಲವಟ, ೩.. ವಡವಾಟ ಇಂತಹ ಮುಂತಾದ ಊರುಗಳಿವೆ.

**ಪುರ**

ಮಾನವಿ ತಾಲೂಕಿನಲ್ಲಿ ಪುರ ಶಬ್ದದಿಂದ ಕೊನೆಗೊಳ್ಳುವ ಸ್ಥಳನಾಮಗಳು ಇಲ್ಲಿ ಅಧಿಕ ಸಂಖ್ಯೆಯಲ್ಲಿದ್ದು, ಸುಸಂಸ್ಕೃತದ ಪುರ ಶಬ್ದಗಳೊಂದಿಗೆ ಸೇರಿ ಉಪಯೋಗಿಸುತ್ತಿರುವುದು ಇದಕ್ಕೆ ನಿದರ್ಶನ. ೧. ಅಡವಿ ಖಾನಪುರ, ೨. ಎಕಲಾಸಪುರ, ೩. ಕಾಚಾಪೂರ, ೪. ಚಿಮಲಾಪುರ, ೫. ಜಾಲಾಪೂರ, ೬. ಪೋತಾಪುರ ೭. ತಿಮ್ಮಾಪುರ, ೮. ತಮ್ಮ ಪುರ, ೯. ದೇವಿಪುರ, ೧೦. ನಾಗಲಾಪುರ, ೧೧. ಪರಸಾಪುರ, ೧೨. ಪೋತಾಪುರ ೧೩. ಬಳ್ಳಾಪುರ, ೧೪. ಹಾಲಾಪೂರ, ೧೫. ಮಲ್ಲಾಪುರ, ೧೬. ಹಿಲಾಲಪುರ, ೧೭. ಬರ್ಹಾನಪುರ, ೧೮.ಮರಾನಪೂರ, ೧೯. ಸೈದಾಪೂರ ೨೦. ಹುಸೇನಪುರ ಮೊದಲಾದವು. ಇಲ್ಲಿನ ಪೋತಾಪುರದಲ್ಲಿ ತೆಲುಗು ಭಾಷಾ ಪದವಿದ್ದರೆ ಬುರ್ಹಾನಪುರ, ಮುರಾನಪುರ, ಸೈದಾಪೂರ ಮತ್ತು ಹುಸೇನಪುರಗಳಲ್ಲಿ ಉರ್ದು ಭಾಷೆ ಕಂಡುಬರುತ್ತದೆ.

**ಕಲ್-ಗುಡ್ಡ-ಬೆಟ್ಟ-ಬಂಡೆ**

ಇವು ಶಿಲೆಗೆ ಸಂಬಂಧಿಸಿದ ಪದಗಳು. ಮಾನವನು ನೆಲೆನಿಲ್ಲುವುದಕ್ಕೆ ಮತ್ತು ಅವನ ಬದುಕಿನ ಭದ್ರತೆಗಳಿಗೆ ಇವು ಪ್ರಮುಖ ಅಂಗಗಳಾಗಿವೆ. ಕಲ್, ಗುಡ್ಡ, ಬೆಟ್ಟ, ಬಂಡೆಗಳುಳ್ಳ ಸ್ಥಳನಾಮಗಳಲ್ಲಿ ಈ ಅರ್ಥ ವಿಶೇಷತೆಗಳು ಕಂಡುಬರುತ್ತವೆ. ೧. ಆನಂದಗಲ್, ೨. ಇರಕಲ್, ೩. ಕಪಗಲ್, ೪. ಗೋರ್ಕಲ್, ೫. ಕೊಟ್ನೇಕಲ್ ಇತ್ಯಾದಿ. ೧. ಮೊದಲ ಗುಡ್ಡ, ೨. ಕರೆಗುಡ್ಡ, ೩. ಬೆಟ್ಟದೂರ ಮುಂತಾದವು. ಇಲ್ಲಿ ಅನಂದಗಲ್ ನಲ್ಲಿ ಹರ್ಷ ಉಕ್ಕಿದರೆ, ದೇವತಗಲ್‌ನಲ್ಲಿ ದೈವಿಕಶಕ್ತಿ ಕಂಡುಬರುತ್ತದೆ. ನವಲಕಲ್ ಮತ್ತು ಮೊದಲ ಗುಡ್ಡಗಳಲ್ಲಿ ನವಿಲು ಮತ್ತು ಮೊಲ ಪ್ರಾಣಿಪಕ್ಷಿಗಳು ಅಡಗಿವೆ. ಬಂಡೆಗಲ್‌ಗಳಿಂದ ಆವೃತವಾಗಿ ಪ್ರದೇಶವನ್ನು ಬಂಡೆಪದವು ಸೂಚಿಸುತ್ತದೆ. ೧. ಸೋತಂಬಂಡಿ, ೨. ರಾಜಲಬಂಡಿ ಮೊದಲಾದವು. ದೋತರಬರಡಿಯಲ್ಲಿ ಮರಾಠಿಯ ಧೋತರಪದ ಹೇಗೆ ಸೇರಿತೋ ತಿಳಿಯದು. ಆದರೆ ಬಂಡೆಯ ದೋತರ ಬಂಡೆ ಸೀತೆಸೆರಗು ಹೆಸರು ಇರುವಂತೆ ಈ ಪದ ಬಳಕೆಯಲ್ಲಿರಬೇಕು.

**ದೊಡ್ಡಿ-ಹಟ್ಟಿ**

ತೆಲುಗು ಮೂಲದ ದೊಡ್ಡಿಪದ ಕನ್ನಡದ ಹಟ್ಟಿ ಶಬ್ದಕ್ಕೆ ಸಮಾನವಾಗಿದೆ. ದನಕರುಗಳನ್ನು ಕಟ್ಟುವ ಸ್ಥಳಕ್ಕೆ ದೊಡ್ಡಿಯಂತಾಯಿತು. ಪಶುಪಾಲನೆಯ ವೃತ್ತಿಯನ್ನು ಇದು ತೋರಿಸುತ್ತದೆ. ಇಂತಹ

ಸ್ಥಳನಾಮಗಳಿಗೆ ಈ ತಾಲೂಕಿನಲ್ಲಿ ಕಡಿಮೆಯೇನಿಲ್ಲ. ೧. ಕಸನದೊಡ್ಡಿ, ೨. ಗೋವಿನದೊಡ್ಡಿ, ೩. ತೊಪ್ಪಲದೊಡ್ಡಿ, ೪. ಪಟಕನದೊಡ್ಡಿ, ೫. ಬೊಮ್ಮನದೊಡ್ಡಿ, ೬. ಯದ್ದಲದೊಡ್ಡಿ ೭. ಯರಾಳದೊಡ್ಡಿ ಮೊದಲಾದವು. ೧. ಕಂಬಾಲಹಟ್ಟಿ, ೨. ಜಂಗಮರಹಟ್ಟಿ ಇತ್ಯಾದಿ. ಗೋವಿನದೊಡ್ಡಿಯಲ್ಲಿ ಆಕಳು, ಯದ್ದಲದೊಡ್ಡಿಯಲ್ಲಿ ಎತ್ತು ಕಾಣಿಸುತ್ತವೆ. ಜಂಗಮರ ಹಟ್ಟಿ ವೀರಶೈವ ಜಂಗಮರಿಗೆ ಪೂಜಾನುಷ್ಠಾನಕ್ಕಾಗಿ ಬಿಟ್ಟದತ್ತಿ ಗ್ರಾಮ.

### ಗಡ್ಡೆ

ಗಡ್ಡೆಗಳು ನೀರಿನಿಂದ ಸುತ್ತುವರೆದ ದ್ವೀಪದಂತಹ ಭೂ ಪ್ರದೇಶ. ನದಿಗಳ ಒಡಲಲ್ಲಿ ಇಂತಹ ಗಡ್ಡೆಗಳು ಕಾಣಿಸಿಕೊಂಡು ಕೃಷಿ ಇಲ್ಲವೆ ಜನವಸತಿಗೆ ಯೋಗ್ಯವಾಗಿದೆ. ೧. ಈರಲಗಡ್ಡೆ ೨. ಮುದ್ದಮಗಡ್ಡೆ ಮುಂತಾದವು.

### ಪರವಿ-ಪರ್ವಿ

ಪರವಿ-ಪರ್ವಿ ಪದಾಂತ್ಯದ ಸ್ಥಳನಾಮಗಳು ತೆಲುಗು ಮೂಲದಿಂದ ಬಂದ ಪದವಾಗಿವೆ. ವಿಜಯನಗರ ಕಾಲದ ಶಾಸನಗಳಲ್ಲಿ ಪರವಿ ಪದ ಉಲ್ಲೇಖವಾಗಿದೆ. ಕಾಕತೀಯರ ಕಾಲದಿಂದಲೂ ಈ ತಾಲೂಕಿನಲ್ಲಿ ತೆಲುಗು ಬಾಷೆಯ ಪ್ರಭಾವ ಕಂಡುಬರುತ್ತದೆ. ಅಂತೆಯೇ ತೆಲುಗು ಭಾಷೆಯು ಇಲ್ಲಿಯ ಪದನಾಮಗಳಲ್ಲಿ ಕಂಡುಬಂದರೆ ಅಚ್ಚರಿಪಡಬೇಕಿಲ್ಲ. ೧. ಚೀಕಲಪರವಿ (ಚೀಕಲಪರ್ವಿ), ೨. ಯಾಪಲಪರವಿ ಇತ್ಯಾದಿ. ಪೋತನಾಳು ಮತ್ತು ಮರ್ಚೇಡ್ ನಾಮಗಳು ತೆಲುಗು ಭಾಷೆಗೆ ಸಂಬಂಧಪಟ್ಟಿವೆ.

### ಅಮರವತಿ ಮತ್ತು ಭೋಗಾವತಿ

ಇವೆರಡು ಸಂಸ್ಕೃತ ಭಾಷೆಯ ಪದನಾಮಗಳು, ಭಾರತೀಯ ಪುರಾಣಗಳಲ್ಲಿ ವರ್ಣಿತವಾದ ಈ ನಗರಗಳ ಹೆಸರುಗಳು ಭಾರತ ದೇಶದ ತುಂಬೆಲ್ಲ ಕಂಡುಬರುತ್ತವೆ. ಕರ್ನಾಟಕದ ಇತರ ಭಾಗದಲ್ಲಿಯೂ ಈ ನಗರಗಳ ಸ್ಥಳನಾಮಗಳಿವೆ. ವೈಭವಕ್ಕೆ ಸ್ವರ್ಗ ಲೋಕದ ದೇವೇಂದ್ರನ ಅಮರಾವತಿ ಮತ್ತು ಭೋಗಕ್ಕೆ ಪಾತಾಳ ಲೋಕದ ನಾಗರಾಜನ ಭೋಗಾವತಿ ಇವು ಲೋಕೋತ್ತರ ನಗರಗಳು. ಭೋಗ ಮತ್ತು ವೈಭವಗಳು ಸಂಕೇತಗಳಾದ ಈ ಎರಡು ನಗರಗಳ ಹೆಸರುಗಳನ್ನು ಸಿದ್ಧಪಡಿಸುವ ಪೌರಾಣಿಕ ಕಲ್ಪನಾ ಮತ್ತು ಪಾತಾಳ ಲೋಕಗಳೆರಡನ್ನು ಭೂಲೋಕದಲ್ಲಿ ಸ್ಥಾಪಿಸುವ ಪೌರಾಣಿಕ ಕಲ್ಪನಾಶಕ್ತಿ ಇಲ್ಲಿದೆ. ಮಾನವಿ ತಾಲೂಕಿನಲ್ಲಿ ಈ ಎರಡು ಹೆಸರಿನ ಸ್ಥಳನಾಮಗಳು ಇವೆ.

### ವಿಶೇಷ ನಾಮಗಳು

ಒಂದು ಜನಾಂಗದ ಭವ್ಯ ಸಂಸ್ಕೃತಿ, ಉದಾತ್ತ ವಿಚಾರ, ಸೌಂದರ್ಯ ಪ್ರಜ್ಞೆ ಮತ್ತು ಮಹೋನ್ನತ ಜೀವನ ಮೌಲ್ಯಗಳು ಸ್ಥಳನಾಮಗಳ ವಿಶ್ಲೇಷಣೆಯಿಂದ ತಿಳಿಯುತ್ತದೆ. ಅಂತಹ ವಿಶೇಷಾರ್ಥಗಳ

ನಾಮಗಳು ಮಾನ್ವಿ ತಾಲೂಕಿನ ಜನರ ಬದುಕನ್ನು ಅನಾವರಣಗೊಳಿಸುತ್ತದೆ. ಜೊಳದರಾಶಿ, ಪನ್ನೂರು, ಜಾಗಬಾವಿ, ತುಪ್ಪದೂರ, ಹಾಲಾಪೂರ, ಕಡಬೂರು ಮುಂತಾದವುಗಳಲ್ಲಿ ಜೋಳ, ಹೊನ್ನು, ತ್ಯಾಗ, ತುಪ್ಪ, ಹಾಲು ಮತ್ತು ಕಡಬುಗಳಂತಹ ಪದಗಳು ಬದುಕಿನ ಸಮೃದ್ಧಿಯನ್ನು ತೋರಿಸುತ್ತವೆ. ಗೂಗೆಬಾಳ, ನವಲಕಲ್ , ಸುಂಕೇಶ್ವರ, ಮಲ್ಲನಮಡಗು, ಜೀನೂರು ಮೊದಲಾದ ಪದಗಳಲ್ಲಿ ಮೃಗ-ಪಕ್ಷಿ, ಹೂ-ಹಣ್ಣು, ಮಾವು-ಬೇವುಗಳು, ರಂಗದಾಳು, ಅರೋಲಿ ಇತ್ಯಾದಿ ಪದನಾಮಗಳಲ್ಲಿ ಜಲಸಂಪತ್ತು ಮತ್ತು ಕಲೆ ಸಂಸ್ಕೃತಿಗಳು ಸಂಪನ್ನಗೊಂಡಿವೆ. ಕನ್ನಡ ಭಾಷೆಯಲ್ಲಿ ಡ-ಣ ಕಾರಗಳು ಪದದ ಒಂದೆಡೆ ಬರುವುದು ಬಹು ಅಪರೂಪ. ಅಂತಹ ಅಪರೂಪದ ಪದಗಳು ಇಲ್ಲಿ ಕಾಣಸಿಗುತ್ತವೆ. ಡೋಣಮರಡಿ, ನುಗಡೋಣಿ ಇತ್ಯಾದಿ.

ಹೀಗೆ ಮಾನ್ವಿ ತಾಲೂಕಿನ ಸ್ಥಳ ನಾಮಗಳನ್ನು ಅಧ್ಯಯನಕ್ಕೆ ಒಳಪಡಿಸಿದರೆ ಈ ತಾಲೂಕಿನ ಸಮಗ್ರ ಸಂಸ್ಕೃತಿ ಮತ್ತು ಭಾಷಾ ಸೌಂದರ್ಯಗಳು ವ್ಯಕ್ತವಾಗುತ್ತವೆ.

ಅಧ್ಯಾಯ ೩

# ಗ್ರಾಮ ಪಂಚಾಯಿತಿ ಮತ್ತು ಮಹಿಳೆ

೩.೧. ಗ್ರಾಮ ಪಂಚಾಯಿತಿಯ ಉಗಮ ಮತ್ತು ಬೆಳವಣಿಗೆ

೩.೨. ಗ್ರಾಮ ಪಂಚಾಯಿತಿಯ ಕಾರ್ಯಗಳು

೩.೩. ಗ್ರಾಮ ಪಂಚಾಯಿತಿಗಳಲ್ಲಿ ಮಹಿಳಾ ಪ್ರತಿನಿಧೀಕರಣ

೩.೪. ಗ್ರಾಮ ಪಂಚಾಯಿತಿ ಮತ್ತು ಅಧಿಕಾರ ವಿಕೇಂದ್ರೀಕರಣ

೩

# ಗ್ರಾಮ ಪಂಚಾಯಿತಿ ಮತ್ತು ಮಹಿಳೆ

ಭಾರತದಲ್ಲಿ ಗ್ರಾಮೀಣ ಸಮುದಾಯಗಳ ಸಂಘಟನೆ, ಆಡಳಿತ ಮತ್ತು ಎಲ್ಲಾ ಬಗೆಯ ಪ್ರಗತಿ ಗ್ರಾಮ ಪಂಚಾಯಿತಿಗಳನ್ನೇ ಆಧರಿಸಿವೆ. ಗ್ರಾಮ ಪಂಚಾಯಿತಿಗಳು ಭಾರತೀಯ ಗ್ರಾಮೀಣ ಸಾಮಾಜಿಕ ವ್ಯವಸ್ಥೆಯ ಪ್ರಮುಖ ಆಧಾರ ಸ್ತಂಭಗಳಾಗಿರುವುವು. ಇಂದು ಯಾವುದೇ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಂಡರೂ ಕೂಡ ಈ ಗ್ರಾಮ ಪಂಚಾಯಿತಿಗಳಿಂದಲೇ ಪ್ರಾರಂಭವಾಗಬೇಕು. ಏಕೆಂದರೆ ಭಾರತವು ಹಳ್ಳಿಗಳ ದೇಶ. ಈ ಹಳ್ಳಿಗಳು ಅಭಿವೃದ್ಧಿ ಹೊಂದಿದರೆ ದೇಶ ಅಭಿವೃದ್ಧಿ ಹೊಂದಲು ಸಾಧ್ಯ. ಗಾಂಧೀಜಿಯವರ ಪ್ರಕಾರ ಗ್ರಾಮೀಣ ಅಭಿವೃದ್ಧಿಯು ಪಂಚಾಯತ್ ರಾಜ್ಯದ ಮುಖಾಂತರ ಸಾಧ್ಯ. ಗ್ರಾಮೀಣ ಅಭಿವೃದ್ಧಿಗಾಗಿ ಪಂಚಾಯತ್ ರಾಜ್ ಪದ್ಧತಿಯು ವ್ಯವಸ್ಥಿತ ರೀತಿಯಲ್ಲಿ ಬೆಳೆಯಬೇಕು ಎನ್ನುವುದಾಗಿತ್ತು. ಆದರೆ ಡಾ.ಬಿ.ಆರ್ .ಅಂಬೇಡ್ಕರ್ ರವರು ಪಂಚಾಯತ್‌ರಾಜ್ ವ್ಯವಸ್ಥೆಗೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿದ್ದರು. ಅವರು ಪಂಚಾಯತ್ ರಾಜ್ಯವ್ಯವಸ್ಥೆಗೆ ಯಾವ ಸ್ಥಾನವನ್ನು ಕೊಡಲಿಲ್ಲ. ಅವರ ಪ್ರಕಾರ "ಗ್ರಾಮ ಪಂಚಾಯಿತಿ ಸಂಸ್ಥೆ ಸ್ಥಾನಿಕ ವಿಚಾರಗಳಲ್ಲಿ ಅಸ್ತಮಿಸುವಂಥದ್ದು ಮತ್ತು ಅಜ್ಞಾನ, ವ್ಯಕ್ತಿಗಳ ಸಂಘಟನೆ, ಕೋಮು ಗಲಭೆಗಳನ್ನು ಬೆಳೆಸುವ ಕೇಂದ್ರವಾಗಿದೆ" ಎಂದು ಟೀಕಿಸಿದೆ. ಈ ರೀತಿಯಲ್ಲಿ ರಾಷ್ಟ್ರ ನಾಯಕರಲ್ಲಿ ಭಿನ್ನಾಭಿಪ್ರಾಯಗಳನ್ನು ಹೊಂದಿದ್ದರೂ ಸಹ ಇಂದು ಪಂಚಾಯತ್‌ರಾಜ್ ವ್ಯವಸ್ಥೆ ಯಶಸ್ವಿಯಾಗಿ ರೂಪಿತಗೊಂಡಿದೆ. ಆದರೆ ಇಲ್ಲಿ ಒಂದು ವಿಷಯ ನಮ್ಮ ಗಮನಕ್ಕೆ ಬರುತ್ತದೆ. ಅಂಬೇಡ್ಕರರು ಈ ವ್ಯವಸ್ಥೆಗೆ ವಿರೋಧಿಸಿದ್ದೇಕೆ ಎಂಬುದನ್ನು ಸೂಕ್ಷ್ಮವಾಗಿ ಗಮನಿಸಿದರೆ ಇಂದಿನ ವ್ಯವಸ್ಥೆಯಲ್ಲಿ ನಡೆಯುತ್ತಿರುವ ಘಟನೆಗಳೆಲ್ಲವೂ ಸಹ ಅವರ ವಾದಕ್ಕೆ ಪುಷ್ಠಿ ಕೊಡುತ್ತವೆ ಮತ್ತು ಈ ವ್ಯವಸ್ಥೆಯಲ್ಲಿ ಕೇವಲ ಬಂಡವಾಳ ಶಾಹಿಗಳದೇ ಮೇಲುಗೈ ಪಡೆದಿದ್ದಾರೆ. ಹಳ್ಳಿಗಳಲ್ಲಿ ಕೆಳವರ್ಗದವರು ಯಾವುದೇ ಅಭಿವೃದ್ಧಿಯನ್ನು ಸಾಧಿಸುವುದಿಲ್ಲ ಎಂಬಂತಹ ನಿಲುವುಗಳಿಂದ ಅದನ್ನು ವಿರೋಧಿಸಿದರು. ಆದರೆ ಕಾಲ ಬದಲಾಗಿದೆ. ಅಭಿವೃದ್ಧಿಯನ್ನು ಸಾಧಿಸುವ ದೃಷ್ಟಿಕೋನಗಳಲ್ಲಿ ಸಾಕಷ್ಟು ಬದಲಾವಣೆ ಕಂಡಿವೆ. ಹೀಗಾಗಿ ಪಂಚಾಯತ್‌ರಾಜ್ ವ್ಯವಸ್ಥೆ ಜಾರಿಗೆ ಬಂದಿದೆ. ಇದೇನೇ ಇದ್ದರೂ ಗ್ರಾಮ ಪಂಚಾಯ್ತಿಗಳು ಇಂದಿನ ದಿನ ಮಾನಗಳಲ್ಲಿ ಹಳ್ಳಿಗಳ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿವೆ. ಹಾಗೆಯೇ ಕೆಳವರ್ಗ ಮತ್ತು ಮೇಲ್ವರ್ಗ ಎಂದು ಹೇಳದೆ ಎಲ್ಲಾ ವರ್ಗದವರಿಗೂ

ಸಹ ಸಮಾನ ನೆಲೆಯಲ್ಲಿ ನೋಡುತ್ತಿದೆ ಏಕೆಂದರೆ ಇಂದು ದಲಿತ ಪುರುಷರು ಅಥವಾ ಮಹಿಳೆಯರು ಗ್ರಾಮ ಪಂಚಾಯ್ತಿಗಳಲ್ಲಿ ಸದಸ್ಯರಾಗಿರುವುದು ನಮ್ಮ ಕಣ್ಣ ಮುಂದಿದೆ.

ಗ್ರಾಮ ಪಂಚಾಯಿತಿಗಳು ಎಲ್ಲಾ ವರ್ಗದವರಿಗೂ ಎಲ್ಲ ಜಾತಿಯವರಿಗೂ ರಾಜಕೀಯದಲ್ಲಿ ಪಾಲ್ಗೊಳ್ಳುವಂತಹ ಅವಕಾಶವನ್ನು ಒದಗಿಸಿಕೊಟ್ಟಿವೆ. ಹಾಗೂ ಮುಖ್ಯವಾಗಿ ಮಹಿಳೆಯರು ರಾಜಕೀಯದಲ್ಲಿ ಪಾಲ್ಗೊಳ್ಳಲು ಹಿಂಜರಿಯುತ್ತಿರುವ ಸಂದರ್ಭದಲ್ಲಿ ಈ ಗ್ರಾಮ ಪಂಚಾಯಿತಿಗಳು ಅವರನ್ನು ಪಾಲ್ಗೊಳ್ಳುವಂತೆ ಮಾಡಿವೆ. ಹಾಗೂ ಇಂದು ಮಹಿಳೆಯರು ಗ್ರಾಮ ಪಂಚಾಯ್ತಿಗಳ ಚುನಾವಣೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿರುವುದು ಕಂಡುಬಂದಿದೆ. ಹಾಗೆಯೇ ಗ್ರಾಮ ಪಂಚಾಯಿತಿಯ ಚುನಾವಣೆಗಳಲ್ಲಿ ಶೇ.೩೩ರಷ್ಟು ಮೀಸಲಾತಿಯನ್ನು ಮಹಿಳೆಯರು ಹೊಂದಿರುವುದರಿಂದ ಅವರಿಗೆ ರಾಜಕೀಯದಲ್ಲಿ ಭಾಗವಹಿಸಲು ಅವಕಾಶಗಳು ತೆರೆದುಕೊಂಡಿವೆ ಎಂದು ಹೇಳಬಹುದು.

**ಗ್ರಾಮ ಪಂಚಾಯಿತಿಯ ರಚನೆ :** ೫೦೦೦ ರಿಂದ ೭೦೦೦ ಜನಸಂಖ್ಯೆಯುಳ್ಳ ಗ್ರಾಮ ಅಥವಾ ಗ್ರಾಮಗಳ ಗುಂಪಿಗೆ ಒಂದು ಪಂಚಾಯ್ತಿ ಇರುತ್ತದೆ. ಪ್ರತಿಶತ ೪೦೦ ಜನಕ್ಕೆ ಅಥವಾ ಅದರ ಜನಸಂಖ್ಯೆ ಹಾಗೂ ಭೌಗೋಳಿಕ ವ್ಯಾಪ್ತಿಗೆ ಅನುಗುಣವಾಗಿ ಒಬ್ಬ ಸದಸ್ಯರನ್ನು ಆಯ್ಕೆ ಮಾಡಲಾಗುತ್ತದೆ. ಗ್ರಾಮ ಪಂಚಾಯ್ತಿಯಲ್ಲಿ ೫ ರಿಂದ ೧೫ ರವರಗೆ ಸದಸ್ಯರು ಇರುತ್ತಾರೆ. ಇದರ ಅಧಿಕಾರಾವಧಿ ೫ ವರ್ಷಗಳು. ಇಲ್ಲಿ ಪರಿಶಿಷ್ಟ ಜಾತಿಯವರಿಗೆ ಶೇ.೧೫ರಷ್ಟು, ಪರಿಶಿಷ್ಟ ಪಂಗಡದವರಿಗೆ ಶೇ.೩ರಷ್ಟು ಮೀಸಲಾತಿ ಇರುತ್ತದೆ. ಸ್ತ್ರೀಯರಿಗೆ ಶೇ.೩೩ರಷ್ಟು ಹಿಂದೆ ಇತ್ತು ಆದರೆ ಈಗ ಶೇ.೫೦ರಷ್ಟಾಗಿದೆ. ಈ ಮಹಿಳಾ ಮೀಸಲಾತಿಯನ್ನು ಶೇಕಡ ೫೦ಕ್ಕೆ ಏರಿಸಲಾಗಿದೆ. ಈ ರೀತಿಯಲ್ಲಿ ರಚನಾ ಸ್ವರೂಪವನ್ನು ಹೊಂದಿರುವ ಗ್ರಾಮಪಂಚಾಯಿತಿಗಳು ಯಾವಾಗ ಹುಟ್ಟಿಕೊಂಡವು? ಅವು ಹೇಗೆ ಬೆಳವಣಿಗೆ ಹೊಂದಿದವು ಎಂಬುದನ್ನು ತಿಳಿಯುವುದು ಅವಶ್ಯವಾಗಿದೆ.

## ೩.೧. ಗ್ರಾಮ ಪಂಚಾಯಿತಿಯ ಉಗಮ ಮತ್ತು ಬೆಳವಣಿಗೆ

ಒಕ್ಕೂಟ ವ್ಯವಸ್ಥೆಯ ಐದು ಸ್ಥರಗಳಲ್ಲಿ ಗ್ರಾಮ ಪಂಚಾಯ್ತಿಯು ಕೊನೆಯ ಮತ್ತು ಮಹತ್ವದ ಸ್ತರ. ಗ್ರಾಮ ಮಟ್ಟದ ಶಾಸಕಾಂಗ ಮತ್ತು ನೇರ ಪ್ರಜಾಸತ್ತಾತ್ಮಕ ಘಟಕವಾಗಿದೆ. ಶಾಸಕಾಂಗದೋಪಾದಿಯಲ್ಲಿರುವ ಗ್ರಾಮ ಸಭೆಯು ನ್ಯಾಯಾಂಗ ಮಾದರಿಯಾಗಿರುವ ನ್ಯಾಯ ಸ್ಥಳೀಯ ಆಡಳಿತದ ಪ್ರಬುದ್ಧ ಮತ್ತು ಪ್ರಧಾನ ವ್ಯವಸ್ಥೆಯಾದ ಗ್ರಾಮ ಪಂಚಾಯಿತಿಗೆ ದೊಡ್ಡ ಇತಿಹಾಸವೇ ಇದೆ. ಹಾಗೆ ನೋಡಿದರೆ ಪಂಚಾಯಿತಿ ಎನ್ನುವ ಪದ ಗುಚ್ಛವೇ ಜನಮಾನ್ಯ ಮತ್ತು ಶಕ್ತಿಶಾಲಿ ವ್ಯವಸ್ಥೆಗಳ ಪ್ರತೀಕವಾಗಿದೆ. ಕಾರಣ ಪಂಚ ಎಂದರೆ ಐದು. ಐದು ಜನರ ಒಂದು ನ್ಯಾಯ ವ್ಯವಸ್ಥೆಯೇ ಪಂಚಾಯಿತಿ. ಪಂಚರು ಎಂಬ ಪದದಿಂದ ಪಂಚಾಯ್ತಿ ಎಂಬ ಶಬ್ದ ಹುಟ್ಟಿಕೊಂಡಿದೆ. ಈ ಪಂಚರು

ಯಾರಾಗಿರುತ್ತಾರೆ ಎಂಬ ಪ್ರಶ್ನೆ ಹಾಕಿಕೊಂಡಾಗ ಚರಿತ್ರೆಯುದ್ದಕ್ಕೂ ಬೇಕಾದಷ್ಟು ನಿದರ್ಶನಗಳು ಉತ್ತರವಾಗಿ ಸಿಗುತ್ತವೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ "ದೈವವೇ ದೇವರು" ಎಂಬ ವಾಡಿಕೆ ಇದೆ. ಈ ದೈವವೆಂದರೆ ಈ ಐದು ಜನರ ಪ್ರಧಾನ ಸಂಸ್ಥೆ ಊರಿನ ಆಗು ಹೋಗುಗಳೆಲ್ಲಾ ಈ ಪಂಚರ ವಿಚಾರಕ್ಕನುಗುಣವಾಗಿ ನಡೆದುಕೊಂಡು ಹೋಗುತ್ತಿದ್ದವು. ಸಾಮಾನ್ಯವಾಗಿ ಊರಿನ ಪ್ರತಿಷ್ಠಿತ ವರ್ಗದವರು ಆ ವರ್ಗಕ್ಕೆ ಆಪ್ತರಾದವರು ಆ ಗುಂಪಿನಲ್ಲಿರುತ್ತಿದ್ದರು. ಬೇಕಾದವರನ್ನು ರಕ್ಷಿಸುವ ಮತ್ತು ಶಿಕ್ಷಿಸುವ ಎಲ್ಲಾ ಅವಕಾಶಗಳು ಇಲ್ಲಿರುತ್ತಿದ್ದವು. ಇದಕ್ಕೆ ಅಪವಾದಗಳು ಇರಬಹುದು. ಗ್ರಾಮ ವ್ಯವಸ್ಥೆಯಲ್ಲಿ ಇದು ಬಲವಾದ ಘಟಕವಾಗಿತ್ತು. ಕಾಲಾಂತರದಲ್ಲಿ ಇದರ ಭಿನ್ನ ಸ್ವರೂಪಗಳನ್ನು ಕಾಣಬಹುದು. ಪ್ರಾಚೀನ ಕಾಲದಲ್ಲಿ ಗ್ರಾಮದ ಜನರು ಸ್ಥಾನಿಕ ಸ್ವರಾಜ್ಯದ ಸೌಕರ್ಯವನ್ನು ಪಡೆದಿದ್ದರು. ಪಂಚಾಯ್ತಿಗಳು ಪ್ರಾಚೀನ ಸಂಸ್ಥೆಗಳಾಗಿದ್ದು ಚಿಕ್ಕ ಗಣ ರಾಜ್ಯಗಳಂತಿದ್ದ ಗ್ರಾಮಗಳು ತಮ್ಮ ಗ್ರಾಮ ಪಂಚಾಯಿತಿಗಳಿಂದ ಆಳಲ್ಪಡುತ್ತಿದ್ದವು. ಗ್ರಾಮಗಳಲ್ಲಿ ಪಂಚಾಯತ್ ಆಡಳಿತ ವ್ಯವಸ್ಥೆ ಪದ್ಧತಿಯನ್ನು ಗಂಗಾ ಮತ್ತು ಜಮುನಾ ನದಿಗಳ ನಡುವಿನ ಪ್ರದೇಶದಲ್ಲಿ ಆಡಳಿತ ವಸಾಹತುದಾರನಾಗಿದ್ದ ದೋಬಾ ರಾಜ್ಯದ ಪ್ರಿತು ರಾಜನು ಮೊಟ್ಟ ಮೊದಲಿಗೆ ಅಸ್ತಿತ್ವದಲ್ಲಿ ತಂದಿದ್ದನೆಂದು ತಿಳಿದು ಬರುತ್ತದೆ ಮನುಸ್ಮೃತಿ ಮತ್ತು ಮಹಾಭಾರತದ ಶಾಂತಿ ಪರ್ವದಲ್ಲಿ ಗ್ರಾಮ ಸಂಸ್ಥೆಗಳು ಅಸ್ತಿತ್ವದಲ್ಲಿದ್ದವು ಎನ್ನುವುದಕ್ಕೆ ಅನೇಕ ಉದಾಹರಣೆಗಳು ಸಿಗುತ್ತವೆ. ಅಲ್ಲದೆ ಕ್ರಿ.ಪೂ.೪ನೇ ಶತಮಾನದಲ್ಲಿ ಕೌಟಿಲ್ಯನು ಬರೆದ ಅರ್ಥಶಾಸ್ತ್ರದಲ್ಲಿ ಗ್ರಾಮ ಸಮಿತಿಗಳ ರಚನೆಯ ಕುರಿತು ವಿವರಣೆ ನಮಗೆ ದೊರಕುತ್ತದೆ.

ವಾಲ್ಮೀಕಿ ರಾಮಾಯಣವು ಘೋಷ, ಗ್ರಾಮ ಎಂದು ಎರಡು ಪ್ರಕಾರದ ಗ್ರಾಮ ಪಂಚಾಯ್ತಿಗಳ ಬಗ್ಗೆ ವಿವರಿಸುತ್ತದೆ. ಘೋಷ ಎಂದರೆ ಸಣ್ಣ ಗ್ರಾಮ ಪಂಚಾಯಿತಿ, ಗ್ರಾಮ ಎಂದರೆ ದೊಡ್ಡ ಗ್ರಾಮ ಪಂಚಾಯಿತಿ. ಇವುಗಳ ಮುಖ್ಯಸ್ಥನಿಗೆ ಗ್ರಾಮಿಣಿ ಎಂದು ಕರೆಯುತ್ತಿದ್ದರು. ಗ್ರಾಮ ಪಂಚಾಯಿತಿಯ ಜೊತೆಗೆ ಪ್ರಾದೇಶಿಕ ಪಂಚಾಯಿತಿಗಳಾದ ಶ್ರೇಣಿಗಳು ಅಥವಾ ಗಣಗಳು ಇದ್ದವು. ಗ್ರಾಮ ಪಂಚಾಯಿತಿಯು ಐದು ಜನ ಸದಸ್ಯರಿಂದ ಕೂಡಿದ ಒಂದು ವಿಶೇಷ ರಚನಾ ವ್ಯವಸ್ಥೆಯಾಗಿದ್ದು, ಈ ವ್ಯವಸ್ಥೆಯಲ್ಲಿ ಒಬ್ಬ ಮುಖ್ಯಸ್ಥನಿರುತ್ತಿದ್ದನು. ಇವನೇ ಗ್ರಾಮೀಣಿ. ಹೀಗೆ ವೇದಗಳ ಕಾಲದಿಂದ ಹಿಡಿದು ರಾಜರುಗಳ ಕಾಲದಲ್ಲಿಯೂ ಈ ಗ್ರಾಮ ಪಂಚಾಯಿತಿ ವ್ಯವಸ್ಥೆ ಇತ್ತೆಂದು ತಿಳಿದುಬರುತ್ತದೆ. ಮೊಗಲರ ಆಡಳಿತದಲ್ಲಿ ಮುಕದ್ದಮ್ ಎಂಬ ಗ್ರಾಮ ಮುಖಂಡನಿದ್ದ ಬಗ್ಗೆ ತಿಳಿದುಬರುತ್ತದೆ.

ಬ್ರಿಟೀಷರ ಆಳ್ವಿಕೆಯ ಅವಧಿಯಲ್ಲಿ ಭಾರತದ ಗ್ರಾಮ ಪಂಚಾಯಿತಿಗಳು ಅನೇಕ ಕಾರಣಗಳಿಂದ ಅವನತಿ ಹೊಂದಲು ಆರಂಭವಾಯಿತು. ಏಕೆಂದರೆ ಬ್ರಿಟೀಷ್ ರಾಜ್ಯಗಳಲ್ಲಿ ರಾಜ್ಯವು ಕಂದಾಯಗಳನ್ನು ಇಡೀ ಗ್ರಾಮದಿಂದ ಇಂತಿಷ್ಟು ಎಂಬುದಾಗಿ ಒಟ್ಟಾರೆ ವಸೂಲಿ ಮಾಡದೆ, ಪ್ರತಿಯೊಬ್ಬ ವ್ಯಕ್ತಿಯಿಂದ ವಸೂಲಿ ಮಾಡುತ್ತಿತ್ತು. ಗ್ರಾಮದಲ್ಲಿ ಗೋಚರಿಸಬಹುದಾದ ಗೊಂದಲಗಳನ್ನು ನಿಯಂತ್ರಿಸಲು ಪೋಲೀಸ್

ವ್ಯವಸ್ಥೆಗೆ ವಹಿಸಲಾಯಿತು. ಇದು ಗ್ರಾಮ ಪಂಚಾಯಿತಿಗಳ ಹಕ್ಕು ಹಾಗೂ ಹೊಣೆಗಾರಿಕೆಗಳನ್ನು ಮತ್ತಷ್ಟು ಕುಗ್ಗಿಸಿತು. ಇದರಿಂದಾಗಿ ಸಮುದಾಯ ಭಾವನೆಯು ದುರ್ಬಲಗೊಳ್ಳಲು ಕಾರಣವಾಯಿತು. ಆದಾಗ್ಯೂ ನಮ್ಮ ಭಾರತಕ್ಕೆ ಸ್ವಾತಂತ್ರ್ಯ ಬರುವ ಮುನ್ನವೇ ಇಪ್ಪತ್ತನೆಯ ಶತಮಾನದ ಆರಂಭದಿಂದಲೇ ಗ್ರಾಮೀಣ ಭಾಗದ ಪುನರ್ ರಚನೆಯ ಕಡೆ ಗಮನ ಕೊಡುವ ಪ್ರಯತ್ನಗಳಾಗಿದ್ದವು. ಹೀಗೆ ಗ್ರಾಮ ಪಂಚಾಯಿತಿಗಳ ಚರಿತ್ರೆಯನ್ನು ಅವಲೋಕಿಸಿದಾಗ ಚರಿತ್ರೆಯುದ್ದಕ್ಕೂ ಒಂದಿಲ್ಲೊಂದು ರೀತಿಯಿಂದ ಸ್ಥಳೀಯ ಆಡಳಿತವನ್ನು, ನ್ಯಾಯ ತೀರ್ಮಾನಗಳನ್ನು, ಸಂಪನ್ಮೂಲ ಕ್ರೋಢೀಕರಣವನ್ನು ಗ್ರಾಮ ಪಂಚಾಯ್ತಿಗಳು ನಿರ್ವಹಿಸಿಕೊಂಡು ಬಂದ ಬಗ್ಗೆ ಸಾಕಷ್ಟು ಮಾಹಿತಿಗಳು ಲಭ್ಯವಿದೆ. ಆದರೆ ಅವು ಇಂದಿನ ಪ್ರಜಾಪ್ರಭುತ್ವ ಮಾದರಿಯ ವಿಕೇಂದ್ರೀಕರಣ ಹಿನ್ನೆಲೆಯ ಪಂಚಾಯ್ತಿಗಳಾಗಿದ್ದವು ಎಂದು ಭಾವಿಸಿದರೆ ತಪ್ಪಾಗುತ್ತವೆ. ಆದರೆ ಇಂದಿನ ಗ್ರಾಮಾಭಿವೃದ್ಧಿ ಪರಿಕಲ್ಪನೆಗೆ ಇವು ನೀಡಿದ ಪ್ರೇರಣೆಗಳು ಗಮನಾರ್ಹವಾದಂತಹವು.

ಭಾರತ ಸ್ವಾತಂತ್ರ್ಯ ಪಡೆದ ನಂತರ ಕೇಂದ್ರ ಮತ್ತು ರಾಜ್ಯ ಸರಕಾರಗಳು ಪುರಾತನವಾದ ಪಂಚಾಯಿತಿಗಳ ಸಾಧಕ ಬಾದಕಗಳನ್ನು ವಿಮರ್ಶಿಸಿ ಅವುಗಳನ್ನು ಪುನರ್ ವ್ಯವಸ್ಥೆಗೊಳಿಸಲು ಮುಂದಾದವ. ಇದರ ಬಗ್ಗೆ ವಿಶೇಷವಾಗಿ ಅಧ್ಯಯನ ಮಾಡಲು ಕೇಂದ್ರ ಹಾಗೂ ರಾಜ್ಯ ಸರಕಾರಗಳು ವಿವಿಧ ಸಮಿತಿಗಳನ್ನು ರಚಿಸಿದವು. ಇಲ್ಲಿಂದ ಗ್ರಾಮ ಪಂಚಾಯಿತಿಗಳ ಕಾರ್ಯ ವೈಖರಿಯೇ ಬದಲಾಯಿತು. ಹೀಗೆ ಗ್ರಾಮ ಪಂಚಾಯಿತಿಗಳು ತನ್ನದೇ ಆದ ಇತಿಹಾಸವನ್ನು ಹೊಂದಿರುವುದು ಕಂಡುಬರುತ್ತದೆ. ಆದರೆ ಇದರ ಇತಿಹಾಸವನ್ನು ಅವಲೋಕಿಸಿದಾಗ ಮಹಿಳೆಯರ ಪಾಲ್ಗೊಳ್ಳುವಿಕೆ ಇಲ್ಲದೇ ಇರುವುದು ಕಂಡುಬರುತ್ತದೆ. ಏಕೆಂದರೆ ಮಹಿಳೆಯರಿಗೆ ಅವಕಾಶಗಳೇ ಇಲ್ಲವಾಗಿದೆ. ಹಾಗೂ ಸಾಂಪ್ರದಾಯಿಕ ಚಿಂತನೆಗಳು ಮತ್ತು ಧರ್ಮದ ಬಿಗಿ ಹಿಡಿತಗಳು ಮಹಿಳೆಯರ ಸ್ವಾತಂತ್ರ್ಯವನ್ನು ಕಿತ್ತುಕೊಂಡಿವೆ. ಆದರೆ ಇಂದು ಮಹಿಳೆಗೆ ಸ್ವಲ್ಪ ಸಡಿಲತೆಯನ್ನು ಕೊಡಲಾಗಿದೆ. ಹಾಗಾಗಿ ಮಹಿಳೆ ರಾಜಕೀಯ ವಲಯದಲ್ಲ ಪಾಲ್ಗೊಳ್ಳುವಂತಾಗಿದೆ ಎಂದು ಹೇಳಬಹುದು.

## ೩.೨. ಗ್ರಾಮ ಪಂಚಾಯಿತಿಯ ಕಾರ್ಯಗಳು

ಪ್ರಾಚೀನ ಕಾಲದಲ್ಲಿ ಗ್ರಾಮ ಪಂಚಾಯಿತಿಗಳು ಪ್ರಭಾವಶಾಲಿಯಾದ ಸ್ಥಾನಿಕ ಸ್ವರಾಜ್ಯ ಘಟಕಗಳಾಗಿದ್ದವು. ಮತ್ತು ಸ್ವತಂತ್ರ ಘಟಕಗಳಾಗಿ ಕಾರ್ಯನಿವರಹಿಸುತ್ತಿದ್ದವು. ವೇದ ಸಾಹಿತ್ಯ, ಮನುಸ್ಮೃತಿ, ಕೌಟಲ್ಯನ ಅರ್ಥಶಾಸ್ತ್ರಗಳಲ್ಲಿ ಉಲ್ಲೇಖಿಸಿದಂತೆ, ಗ್ರಾಮ ಪಂಚಾಯಿತಿಗಳು ಗ್ರಾಮ ಜನರ ಹಿತರಕ್ಷಣೆಗಾಗಿ ಕಂಕಣ ಬದ್ಧವಾಗಿದ್ದವು. ಸಾರ್ವಜನಿಕರಿಂದ ಬಂದ ದೂರುಗಳನ್ನು ಚರ್ಚಿಸಿ ಬಗೆಹರಿಸು ತ್ತಿದ್ದರು. ಗ್ರಾಮದಲ್ಲಿ ಸ್ವಚ್ಛತೆ, ರಸ್ತೆ ನಿರ್ಮಾಣ, ದೇವಾಲಯಗಳ ವ್ಯವಸ್ಥಾಪನೆ, ಗ್ರಾಮ ಜಾತ್ರೆಗಳನ್ನು

ಆಚರಿಸುವ ನಿರ್ಣಯ ತಗೆದುಕೊಳ್ಳುವುದು, ಭೂ ಕಂದಾಯ ಮತ್ತು ಭೂ ತೆರಿಗೆಯನ್ನು ವಸೂಲಿ ಮಾಡುವುದು ಈ ಮುಂತಾದ ಕಾರ್ಯಗಳನ್ನು ಮಾಡುತ್ತಿದ್ದವು. ಆದರೆ ಇಂದಿನ ಬದಲಾದ ಸಂದರ್ಭದಲ್ಲಿ ಗ್ರಾಮ ಪಂಚಾಯಿತಿಯ ಕಾರ್ಯವೈಖರಿಗಳು ಬದಲಾಗಿವೆ. ಮತ್ತು ಹೆಚ್ಚಿನ ಜವಾಬ್ದಾರಿಗಳು ಈ ಗ್ರಾಮ ಪಂಚಾಯಿತಿಗಳ ಮೇಲೆ ಬಿದ್ದಿದೆ. ೧೯೯೩ರಲ್ಲಿ ಜಾರಿಗೆ ಬಂದ ಪಂಚಾಯತ್ ರಾಜ್ಯ ವ್ಯವಸ್ಥೆಯಡಿಯಲ್ಲಿ ಗ್ರಾಮ ಪಂಚಾಯಿತಿಯು ಹೆಚ್ಚಿನ ಜವಾಬ್ದಾರಿಯನ್ನು ಪಡೆದುಕೊಂಡಿತು. ಗ್ರಾಮ ಪಂಚಾಯಿತಿಯ ಕಾರ್ಯಗಳನ್ನು ಎರಡು ವಿಧಗಳಾಗಿ ವಿಂಗಡಿಸಬಹುದು.

೧. ಕಡ್ಡಾಯ ಕಾರ್ಯಗಳು : ಗ್ರಾಮ ಪಂಚಾಯತಿಯು ಕಾರ್ಯಗಳ ನಿರ್ವಹಣೆಗಾಗಿ ಕಾಲದಿಂದ ಕಾಲಕ್ಕೆ ಸರಕಾರವು ನಿರೂಪಿಸುವ ಮಾರ್ಗದರ್ಶನದ ಅಥವಾ ಸೂತ್ರಗಳನುಸಾರವಾಗಿ, ಆಜ್ಞಾದಾಯಕವಾಗಿ ಉಲ್ಲೇಖಿಸಿರುವ ಕಾರ್ಯಕ್ರಮಗಳನ್ನು ಕಡ್ಡಾಯ ಕಾರ್ಯಗಳು ಎಂದು ಕರೆಯಬಹುದು.

- ಪ್ರತೀ ವರ್ಷ ಶೇ.೧೦ರಷ್ಟು ಮನೆಗಳಿಗೆ ಕಡಿಮೆ ಇಲ್ಲದಂತೆ ಶೌಚಾಲಯ ನಿರ್ಮಿಸುವುದು. ಆದಷ್ಟು ಬೇಗ ಉಳಿದ ಮನೆಗಳಿಗೂ ಈ ಸೌಲಭ್ಯವನ್ನು ವಿಸ್ತರಿಸುವುದು.
- ತೆರಿಗೆ, ದರ ಮತ್ತು ಶುಲ್ಕಗಳನ್ನು ನಿಯತವಾಗಿ ಪರಿಶೀಲಿಸುವುದು ಮತ್ತು ವಸೂಲಿ ಮಾಡುವುದು.
- ಜನನ ಮತ್ತು ಮರಣ ತ್ವರಿತ ನೊಂದಣಿ ಮತ್ತು ವರದಿ ಮಾಡುವುದು.
- ಸಾರ್ವತ್ರಿಕವಾಗಿ ಮಕ್ಕಳಿಗೆ ರೋಗ ನಿರೋಧಕ ಚುಚ್ಚು ಮದ್ದು ನೀಡುವುದು.
- ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕ ಶೌಚ ಗೃಹಗಳನ್ನು ನಿರ್ಮಿಸುವುದು.
- ಕುಡಿಯುವ ನೀರಿನ ಪೂರೈಕೆ, ಕೆರೆ, ಬಾವಿಗಳು ಹಾಗೂ ಕೊಳವೆ ಬಾವಿಗಳನ್ನು ನಿರ್ಮಿಸುವುದು.
- ಚರಂಡಿಗಳನ್ನು ನಿರ್ಮಿಸುವುದು, ರಸ್ತೆಗಳ ನಿರ್ಮಾಣ, ದುರಸ್ತಿ ಹಾಗು ನಿರ್ವಹಣೆ ಮಾಡುವುದು.
- ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿಗೆ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.
- ಗ್ರಾಮೀಣ ಕೃಷಿ ಮತ್ತು ತೋಟಗಾರಿಕೆಗೆ ಉತ್ತೇಜನೆ, ಬೀಜಗಳು, ರಸಗೊಬ್ಬರ, ನೀರಾವರಿ ಸೌಲಭ್ಯಗಳನ್ನು ಒದಗಿಸುವುದು.
- ಸಾಮಾಜಿಕ ಅರಣ್ಯ ಬೆಳೆಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.
- ಗ್ರಾಮಗಳಲ್ಲಿ ಮೀನುಗಾರಿಕೆಯನ್ನು ಅಭಿವೃದ್ಧಿಪಡಿಸುವುದು.
- ಹುಲ್ಲುಗಾವಲುಗಳ ಅಭಿವೃದ್ಧಿ ಮತ್ತು ನಿರ್ವಹಣೆ ಹಾಗೂ ಅವುಗಳ ಅನಧಿಕೃತ ಪರಭಾರೆ ಮತ್ತು ಬಳಕೆಯನ್ನು ತಡೆಯುವುದು.

◂ ಖಾದಿ ಗ್ರಾಮ ಮತ್ತು ಗುಡಿ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವುದು.

೨. ಸಾಮಾನ್ಯ ಕಾರ್ಯಗಳು

◂ ಸಾರ್ವಜನಿಕ ಆರೋಗ್ಯ ರಕ್ಷಣೆಗೆ ಕಾರ್ಯಕ್ರಮಗಳನ್ನು ರಚಿಸುವುದು. ಆಸ್ಪತ್ರೆ, ಕಲ್ಯಾಣ ಕೇಂದ್ರಗಳನ್ನು ನಿರ್ಮಿಸುವುದು ಮತ್ತು ನಿರ್ವಹಣೆ.

◂ ಕುಟುಂಬ ಕಲ್ಯಾಣ ಕಾರ್ಯಕ್ರಮಗಳನ್ನು ಅಭಿವೃದ್ಧಿ ಪಡಿಸುವುದು.

◂ ಬಟ್ಟೆ ತೊಳೆಯುವ, ಸ್ನಾನ ಘಟ್ಟಗಳ ನಿರ್ಮಾಣ ಮತ್ತು ನಿರ್ವಹಣೆ.

◂ ವಯಸ್ಕರ ಶಿಕ್ಷಣ ಮತ್ತು ಅನೌಪಚಾರಿಕ ಶಿಕ್ಷಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

◂ ಬಾಲ ಕಾರ್ಮಿಕ ಪದ್ಧತಿಯನ್ನು ಹೋಗಲಾಡಿಸುವುದು.

◂ ಗ್ರಂಥಾಲಯ ಮತ್ತು ಪ್ರಾಥಮಿಕ ಶಾಲೆಗಳ ಸುಧಾರಣೆ.

ಈ ವಿಧದಲ್ಲಿ ಗ್ರಾಮ ಪಂಚಾಯಿತಿಗಳು ತಮ್ಮ ವ್ಯಾಪ್ತಿಯಲ್ಲಿ ಕಾರ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಅಲ್ಲದೆ ಕರ್ನಾಟಕ ಪಂಚಾಯತ್ ರಾಜ್ಯ ಅಧಿನಿಯಮ ೧೯೯೩ರ ಅನ್ವಯ ಗ್ರಾಮದ ಅಭಿವೃದ್ಧಿಗೆ ಸಂಬಂಧಿಸಿದ ಈ ಕೆಳಕಂಡ ಆಸ್ತಿಯ ನಿರ್ಮಾಣ ಮತ್ತು ನಿರ್ವಹಣೆಯಂತಹ ಅಭಿವೃದ್ಧಿ ಕಾರ್ಯಗಳನ್ನು ಗ್ರಾಮ ಪಂಚಾಯಿತಿಯು ಕೈಗೊಳ್ಳುತ್ತಿದೆ.

◂ ಕುಡಿಯುವ ನೀರು, ಸಂರಕ್ಷಣೆ ಮತ್ತು ಹಂಚಿಕೆ, ಗ್ರಾಮ ನೈರ್ಮಲ್ಯ, ಸಾರ್ವಜನಿಕ ಮತ್ತು ಖಾಸಗೀ ಶೌಚಾಲಯಗಳು, ಸ್ನಾನ ಮತ್ತು ಧೋಬಿ ಘಾಟುಗಳ ನಿರ್ಮಾಣ ಮತ್ತು ನಿರ್ವಹಣೆ.

◂ ರಸ್ತೆ ಸೇತುವೆಗಳು ಮತ್ತು ಇತರೆ ಸಾರಿಗೆ ಸಂಪರ್ಕಗಳು, ಚರಂಡಿ ಮತ್ತು ಅಡಿಗಾಲುವೆಗಳ ನಿರ್ಮಾಣ ಮತ್ತು ನಿರ್ವಹಣೆ.

◂ ಸಮುದಾಯ ಆಸ್ತಿ-ಪಾಸ್ತಿಗಳು, ಗ್ರಂಥಾಲಯಗಳು, ಆಟದ ಮೈದಾನ ಬಸ್ ಅಥವಾ ಗಾಡಿ ನಿಲ್ದಾಣಗಳ ನಿರ್ಮಾಣ ಮತ್ತು ನಿರ್ವಹಣೆ.

◂ ಸರ್ಕಾರದಿಂದ, ಜಿಲ್ಲಾ ಪಂಚಾಯಿತಿಯಿಂದ ಅಥವಾ ತಾಲೂಕು ಪಂಚಾಯಿತಿಯಿಂದ ಪಾವತಿಸಿರುವ ಯಾವುದೇ ಇತರೇ ನಿರ್ಮಾಣ ಅಥವಾ ನಿರ್ವಹಣಾ ಕಾರ್ಯಗಳನ್ನು ನೆರವೇರಿಸುವುದು ಗ್ರಾಮ ಪಂಚಾಯ್ತಿಯ ಅಭಿವೃದ್ಧಿ ಕಾರ್ಯಗಳಾಗಿವೆ.

ಹೀಗೆ ಗ್ರಾಮ ಪಂಚಾಯ್ತಿಯು ತನ್ನ ಕಾರ್ಯಗಳನ್ನು ನಿರ್ವಹಿಸಬೇಕಾಗಿದೆ. ಇಲ್ಲಿ ಒಂದು ಗಮನಿಸಬೇಕಾದ ಅಂಶವೆಂದರೆ ಸರಕಾರವು ಗ್ರಾಮ ಪಂಚಾಯಿತಿಯ ಮಟ್ಟದಲ್ಲಿ ಮಹಿಳೆಯರ ಬಗ್ಗೆ

ಹೆಚ್ಚಿನ ಗಮನ ಹರಿಸದಿರುವುದು. ಮಹಿಳೆಯರ ಅಭಿವೃದ್ಧಿಗಾಗಿ ಅಥವಾ ಅವರ ಸಬಲೀಕರಣಕ್ಕಾಗಿ ಯಾವುದೇ ಪ್ರತ್ಯೇಕ ಕಾರ್ಯಗಳನ್ನು ಹಮ್ಮಿಕೊಳ್ಳಲಾಗಿಲ್ಲ. ಹಾಗಾಗಿ ಇಂದು ಎಲ್ಲಾ ಗ್ರಾಮ ಪಂಚಾಯಿತಿಗಳು ತಮಗೆ ಇಷ್ಟ ಬಂದ ಹಾಗೆ ಕಾರ್ಯಗಳನ್ನು ನಿರ್ವಹಿಸುತ್ತಿವೆ. ಅವುಗಳಿಗೆ ಒಂದು ನಿರ್ದಿಷ್ಟವಾದ ಚೌಕಟ್ಟು ಎನ್ನುವುದಿಲ್ಲ. ಇನ್ನು ಈ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿಗೆ ಸಂಬಂಧಸಿದಂತೆ ಗ್ರಾಮ ಪಂಚಾಯಿತಿಯ ಕಾರ್ಯಗಳನ್ನು ನೋಡಿದಾಗ ಅವುಗಳು ಕೂಡ ಆಮೆಗತಿಯಲ್ಲಿ ನಡೆಯುತ್ತಿರುವುದು ಕಂಡುಬರುತ್ತದೆ. ಅವುಗಳು ಈ ಕೆಳಗಿನಂತಿವೆ.

- ಗ್ರಾಮ ಮಟ್ಟದಲ್ಲಿ, ಗ್ರಾಮ ಪಂಚಾಯಿತಿಯು ಯೋಜನೆಯ ಅನುಷ್ಠಾನದ ಪ್ರಮುಖ ಪ್ರಾಧಿಕಾರವಾಗಿರುತ್ತದೆ.
- ವಾರ್ಡ್ ಸಭೆ ಮತ್ತು ಗ್ರಾಮ ಸಭೆ ಇವುಗಳ ಮೂಲಕ ಶಿಫಾರಸ್ಸಾಗಿ ಬರುವ ಕಾಮಗಾರಿಗಳ ಪೈಕಿ ಆದ್ಯತೆಯ ಮೇರೆಗೆ ಅವುಗಳನ್ನು ಗುರುತಿಸಿ ಅನುಷ್ಠಾನಗೊಳಿಸುವ ಮತ್ತು ಮೇಲ್ವಿಚಾರಣೆ ಮಾಡುವ ಜವಾಬ್ದಾರಿ ಗ್ರಾಮ ಪಂಚಾಯಿತಿಯದ್ದು.
- ಗ್ರಾಮ ಪಂಚಾಯಿತಿಯು ನೊಂದಣಿಗಾಗಿ ಸಲ್ಲಿಸುವ ಅರ್ಜಿಗಳನ್ನು ಸ್ವೀಕರಿಸಲು ಹಾಗೂ ಉದ್ಯೋಗ ಚೀಟಿಗಳನ್ನು ವಿತರಿಸುವ ಕೆಲಸವನ್ನು ಮಾಡಬೇಕು.

ಹೀಗೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಸಂಬಂಧಿಸಿದಂತೆ ಇನ್ನೂ ಹಲವಾರು ಕಾರ್ಯಗಳನ್ನು ಗ್ರಾಮ ಪಂಚಾಯಿತಿಯು ಮಾಡಬೇಕಾಗುತ್ತದೆ. ಹೀಗೆ ಗ್ರಾಮ ಪಂಚಾಯತಿಯ ಕಾರ್ಯಗಳನ್ನು ವಿವರಿಸಬಹುದಾಗಿದೆ. ಇಂದು ಗ್ರಾಮ ಪಂಚಾಯಿತಿಗಳು ತನಗೆ ವಹಿಸಿರುವಂತಹ ಎಲ್ಲಾ ಕಾರ್ಯಗಳನ್ನು ಪರಿಪೂರ್ಣಗೊಳಿಸುವುದಿಲ್ಲ. ಇದಕ್ಕೆ ಪಟ್ಟಬದ್ರ ಹಿತಾಸಕ್ತಿಗಳು ಇದರ ಹಿಂದಿದ್ದು ತಮ್ಮ ಸ್ವಾರ್ಥಕ್ಕಾಗಿ ಗ್ರಾಮ ಪಂಚಾಯ್ತಿಗಳನ್ನು ಬಳಸಿಕೊಳ್ಳುತ್ತಿದ್ದಾರೆ. ಹಾಗಾಗಿ ಗ್ರಾಮಪಂಚಾಯ್ತಿಗಳು ಗ್ರಾಮಗಳ ಅಭಿವೃದ್ಧಿ ಕಾರ್ಯಗಳನ್ನು ಮಾಡುವಲ್ಲಿ ವಿಫಲವಾಗಿವೆ. ಒಟ್ಟಿನಲ್ಲಿ ದೇಶದ ಅಭಿವೃದ್ಧಿ ಗ್ರಾಮೀಣ ಅಭಿವೃದ್ಧಿಯಲ್ಲಿ ಅಡಗಿರುತ್ತದೆ. ಹಾಗಾಗಿ ಗ್ರಾಮ ಪಂಚಾಯಿತಿಗಳು ತನ್ನ ಅಧೀನದಲ್ಲಿ ಬರುವ ಕರ್ತವ್ಯಗಳನ್ನು ಸಕ್ರಿಯವಾಗಿ ನಿಭಾಯಿಸಬೇಕು.

## ೩.೩. ಗ್ರಾಮ ಪಂಚಾಯಿತಿಗಳಲ್ಲಿ ಮಹಿಳಾ ಪ್ರತಿನಿಧೀಕರಣ

ರಾಜಕೀಯವು ಮಹಿಳೆಯರಿಗಲ್ಲ ಅದು ಪುರುಷರಿಗೆ ಮಾತ್ರ ಸೀಮಿತವಾದದ್ದು ಎಂಬ ಕಲ್ಪನೆ ಜನರಲ್ಲಿ ಬೇರೂರಿ ಬಿಟ್ಟಿದೆ. ಇದಕ್ಕೆ ಎರಡು ಪ್ರಮುಖ ಕಾರಣಗಳನ್ನು ಗುರುತಿಸಬಹುದು. ಒಂದು, ಮನೆಗೆಲಸದ ಹೊರೆ ಎರಡು, ಮಕ್ಕಳ ಪಾಲನೆ ಪೋಷಣೆ, ಇಂದು ಗ್ರಾಮೀಣ ಮಹಿಳೆಯರಿಗೆ ಮನೆಹೊಲ ಕೆಲಸಗಳ ಜೊತೆಗೆ ರಾಜಕೀಯ ಜವಾಬ್ದಾರಿಗಳನ್ನು ನಿರ್ವಹಿಸುವುದು ತುಂಬಾ ಕಷ್ಟ ಎಂಬ

ಚಿತ್ರಣವನ್ನು ನೀಡಲಾಗುತ್ತದೆ. ಹಾಗಾಗಿ ಮಹಿಳೆಯರು ರಾಜಕೀಯಕ್ಕೆ ಇಳಿಯುವುದೆಂದರೆ ಮನೆಗೆಲಸದ ಜವಾಬ್ದಾರಿಯನ್ನು ನಿರ್ಲಕ್ಷಿಸಿ ಸಂಪೂರ್ಣ ಸಮಯವನ್ನು ರಾಜಕೀಯಕ್ಕೆ ಮೀಸಲಿಡಬೇಕಾಗುತ್ತದೆ. ಹಾಗಾಗಿ ಇಂದು ಮಹಿಳೆಯು ಸಂದಿಗ್ಧ ಪರಿಸ್ಥಿತಿಯಲ್ಲಿರುವುದು ಕಂಡುಬರುತ್ತದೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ರಾಜಕೀಯಕ್ಕೆ ಕಾಲಿಟ್ಟ ಮಹಿಳೆಯರು ಕಂಡುಬರುತ್ತಾರೆ. ಇಂದು ರಾಜಕೀದ ಭೂಪಟದಲ್ಲಿ ಮಹಿಳೆಯರು ಪ್ರಧಾನ ಮಂತ್ರಿ, ಮುಖ್ಯಮಂತ್ರಿ, ಸಂಪುಟ ಸಚಿವರಾಗಿ ಮತ್ತು ರಾಷ್ಟ್ರಪತಿಯಾಗಿ, ರಾಜ್ಯ ಪಾಲರಾಗಿ, ಲೋಕಸಭೆಯ, ಸ್ಪೀಕರ್ ಆಗಿ ಅಧಿಕಾರದ ಅನುಭವ ಪಡೆಯುತ್ತಿರುವ ಹಿನ್ನೆಲೆಯಲ್ಲಿ ಗ್ರಾಮೀಣ ಭಾಗದ ಮಹಿಳೆಯರು ಗ್ರಾಮ ಪಂಚಾಯ್ತಿಯ ಚುನಾವಣೆಗಳಲ್ಲಿ ಭಾಗವಹಿಸುವ ಇಂಗಿತ ತೋರಿಸುತ್ತಿದ್ದಾರೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಮಹಿಳೆಯರ ಸ್ಥಾನ, ಪಾತ್ರ ಮತ್ತು ಭಾಗವಹಿಸುವಿಕೆಯನ್ನು ನೋಡಿದರೆ, ಅದರ ವ್ಯಾಖ್ಯೆ, ಲಕ್ಷಣಗಳು ಮಹಿಳೆಯರಿಗೆ ಸಮಾನ ಅವಕಾಶ, ಹಕ್ಕು ಸ್ಥಾನವನ್ನು ನೀಡುವುದನ್ನು ಕಾಣಬಹುದು. ಅಂದರೆ ಪ್ರಜೆಗಳು, ಪ್ರಜೆಗಳಿಂದ ಪ್ರಜೆಗಳಿಗಾಗಿ ಇರುವ ಸರಕಾರವೇ ಪ್ರಜಾಪ್ರಭುತ್ವ ಎಂಬ ವ್ಯಾಖ್ಯೆಯ ದೃಷ್ಟಿಯಿಂದ ಒಂದು ರಾಷ್ಟ್ರದ ಪ್ರಜೆಗಳಾಗಿ ಮಹಿಳೆಯರು ಸಮಾನ ಸ್ಥಾನ, ಅವಕಾಶ ಹಾಗೂ ಭಾಗವಹಿಸುವಿಕೆಯನ್ನು ಪಡೆಯುತ್ತಾರೆ. ಇಂದಿನ ಪ್ರಜಾಪ್ರಭುತ್ವದ ರಾಜಕೀಯದಲ್ಲಿ ಜನರು ಎರಡು ರೀತಿಯಲ್ಲಿ ಭಾಗವಹಿಸುತ್ತಾರೆ. ಒಂದು ರಾಜಕೀಯ ಪ್ರಕ್ರಿಯೆಯಲ್ಲಿ ಅಥವಾ ಚಟುವಟಿಕೆಗಳಲ್ಲಿ ನೇರವಾಗಿ ಭಾಗವಹಿಸುವುದು. ಅಂದರೆ ಪಕ್ಷಕ್ಕೆ ಸೇರುವುದು, ಪಕ್ಷದ ಕಾರ್ಯಕರ್ತರಾಗಿ ಕೆಲಸ ಮಾಡುವುದು, ಪಕ್ಷದ ಪ್ರತಿನಿಧಿಯಾಗಿ ಅಥವಾ ಸ್ವತಂತ್ರವಾಗಿ ಚುನಾವಣೆಗೆ ನಿಲ್ಲುವುದು, ಪಕ್ಷದ ನೀತಿ ಮತ್ತು ಸರಕಾರದ ನೀತಿ ನಿರೂಪಿಸುವುದು. ಮತದಾರರಾಗಿ ಮತ ಚಲಾಯಿಸುವುದರ ಮೂಲಕ ರಾಜಕೀಯದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುವುದಕ್ಕೆ ಔಪಚಾರಿಕ ರಾಜಕೀ ಪ್ರಕ್ರಿಯೆ ಎಂದು ಕರೆಯುತ್ತಾರೆ. ಎರಡನೆಯದಾಗಿ ದೇಶದ ಎಲ್ಲಾ ಜನರು ಸರ್ಕಾರದಲ್ಲಾಗಲೀ ರಾಜಕೀಯ ಪಕ್ಷಗಳಲ್ಲಾಗಲಿ ಭಾಗವಹಿಸುವುದಕ್ಕೆ ಸಾಧ್ಯವಿಲ್ಲ. ರಾಜಕೀಯದಲ್ಲಿ ನೇರವಾಗಿ ಭಾಗವಹಿಸದೆ ವಿವಿಧ ಸಂಘಟನಾತ್ಮಕ ಚಳುವಳಿ, ಆಂದೋಲನಗಳ ಮೂಲಕ ಸರ್ಕಾರದ ಮೇಲೆ, ಅಧಿಕಾರದಲ್ಲಿರುವ ದಕ್ಷರ ಮೇಲೆ ಒತ್ತಡ ತರುವುದು. ಈ ಕ್ರಿಯೆಗೆ ಅನೌಪಚಾರಿಕ ರಾಜಕೀಯ ಪ್ರಕ್ರಿಯೆ ಎಂದು ಕರೆಯುತ್ತಾರೆ. ಈ ಎರಡೂ ರಾಜಕೀಯ ಪ್ರಕ್ರಿಯೆಗಳಲ್ಲಿ ಮಹಿಳೆಯು ಸಕ್ರಿಯವಾಗಿ ಭಾಗವಹಿಸುತ್ತಾ ಬಂದಿದ್ದಾಳೆ. ಒಟ್ಟು ಜನಸಂಖ್ಯೆಯಲ್ಲಿ ಅರ್ಧದಷ್ಟು ಜನರು ಮಹಿಳೆಯರಾಗಿದ್ದರೂ ರಾಜಕೀಯ ಕ್ಷೇತ್ರದಲ್ಲಿ ಅವರ ಸಂಖ್ಯೆ ಬೆರಳೆಣಿಕೆಯಷ್ಟು. ಕೆಲವೇ ಮಂದಿ ಮಹಿಳೆಯರು ರಾಜಕೀಯ ಅಧಿಕಾರವನ್ನು ಹೊಂದಿದ್ದಾರೆ. ಇತಿಹಾಸವನ್ನು ಮುಂದಿಟ್ಟುಕೊಂಡು ಕಿತ್ತೂರು ಚೆನ್ನಮ್ಮ, ಝಾನ್ಸಿ ರಾಣಿ ಲಕ್ಷ್ಮೀ ಬಾಯಿ, ರಜಿಯಾ ಸುಲ್ತಾನ, ಇಂದಿರಾಗಾಂಧಿ ಹೀಗೆ ಒಂದೆರಡು ಮಂದಿಯನ್ನು ಹೆಸರಿಸಿ ಅವರನ್ನೇ,

ವೈಭವೀಕರಿಸಲಾಗುತ್ತದೆ. ಆದರೆ ವಾಸ್ತವದಲ್ಲಿ ಮಹಿಳೆಯರು ಯಾವತ್ತೂ ರಾಜಕೀಯ ಅಧಿಕಾರವನ್ನು ಹೊಂದಿರುವುದು ಕಂಡುಬಂದಿಲ್ಲ. ಈಗಲೂ ಕಂಡುಬರುತ್ತಿಲ್ಲ. ಸಂವಿಧಾನ ಕೊಟ್ಟಿರುವ ಸೌಲಭ್ಯದಿಂದ ಮಹಿಳೆಯರು ಸಂಸತ್ತಿನಲ್ಲಿ, ವಿಧಾನ ಸಭೆಗಳಲ್ಲಿ ಹಾಗೂ ಪಂಚಾಯತ್ ವ್ಯವಸ್ಥೆಯಲ್ಲಿ ಪ್ರತಿನಿಧಿಗಳಾಗಿ ಔಪಚಾರಿಕ ರಾಜಕೀಯ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತಿದ್ದಾರೆ. ಆದರೆ ಅವರ ಜನಸಂಖ್ಯೆಗೆ ಹೋಲಿಸಿದರೆ ಅವರ ಪ್ರಾತಿನಿಧ್ಯ ತುಂಬ ಕಡಿಮೆ.

ಇಂದು ಗ್ರಾಮ ಪಂಚಾಯ್ತಿಗಳಲ್ಲಿ ಮಹಿಳಾ ಸದಸ್ಯರನ್ನು ಕಾಣಲಾಗುತ್ತದೆ. ಮಹಿಳೆಯರಿಗೆ ಇರುವ ಶೇ.೩೩ರಷ್ಟು ಮೀಸಲಾತಿಯು ಮಹಿಳೆಯರನ್ನು ರಾಜಕೀಯದಲ್ಲಿ ಪಾಲ್ಗೊಳ್ಳುವಂತೆ ಮಾಡಿದೆ. ಆದರೆ ಗ್ರಾಮಪಂಚಾಯ್ತಿಗೆ ಆಯ್ಕೆಯದ ಮಹಿಳಾ ಸದಸ್ಯೆಯರನ್ನು ನಾವು. ನೋಡಿದಾಗ ಅವರು ತಮ್ಮ ಸ್ವಇಚ್ಛೆಯಿಂದ ರಾಜಕೀಯಕ್ಕೆ ಬಂದವರಲ್ಲ ಎಂಬುದು ತಿಳಿದುಬರುತ್ತದೆ. ಮನೆಯಲ್ಲಿನ ಗಂಡನ ಒತ್ತಡದಿಂದಲೋ, ಊರಿನ ಹಿರಿಯರ ಒತ್ತಡದಿಂದಲೋ ಅವರು ರಾಜಕೀಯಕ್ಕೆ ಪ್ರವೇಶವನ್ನು ಪಡೆದಿರುತ್ತಾರೆ ಮತ್ತು ಇವರು ಯಾವುದೇ ಅಧಿಕಾರವನ್ನು ಸಹ ಹೊಂದಿರುವುದಿಲ್ಲ. ಏಕೆಂದರೆ ಪತಿಯ ಇಚ್ಛೆಯ ಮೇರೆಗೆ ಅವಳು ರಾಜಕೀಯಕ್ಕೆ ಧುಮುಕಿರುತ್ತಾಳೆ. ಹಾಗಾಗಿ ಪತಿಯು ಏನು ಹೇಳುತ್ತಾನೋ ಅದನ್ನು ಕೇಳಿಕೊಂಡು ಹೋಗಬೇಕಾಗುತ್ತದೆ. ಅವಳಿಗೆ ಯಾವುದೇ ರೀತಿಯಲ್ಲಿ ನಿರ್ಣಯಗಳನ್ನು ತೆಗೆದುಕೊಳ್ಳಲು ಅಧಿಕಾರವಿರುವುದಿಲ್ಲ. ಸೋಜಿಗದ ಸಂಗತಿ ಎಂದರೆ ಒಬ್ಬ ಮಹಿಳೆ ಗ್ರಾಮ ಪಂಚಾಯ್ತಿಯ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದರೂ ಸಹ ಅವಳು ಮನೆಯ ಕೆಲಸಗಳಿಗೆ ಮಾತ್ರ ಸೀಮಿತಳಾಗಿರುತ್ತಾಳೆ. ಮತ್ತು ಮನೆಯಲ್ಲಿ ಮುಸುರೆ ತಿಕ್ಕುವ, ಮಕ್ಕಳನ್ನು ಪೋಷಿಸುವ ಕೆಲಸದಲ್ಲಿ ತೊಡಗಿಕೊಂಡಿರುತ್ತಾಳೆ. ಪುರುಷನು ಮಾತ್ರ ಆಕೆಯ ಹೆಸರನ್ನು ಹೇಳಿಕೊಂಡು ರಾಜಾರೋಷವಾಗಿ ಓಡಾಡಿಕೊಂಡು ಅವಳ ಅಧಿಕಾರವನ್ನೆಲ್ಲಾ ಚಲಾಯಿಸುತ್ತಿರುತ್ತಾನೆ. ಏಕೆಂದರೆ ಮಹಿಳೆಯು ದೈಹಿಕವಾಗಿ ದುರ್ಬಲವಾಗಿದ್ದರಿಂದ ರಾಜಕೀಯದಲ್ಲಿ ಎದುರಾಗುವ ಸಮಸ್ಯೆಗಳನ್ನು, ಕಷ್ಟ ಕಾರ್ಪಣ್ಯಗಳನ್ನು ಬಗೆಹರಿಸುವ ಸಾಮರ್ಥ್ಯ ಇಲ್ಲದವಳು ಎಂಬ ಭಾವನೆ ವ್ಯಾಪಕವಾಗಿದೆ. ಮಹಿಳೆ ಸಮಾಜದಲ್ಲಿ ಗೌರವಯುತವಾದ ಸ್ಥಾನವನ್ನು ಹೊಂದಿದ್ದಾಳೆ. ಹಾಗಾಗಿ ಅವಳು ದಿನನಿತ್ಯದ ಕೌಟುಂಬಿಕ ಜೀವನಕ್ಕೆ ಮಾತ್ರ ಸೀಮಿತಳು ಎಂಬುವ ಮನೋಭಾವನೆಗಳು ಪುರುಷನಲ್ಲಿ ಇರುವುದರಿಂದ ಮಹಿಳೆ ಮನೆಯಿಂದ ಹೊರಬಂದು ರಾಜಕೀಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಆಗುತ್ತಿಲ್ಲ. ಇನ್ನೂ ಮುಂದೆ ಹೋಗಿ ಮಹಿಳೆಯರೇ ಸ್ವತಃ ರಾಜಕೀಯದ ಬಗ್ಗೆ ಔದಾಸೀನ ಮನೋಭಾವನೆಯನ್ನು ಹೊಂದಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಯಾರನ್ನಾದರೂ ಗ್ರಾಮ ಪಂಚಾಯಿತಿಯ ಸದಸ್ಯರನ್ನು ಅವರ ಕರ್ತವ್ಯಗಳ ಬಗ್ಗೆ ಕೇಳಿದರೆ ಅವರು ನಮಗೆಲ್ಲಾ ಇವು ತಿಳಿಯುವುದಿಲ್ಲ. ಮನೆಯ ಯಜಮಾನರು ಇರಬೇಕಾದರೆ ನಮಗೇನು, ಅವರೇ ಎಲ್ಲಾ ಕೆಲಸಗಳನ್ನು ನೋಡಿಕೊಂಡು ಹೋಗುತ್ತಾರೆ. ಅವರು ಎಲ್ಲಿ ಸಹಿ ಮಾಡು

ಅನ್ನುತ್ತಾರೋ ಅಲ್ಲಿ ಸಹಿ ಮಾಡುತ್ತೇವೆ. ಮನೆಯ ಕೆಲಸಗಳನ್ನೇ ಮಾಡಿಕೊಂಡು ಹೋದರೆ ಸಾಕಾಗಿದೆ. ಎಂಬಂತಹ ಧೋರಣೆಗಳು ಮಹಿಳೆಯ ಬಾಯಿಯಿಂದಲೇ ಬರುತ್ತವೆ. ಇಲ್ಲಿ ಗಮನಿಸಬೇಕಾದುದು ಪಿತೃಪ್ರಧಾನ ವ್ಯವಸ್ಥೆಯು ತನ್ನ ಮೌಲ್ಯಗಳನ್ನು ಮಹಿಳೆಯರ ಮೇಲೆ ಹೇಗೆ ಬಿತ್ತಿವೆ ಹಾಗೂ ಮಹಿಳೆ ಅವುಗಳನ್ನು ಒಪ್ಪಿಕೊಂಡಿರುವುದು ಎಂಬುದು ಗಮನಿಸಬಹುದು. ಇನ್ನೊಂದು ವಿಷಯವೆಂದರೆ ಮಹಿಳೆಯೂ ಸಹ ಕುಟುಂಬದಿಂದ ಹೊರ ಬರಲು ಪ್ರಯತ್ನಿಸುತ್ತಿಲ್ಲ. ಹಾಗಾಗಿ ಅವರು ಕುಟುಂಬಕ್ಕೆ ಮಾತ್ರ ಸೀಮಿತರಾಗಿರುವುದು ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುತ್ತದೆ. ಮತ್ತು ಗ್ರಾಮ ಪಂಚಾಯಿತಿಯ ಸದಸ್ಯೆಯರು ಅಥವಾ ಅಧ್ಯಕ್ಷರು ಕೆಲವು ಸಂದರ್ಭದಲ್ಲಿ ಕೂಲಿ ಕೆಲಸಗಳಿಗೆ ಹೋಗುವಂತಹ ಮತ್ತು ಅವಳ ಅಧಿಕಾರವನ್ನು ಪುರುಷನು ಚಲಾಯಿಸುವಂತಹ ಸಂದರ್ಭಗಳು ಕಂಡುಬರುತ್ತವೆ.

### ಗ್ರಾಮ ಸಭೆಯಲ್ಲಿ ಮಹಿಳೆಯರ ಭಾಗವಹಿಸುವಿಕೆ

ಗ್ರಾಮ ಪಂಚಾಯಿತಿಗೆ ಆಯ್ಕೆಯಾದ ಮಹಿಳೆಯರು ಮತ್ತು ಪುರುಷರು ಗ್ರಾಮ ಸಭೆಯಲ್ಲಿ ಭಾಗವಹಿಸಬೇಕು. ಗ್ರಾಮ ಸಭೆಯು ಬಹಳ ಮುಖ್ಯವಾದ ಸಭೆ. ಏಕೆಂದರೆ ಸಾಮಾನ್ಯ ಜನರ ಕುರಿತಾದ ಸಮಸ್ಯೆಗಳು ನೇರವಾಗಿ ಪಂಚಾಯಿತಿಯ ಸದಸ್ಯರಿಗೆ ತಲುಪುತ್ತವೆ. ಈ ಗ್ರಾಮ ಸಭೆಗಳು ಪ್ರತೀ ೬ ತಿಂಗಳಿಗೊಮ್ಮೆ ನಡೆಯಬೇಕು. ಗ್ರಾಮ ಸಭೆಗಳಲ್ಲಿ ಮಹಿಳೆಯರು ಭಾಗವಹಿಸದೇ ಇರುವುದನ್ನು ಕಾಣುತ್ತೇವೆ. ಏಕೆಂದರೆ ಮಹಿಳೆಯನ್ನು ಕೇವಲ ಕೆಲವು ವಲಯಗಳಿಗೆ ಮತ್ತು ಕೆಲವು ಕರ್ತವ್ಯಗಳಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಹಾಗೂ ಗ್ರಾಮೀಣ ಭಾಗದಲ್ಲಿ ಗ್ರಾಮ ಪಂಚಾಯಿತಿಗೆ ಆಯ್ಕೆಯಾದ ಮಹಿಳೆಯರು ಅನಕ್ಷರಸ್ಥರಾಗಿರುತ್ತಾರೆ. ಹಾಗಾಗಿ ಅವರು ಇವುಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗುತ್ತಿಲ್ಲ. ಹಾಗಾಗಿ ಗ್ರಾಮೀಣ ಅಭಿವೃದ್ಧಿಯಲ್ಲಿ ತಮ್ಮ ಪಾತ್ರವೇ ಇಲ್ಲ ಎನ್ನುವಂತಹ ಸ್ಥಿತಿಯನ್ನು ನಿರ್ಮಿಸಿಕೊಂಡಿದ್ದಾರೆ. ಹಾಗೂ ಸಾಂಪ್ರದಾಯಿಕ ಸಾಮಾಜಿಕ ಸಂಕುಚಿತ ಮನೋಭಾವ, ಐಡಿಯಾಲಜಿಗಳಿಂದ ಹೊರಬರಲು ಸಾಧ್ಯವಾಗುತ್ತಿಲ್ಲ. ಹಾಗಾಗಿ ಮಹಿಳೆಯರಿಗೆ ಇರುವಂತಹ ಸಮಸ್ಯೆಗಳು ಬಗೆಹರಿಯದೆ ಸಮಸ್ಯೆಗಳಾಗಿಯೇ ಉಳಿದುಬಿಟ್ಟಿವೆ. ಈ ಗ್ರಾಮಸಭೆಗಳು ಗ್ರಾಮೀಣ ಜನರ ಕುಂದುಕೊರತೆಗಳನ್ನು ಗಣನೆಗೆ ತೆಗೆದುಕೊಂಡು ಅವುಗಳಿಗೆ ಪರಿಹಾರವನ್ನು ಕೊಡುವ ಒಂದು ವೇದಿಕೆಯಾಗಬೇಕು. ಮತ್ತು ಸ್ತ್ರೀ ಪುರುಷರು ಸಮಾನವಾಗಿ ಈ ಗ್ರಾಮ ಸಭೆಗಳಲ್ಲಿ ಭಾಗವಹಿಸುವ ಹಾಗೆ ನೋಡಿಕೊಳ್ಳಬೇಕು. ಗ್ರಾಮದಲ್ಲಿನ ಗ್ರಾಮ ಪಂಚಾಯಿತಿಗೆ ಚುನಾಯಿತ ಮಹಿಳೆಯರು ಮತ್ತು ಚುನಾಯಿತರಲ್ಲದ ಅಂದರೆ ಗ್ರಾಮದ ಇತರ ಮಹಿಳೆಯರು ಗ್ರಾಮ ಸಭೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಮತ್ತು ಪುರುಷನ ಚಿಂತನೆಯಲ್ಲಿಯೂ ಬದಲಾವಣೆ ಕಾಣಬೇಕಾಗುತ್ತದೆ.

ಇಂದು ಗ್ರಾಮ ಪಂಚಾಯ್ತಿಗಳು ಗ್ರಾಮಸಭೆಗಳನ್ನು ರೂಪಿಸುವುದೇ ಕಷ್ಟವಾಗಿದೆ. ಏಕೆಂದರೆ ಗ್ರಾಮ ಪಂಚಾಯ್ತಿಗಳಲ್ಲಿನ ಸದಸ್ಯರಿರಬಹುದು ಅಥವಾ ಅಧ್ಯಕ್ಷರು, ಕಾರ್ಯದರ್ಶಿಗಳಿರಬಹುದು. ಇವರುಗಳು ಯಾರೂ ಗ್ರಾಮಸಭೆಗಳ ಬಗ್ಗೆ ಆಸಕ್ತಿವಹಿಸದೇ ಇರುವುದನ್ನು ಕಾಣಲಾಗುತ್ತದೆ. ಹಾಗಾಗಿ ಗ್ರಾಮಸಭೆಗಳು ಸಮರ್ಪಕವಾಗಿ ನಡೆಯುತ್ತಿಲ್ಲ ಎಂದು ಹೇಳಬಹುದು. ಹೀಗಾದಾಗ ಗ್ರಾಮೀಣ ಅಭಿವೃದ್ಧಿ ಎಂಬುದು ಮರೆಯಾಗಿ ಹೋಗುತ್ತಿದೆ. ಅಥವಾ ಗಗನ ಕುಸುಮವಾಗಿಬಿಟ್ಟಿದೆ. ಗ್ರಾಮ ಸಭೆಗಳು ನಡೆಯುತ್ತಿವೆ ಎಂಬುದು ಕೇವಲ ಪುಸ್ತಕಗಳಲ್ಲಿ ಮಾತ್ರ ಗೋಚರಿಸುತ್ತಿವೆ. ವಾಸ್ತವದಲ್ಲಿ ಇವು ಯಾವುವೂ ನಡೆದಿರುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಗ್ರಾಮದ ಜನರಿಗೆ ಗ್ರಾಮ ಪಂಚಾಯಿತಿಯ ಬಗ್ಗೆಯಾಗಲೀ, ಅವುಗಳ ಕಾರ್ಯಗಳ ಬಗೆಗಾಗಲೀ ತಿಳಿಯುವುದಿಲ್ಲ. ಇನ್ನು ಗ್ರಾಮೀಣ ಮಹಿಳೆಯರ ವಿಷಯಕ್ಕೆ ಬಂದರೆ ಕೇವಲ ಮನೆಗೆ, ಹೊಲಗದ್ದೆಗಳ ಕೆಲಸಗಳಿಗೆ ಸೀಮಿತಗೊಳಿಸಲಾಗಿದೆ. ಆಕೆಯ ಸಾಮಾಜಿಕ ಅಸ್ಮಿತೆಯನ್ನು ನಿರಾಕರಿಸಲಾಗಿದೆ.

ಭಾರತದಲ್ಲಿ ಸಂವಿಧಾನಾತ್ಮಕವಾಗಿ ಎಲ್ಲಾ ನಾಗರೀಕರಿಗೆ ಸರಿಸಮಾನವಾಗಿ ಹಕ್ಕುಗಳು ದೊರಕಿವೆಯಾದರೂ ಅವುಗಳ ಪಾಲನೆಯಲ್ಲಿ ಅಥವಾ ಜಾರಿಯಲ್ಲಾಗಲೀ ಇಂದಿಗೂ ಸಮರ್ಪಕವಾಗಿ ಅಥವಾ ನಿರ್ದಿಷ್ಟವಾದ ಪ್ರಮಾಣದ ಗುರಿಯನ್ನು ಸಾಧಿಸಿಲ್ಲ. ಕೇವಲ ಹಕ್ಕುಗಳನ್ನು ಹಾಕಿಕೊಟ್ಟ ಎಲ್ಲರಿಗೂ ಒಳ್ಳೆಯದಾಗುತ್ತದೆ ಎಂದು ಭಾವಿಸಿದ್ದು ಕೇವಲ ಕನಸಾಗಿದೆ. ಏಕೆಂದರೆ ಮಹಿಳಾ ಸಮುದಾಯಗಳಿಗೆ ನಾಗರಿಕ ಹಕ್ಕುಗಳ ಪರಿವೇ ಇಲ್ಲ ಮತ್ತು ಅದರ ಪ್ರಾಥಮಿಕ ಅರಿವೂ ಸಹ ಇಲ್ಲವಾಗಿದೆ. ಹಾಗಾಗಿ ಸ್ವತಂತ್ರ ಬಂದು ಸುಮಾರು ವರ್ಷಗಳೇ ಕಳೆದರೂ ಮಹಿಳೆ ಸ್ವಾತಂತ್ರ್ಯತೆಯನ್ನು ಸಾಧಿಸಿಲ್ಲ. ಇನ್ನು ಗ್ರಾಮ ಪಂಚಾಯಹಿತಿಗಳಿಗೆ ಚುನಾಯಿತರಾದ ಮಹಿಳೆಯರು ಸರಕಾರಿ ಅಧಿಕಾರಗಳ ಜೊತೆ ಯಾವ ರೀತಿಯ ಸಂಬಂಧಗಳನ್ನು ಹೊಂದಿರುತ್ತಾರೆ ಎಂಬುದನ್ನು ಗಮನಿಸಿದಾಗ ಯಾವುದೇ ಒಂದು ಆಡಳಿತದಲ್ಲಿ ಸರಕಾರಿ ಅಧಿಕಾರಿಗಳ ಪಾತ್ರ ತುಂಬಾ ಗಮನಾರ್ಹವಾಗಿರುತ್ತದೆ. ಗ್ರಾಮ ಪಂಚಾಯ್ತಿಗಳ ಆಡಳಿತದಲ್ಲಿ ಇವರ ನಿರ್ವಹಣೆ ತುಂಬಾ ಅವಶ್ಯಕವಾಗಿದೆ. ಏಕೆಂದರೆ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ರಾಜಕೀಯದಲ್ಲಿ ಭಾಗವಹಿಸುವುದು ಅನಕ್ಷರಸ್ಥರು. ಆದ್ದರಿಂದ ಸರಕಾರಿ ಅಧಿಕಾರಿಗಳು ಸಾಮಾನ್ಯವಾಗಿ ಉನ್ನತ ಶಿಕ್ಷಣವನ್ನು ಪಡೆದು ಕಾಯ್ದೆ ಕಾನೂನುಗಳ ಬಗ್ಗೆ ತಿಳಿದುಕೊಂಡಿರುತ್ತಾರೆ. ಗ್ರಾಮೀಣ ಪ್ರದೇಶದ ಜನರಿಗೆ ಕಾಯ್ದೆ ಕಾನೂನುಗಳ ಬಗ್ಗೆ ಅಷ್ಟಾಗಿ ಅರಿವು ಇರುವುದಿಲ್ಲ. ಇದರಿಂದ ಆಡಳಿತವು ಸುಗಮವಾಗಿ ನಡೆಯುವುದಿಲ್ಲ. ಮತ್ತು ಇಲ್ಲಿ ಮಧ್ಯವರ್ತಿಗಳು ಹೆಚ್ಚಾಗಿ ಲಾಭ ಪಡೆಯುತ್ತಾರೆ. ಇದರಿಂದಾಗಿ ಗ್ರಾಮೀಣ ಜನರಿಗೆ ಸರಕಾರದ ಯಾವುದೇ ಅಭಿವೃದ್ಧಿ ಯೋಜನೆಗಳ ಫಲಗಳು ದೊರಕುವುದಿಲ್ಲ. ಹಾಗಾಗಿ ಸರಕಾರಿ ಅಧಿಕಾರಿಗಳ ಪಾತ್ರ ಗ್ರಾಮ ಪಂಚಾಯಿತಿಗಳಲ್ಲಿ ಬಹಳ ಮುಖ್ಯವಾಗಿದೆ. ಇಲ್ಲಿ ಈ ಸರಕಾರಿ ಅಧಿಕಾರಿಗಳು ಕಾಲಕಾಲಕ್ಕೆ ಗ್ರಾಮ ಸಭೆಗಳನ್ನು ಏರ್ಪಡಿಸುವುದು. ಈ ಗ್ರಾಮಸಭೆಗಳಿಗೆ ಗ್ರಾಮಗಳಲ್ಲಿನ ಮಹಿಳಾ ಸ್ವ ಸಹಾಯ ಸಂಘಗಳನ್ನು

ಆಹ್ವಾನಿಸುವಂತಹ ಕಾರ್ಯಗಳನ್ನು ಮಾಡಬೇಕಾಗುತ್ತದೆ. ಹಾಗೆಯೇ ಸ್ತ್ರೀ ಶಕ್ತಿಸಂಘಗಳು ಗ್ರಾಮ ಸಭೆಗಳಲ್ಲಿ ಭಾಗವಹಿಸುವ ಇಂಗಿತವನ್ನು ಹೊಂದಿರಬೇಕು. ಮುಖ್ಯವಾಗಿ ಗ್ರಾಮ ಸಭೆಗಳನ್ನು ಜನರಿಗೆ ಅನುಕೂಲವಾಗುವಂತಹ ದಿನಗಳಲ್ಲಿ ಏರ್ಪಡಿಸಬೇಕು. ಅಂದಾಗ ಮಾತ್ರ ಗ್ರಾಮಸಭೆಗೆ ಎಲ್ಲರೂ ಭಾಗವಹಿಸಲು ಅವಕಾಶ ದೊರೆಯುತ್ತದೆ. ನನ್ನ ಅಧ್ಯಯನದ ಕ್ಷೇತ್ರಗಳಲ್ಲಿ ಮಹಿಳೆಯರು ಹೆಚ್ಚಾಗಿ ಅನಕ್ಷರಸ್ಥರಾಗಿದ್ದು ಅವರು ಯಾವುದೇ ಗ್ರಾಮ ಸಭೆಗಳಲ್ಲಿ ಭಾಗವಹಿಸದೇ ಇರುವುದು ಕಂಡುಬರುತ್ತದೆ. ಮಹಿಳಾ ಸದಸ್ಯೆಯರೂ ಸಹ ಇದ್ದಾರೆ. ಆದರೆ ಇವರು ಯಾರೂ ಅಧಿಕಾರವನ್ನು ಮತ್ತು ತಮ್ಮ ಹಕ್ಕುಗಳನ್ನು ಚಲಾಯಿಸುವ ಸ್ಥಿತಿಯಲಿಲ್ಲ. ಏಕೆಂದರೆ ಅವರ ಪತಿಯಂದಿರುಗಳೇ ಇಲ್ಲವೆ ಊರ ಮುಖಂಡರು ಆಕೆಯ ಅಧಿಕಾರವನ್ನು ಕಿತ್ತುಕೊಳ್ಳುತ್ತಿದ್ದಾರೆ.

ಇಂದು ರಾಜಕೀಯವೆಂಬುದು ಕೇವಲ ಹಣದ ಮೇಲೆ ನಿಂತಿರುವುದು ವಾಸ್ತವ ಸತ್ಯ. ಈ ಹಣಕ್ಕಾಗಿ ಹಲವಾರು ಅಕ್ರಮ ವ್ಯವಹಾರದಲ್ಲಿ ತೊಡಗಬೇಕಾಗುತ್ತದೆ. ಗ್ರಾಮ ಪಂಚಾಯಿತಿಯ ಚುನಾವಣೆಯಲ್ಲಿ ಖರ್ಚು ಮಾಡಿದ ಹಣವನ್ನು ಗೆದ್ದ ಮೇಲೆ ಅದನ್ನು ಗಳಿಸುವ ಹಂತದಲ್ಲಿ ಹಲವಾರು ಅವ್ಯವಹಾರಗಳನ್ನು ಮಾಡಲಾಗುತ್ತದೆ. ಚುನಾಯಿತರು ಮಹಿಳಾ ಸದಸ್ಯೆಯರಾಗಿದ್ದರೂ ಸಹ ಅವರ ಹೆಸರಿನಲ್ಲಿ ಪುರುಷರು ಹಣವನ್ನು ಸಂಪಾದಿಸತೊಡಗಿದ್ದಾರೆ. ಹಾಗಾಗಿ ಗ್ರಾಮ ಪಂಚಾಯಿತಿಯಿಂದ ಹಿಡಿದು ರಾಜ್ಯ ಮತ್ತು ರಾಷ್ಟ್ರಮಟ್ಟದ ರಾಜಕೀಯದಲ್ಲಿನ ಎಲ್ಲಾ ಸದಸ್ಯರೂ ಸಹ ಸ್ವಾರ್ಥ ಮನೋಭಾವನೆಯನ್ನು ಹೊಂದಿದವರಾಗಿದ್ದಾರೆ. ಈ ಸ್ವಾರ್ಥತೆ ಸಮಗ್ರತೆಯನ್ನು ಸಾಧಿಸುವುದಿಲ್ಲ. ಕೇವಲ ಸ್ವಂತ ಹಿತಕ್ಕಾಗಿ ರಾಜಕೀಯವನ್ನು ಬಳಸಿಕೊಳ್ಳುವ ಸಂದರ್ಭಗಳೇ ಹೆಚ್ಚಾಗಿವೆ. ಈ ಸ್ವಾರ್ಥ ರಾಜಕೀಯಕ್ಕೆ ಒಂದು ಉದಾಹರಣೆಯಾಗಿ ಕೆಲವು ಗ್ರಾಮ ಪಂಚಾಯ್ತಿಗಳಲ್ಲಿ ಊರಿನ ಜನರು ವಿರೋಧದ ನಡುವೆಯೂ ಅವಿರೋಧವಾಗಿ ಸದಸ್ಯೆಯರಾಗಿರುತ್ತಾರೆ. ಮೀಸಲಾತಿಯಂತಹ ಒಂದು ವಿಧೇಯಕದಿಂದ ಅಧ್ಯಕ್ಷ ಸ್ಥಾನವನ್ನು ಪಡೆದುಕೊಂಡಿರುತ್ತಾರೆ. ಊರಿನ ಜನರು ಸಮಸ್ಯೆಗಳನ್ನು ಅವರ ಹತ್ತಿರ ತೆಗೆದುಕೊಂಡು ಹೋದರೆ ಅವರು "ನೀವು ನಮ್ಮನ್ನು ಗೆಲ್ಲಿಸಲಿಲ್ಲ ನಾವು ಹಣ ಕೊಟ್ಟು ಗೆದ್ದು ಬಂದಿದ್ದೇವೆ. ಹಾಗಾಗಿ ನಿಮ್ಮ ಸಮಸ್ಯೆಗಳನ್ನು ಬಗೆಹರಿಸುವುದು ನಮ್ಮಿಂದ ಸಾಧ್ಯವಿಲ್ಲ" ಎಂಬಂತಹ ನೇರ ಮಾತುಗಳು ಕಂಡುಬರುತ್ತವೆ.

ಒಟ್ಟಿನಲ್ಲಿ ಗ್ರಾಮ ಪಂಚಾಯಿತಿಗಳು ಸ್ವಾರ್ಥ ರಾಜಕಾರಣಕ್ಕೆ ಒಂದು ಉತ್ತಮ ಉದಾಹರಣೆ ಯಾಗಿವೆ. ಗ್ರಾಮ ಪಂಚಾಯ್ತಿಗಳಲ್ಲಿ ಶೇ.೩೩ರಷ್ಟು ಮಹಿಳೆಯರಿಗೆ ಮೀಸಲಾತಿ ನೀಡಿರುವುದರಿಂದ ಇಂದು ಮಹಿಳೆಯರು ಸ್ವಲ್ಪ ಮಟ್ಟಿಗೆಯಾದರೂ ರಾಜಕೀಯ ವಲಯದಲ್ಲಿ ಕಾಲಿಡುವಂತಾಗಿದೆ. ಇತ್ತೀಚಿನ ಬದಲಾವಣೆಯಂತೆ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಶೇ.೫೦ರಷ್ಟು ಮೀಸಲಾತಿಯನ್ನು ಮಹಿಳೆಯರಿಗೆ ನೀಡಲಾಗಿದೆ. ಮುಂದಿನ ದಿನಮಾನಗಳಲ್ಲಿಯಾದರೂ ಮಹಿಳೆಯರು ರಾಜಕೀಯದಲ್ಲಿ

ಹೆಚ್ಚು ಹೆಚ್ಚು ಭಾಗವಹಿಸುವುದರ ಮೂಲಕ ರಾಜಕೀಯ ವಲಯದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸುವಂತಾಗಬೇಕು.

## ೩.೪. ಗ್ರಾಮ ಪಂಚಾಯಿತಿ ಮತ್ತು ಅಧಿಕಾರ ವಿಕೇಂದ್ರೀಕರಣ

ಗ್ರಾಮ ಪಂಚಾಯಿತಿಯ ರಚನೆ, ಹುಟ್ಟು ಮತ್ತು ಬೆಳವಣಿಗೆ ಹಾಗೂ ಗ್ರಾಮ ಪಂಚಾಯ್ತಿಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಹೇಗಿದೆ ಎಂಬುದನ್ನು ತಿಳಿದುಕೊಂಡು ನಂತರ ಅಧಿಕಾರ ವಿಕೇಂದ್ರೀಕರಣ ಹೇಗಾಗುತ್ತದೆ ಎಂಬುದನ್ನು ಅರಿಯುವುದು ಸೂಕ್ತ. ಇಲ್ಲಿ ವಿಕೇಂದ್ರೀಕರಣ ಎಂದರೇನು? ಎನ್ನುವ ಪ್ರಶ್ನೆ ಸಹಜವಾಗಿ ನಮ್ಮನ್ನು ಕಾಡುತ್ತದೆ. ಹಾಗೆಯೇ ವರ್ಗ, ವರ್ಣ, ಜಾತಿ, ಲಿಂಗ ಮುಂತಾದ ಬಹುಮುಖಿ ನೆಲೆಗಳಲ್ಲಿ ಸಾಮಾಜಿಕ ಶ್ರೇಣೀಕರಣವುಳ್ಳ ಭಾರತದಂತಹ ಪರಿಸರದಲ್ಲಿ ವಿಕೇಂದ್ರೀಕರಣದ ಕಲ್ಪನೆ ಎಷ್ಟು ಮಹತ್ವವಾದದ್ದು? ಎಂಬ ಪ್ರಶ್ನೆಗಳೇಳುವುದು ಸಹಜ. ವಿಕೇಂದ್ರೀಕರಣ ಎನ್ನುವುದು ವಾಸ್ತವ ಬದುಕಿನ ಸಂದರ್ಭದಿಂದ ಸಂಭವಿಸುವಂತಹದ್ದು. ಈ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರವನ್ನು ಕೆಳಹಂತದ ಅಥವಾ ಅಧೀನ ಅಧಿಕಾರಿಗಳು ಹೊಂದಿರುತ್ತಾರೆ. ತಮ್ಮ ವಿವೇಚನೆಯಂತೆ, ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಅಧಿಕಾರವನ್ನು ಕೆಳಹಂತದ ಕಛೇರಿಗಳು ಹೊಂದಿರುತ್ತವೆ. ಈ ಲಕ್ಷಣಗಳಿರುವ ಅಧೀನ ಅಥವಾ ಕೆಳಗಿನ ಹಂತಗಳು ಹೆಚ್ಚು ಸಂಖ್ಯೆಯಲ್ಲಿದ್ದರೆ ಅದಕ್ಕೆ ವಿಕೇಂದ್ರೀಕರಣ ವ್ಯವಸ್ಥೆ ಎನ್ನಬಹುದು. ಇಲ್ಲಿ ಅಧಿಕಾರ ಒಬ್ಬ ವ್ಯಕ್ತಿಯಲ್ಲಿ ಕೇಂದ್ರೀಕೃತವಾಗಿರದೆ, ವಿವಿಧ ಸ್ಥರಗಳಲ್ಲಿ, ವಿವಿಧ ಅಧಿಕಾರಗಳಲ್ಲಿ ಹಂಚಿಕೆಯಾಗಿರುತ್ತದೆ. ಈ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಗ್ರಾಮ ಪಂಚಾಯಿತಿಯು ಅತ್ಯಂತ ಕೆಳಗಿನ ಹಂತವಾಗಿದೆ.

ಗ್ರಾಮ ಪಂಚಾಯಿತಿಗಳನ್ನು ತಳಮಟ್ಟದ ಸ್ವಯಂಮಾಡಳಿತ ಸಂಸ್ಥೆಗಳು ಎಂದು ಕರೆಯಬಹುದು. ಅವುಗಳನ್ನು ವಿಕೇಂದ್ರೀಕರಣದ "ಪಾಯ"ವೆಂದು ಪರಿಗಣಿಸಲಾಗಿದೆ. ಗ್ರಾಮ ಪಂಚಾಯಿತಿ, ಗ್ರಾಮ ಸಭೆ, ಜನ ಪ್ರತಿನಿಧಿಗಳು, ಮೀಸಲಾತಿ, ಲಿಂಗ ಸಂಬಂಧಗಳು, ಅಭಿವೃದ್ಧಿ, ಮುಂತಾದ ಸಂಗತಿಗಳು ಕೇವಲ ಆಡಳಿತಾತ್ಮಕ, ಶಾಸನಾತ್ಮಕ ಸಂಗತಿಗಳಲ್ಲ. ಇವುಗಳೆಲ್ಲವೂ ಮೌಲ್ಯಗಳನ್ನು ಹೊಂದಿರುವ ಸಂಗತಿಗಳಾಗಿವೆ. ಈ ಸಂಗತಿಗಳು ಮೂಲದಲ್ಲಿ ನಂಬಿಕೆ-ಮೌಲ್ಯ-ಅಧಿಕಾರದ ಅರ್ಥವ್ಯಾಪ್ತಿಗಳು ಅಡಕವಾಗಿವೆ. ಗ್ರಾಮೀಣಾಭಿವೃದ್ಧಿಯ ಹಿನ್ನಲೆಯಲ್ಲಿ ರೂಪುಗೊಂಡಿರುವ ವಿಕೇಂದ್ರೀಕರಣ ವ್ಯವಸ್ಥೆಯು ತನ್ನದೇ ಆದ ಇತಿಹಾಸವನ್ನು ಹೊಂದಿದೆ. ಅದರ ಮೂಲವನ್ನು ಪ್ರಾಚೀನ ಕಾಲಕ್ಕೆ ಕೊಂಡೊಯ್ದರೆ ಪಂಚಾಯತ್, ಪಂಚರು ಎಂಬ ನುಡಿಯ ಸಂಸ್ಥೆಯ ಪ್ರಾಚೀನತೆಯನ್ನು ಆಧರಿಸಿ ವಿಕೇಂದ್ರೀಕರಣವು ಭಾರತದಲ್ಲಿ ಪ್ರಾಚೀನ ಕಾಲದಿಂದ ಹರಿದುಕೊಂಡು ಬಂದ ಸಂಗತಿ ಎಂಬುದು ತಿಳಿದುಬರುತ್ತದೆ. ಇಲ್ಲಿ ವಿಕೇಂದ್ರೀಕರಣವು ಒಂದು ಪ್ರಜಾಸತ್ತಾತ್ಮಕ ವ್ಯವಸ್ಥೆಯಾಗಿದೆ. ಅಂದರೆ ಜನರ ಪ್ರಾತಿನಿಧಿಕ ವ್ಯವಸ್ಥೆ. ಆದರೆ ಪ್ರಾಚೀನ ಕಾಲದಿಂದ ನಡೆದುಕೊಂಡು ಬಂದ ಪಂಚಾಯತ್ ವ್ಯವಸ್ಥೆಯಲ್ಲಿನ ಪಂಚಾಯಿತಿ, ಪಂಚರು

ಪ್ರಜಾಸತ್ತಾತ್ಮಕ ವ್ಯವಸ್ಥೆಯಾಗಿರಲು ಸಾಧ್ಯವಿಲ್ಲ. ಇಂದು ನಮ್ಮ ಗ್ರಾಮೀಣದಲ್ಲಿ ಜಾತಿ ಯಾಜಮಾನ್ಯ, ಜಮೀನ್ದಾರಿಕೆ, ಪಾಳೇಗಾರಿಕೆ ಹಾಗೂ ಅಧಿಕಾರ ಸಂಬಂಧಗಳಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಆದರೆ ಇವುಗಳು ಆಚರಣೆಯ ಸಂದರ್ಭದಲ್ಲೂ ಹೀಗೆ ಇರುತ್ತವೆ ಎಂಬುದನ್ನು ಖಚಿತವಾಗಿ ಹೇಳಲಾಗುವುದಿಲ್ಲ. ಹಾಗಾಗಿ ಗ್ರಾಮೀಣ ಭಾಗದಲ್ಲಿ ಅಧಿಕಾರದ ವಿಕೇಂದ್ರೀಕರಣ ನಡೆಯಬೇಕು ಅಂದಾಗ ಮಾತ್ರ ಗ್ರಾಮೀಣ ಪ್ರದೇಶಗಳು ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತದೆ. ವಿಕೇಂದ್ರೀಕರಣದ ಹಿಂದಿನ ತಾತ್ವಿಕತೆ ಅಧಿಕಾರವನ್ನು ಕೆಳಮಟ್ಟಕ್ಕೆ ಒಯ್ಯುವುದು ಎಂಬುದಾಗಿದೆ. ಎಲ್ .ಡಿ.ವೈಟ್ ರವರು "ಮೇಲಿನ ಹಂತದಿಂದ ಕೆಳಹಂತಕ್ಕೆ ಅಧಿಕಾರ ವರ್ಗಾವಣೆಯಾಗುವುದನ್ನು ವಿಕೇಂದ್ರೀಕರಣ" ಎಂದು ಕರೆದಿದ್ದಾರೆ. ವಿಕೇಂದ್ರೀಕರಣವು ಜನತೆಯ ಆಸಕ್ತಿಯನ್ನು ರಾಜಕೀಯದಲ್ಲಿ ಹೆಚ್ಚಿಸುತ್ತದೆ. ಜನತೆಯ ರಾಜಕೀಯದಲ್ಲಿ ಹೆಚ್ಚಾಗಿ ಭಾಗವಹಿಸಲು ಅವಕಾಶ ದೊರಕಿಸಿಕೊಡುತ್ತದೆ. ಆ ಮೂಲಕ ವಿಕೇಂದ್ರೀಕರಣ ಪ್ರಜಾಸತ್ತಾತ್ಮಕವಾಗಿದೆ.

ವಿಕೇಂದ್ರೀಕರಣ - ಪಂಚಾಯತ್ ರಾಜ್ ಸಂಸ್ಥೆಗಳು - ಗ್ರಾಮೀಣ ಅಭಿವೃದ್ಧಿ ಇವುಗಳು ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರನ್ನು ಹೇಗೆ ತೊಡಗಿಸಿಕೊಂಡಿವೆ. ಮಹಿಳೆಯರನ್ನು ಹೇಗೆ ಪರಿಭಾವಿಸಿಕೊಂಡಿವೆ. ಮಹಿಳೆಯರ ಸ್ಥಿತಿಗತಿ-ಸ್ಥಾನಮಾನಗಳಿಗೆ ಸಂಬಂಧಿಸಿದಂತೆ ಯಾವ ಬಗೆಯ ಬದಲಾವಣೆಗಳನ್ನು ತಂದಿವೆ ಎಂಬುದನ್ನು ಗಮನಿಸಬೇಕಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಅಭಿವೃದ್ಧಿ-ವಿಕೇಂದ್ರೀಕರಣ ಮತ್ತು ರಾಜಕೀಯ ಇವುಗಳಿಗೆ, ಸಂಬಂಧಿಸಿದಂತೆ ಮಹಿಳೆಯರನ್ನು ಸ್ವತಂತ್ರ ಘಟಕವಾಗಿ ಪರಿಭಾವಿಸಿಕೊಂಡಿರಲಿಲ್ಲ. ೧೯೭೦ರ ದಶಕದಲ್ಲಿ ಮಹಿಳೆಯರನ್ನು ಅಭಿವೃದ್ಧಿ ರಾಜಕಾರಣದ ನೆಲೆಗಳಲ್ಲಿ ಪರಿಭಾವಿಸಿಕೊಳ್ಳುವ ಪರಿ ಬದಲಾಯಿತು. ಇದಕ್ಕೆ ರಾಜಕಾರಣದ ನೆಲೆಗಳಲ್ಲಿ ಪರಿಭಾವಿಸಿಕೊಳ್ಳುವ ಪರಿ ಬದಲಾಯಿತು. ಇದಕ್ಕೆ ಯು.ಎನ್.ಡಿ.ಪಿ.ಯ ಪ್ರಯತ್ನಗಳು, ಟುವರ್ಡ್ಸ್ ಇಕ್ವಾಲಿಟಿಯ ವರದಿ, ಅಮರ್ತ್ಯಸೇನ್ ಬರಹಗಳು ಮತ್ತು ಎಸ್ತರ್ ಬೋಸರಪ್‌ನ ಸಂಶೋಧನೆಗಳು ಕಾರಣವಾದವು. ಆದರೆ ಮಹಿಳೆಯರನ್ನು ಕೇವಲ ಅಭಿವೃದ್ಧಿಯ ರಾಜಕಾರಣದ ಫಲಾನುಭವಿಗಳಾಗಿ ಫಲವನ್ನು ಕೇವಲ ಪಡೆದುಕೊಳ್ಳುವ ಘಟಕವಾಗಿ ಪರಿಭಾವಿಸಿಕೊಂಡಿವೆಯೇ ವಿನಃ ಅವರನ್ನು ಅಭಿವೃದ್ಧಿಯ ರಾಜಕಾರಣದ ನಿಯೋಗಿಗಳಾಗಿ ಪರಿಭಾವಿಸಿಕೊಂಡಿಲ್ಲ. ಇಂದು ಸಮಾಜ ಮತ್ತು ಸರಕಾರಗಳು ಮಹಿಳೆಯರ ದೈನಂದಿನ ಅಗತ್ಯಗಳಾದ ಆಹಾರ, ಆರೋಗ್ಯ, ಶಿಕ್ಷಣ, ಉದ್ಯೋಗ, ಸಮಾನ ವೇತನ, ಮಕ್ಕಳ ತಂತ್ರಜ್ಞಾನದಂತಹ ಅಗತ್ಯಗಳನ್ನು ಈಡೇರಿಸಲು ಮುಂದಾಗುತ್ತವೆಯೇ ವಿನಃ ಅವರ ಸಂಘರ್ಷಣಾತ್ಮಕ ಅಗತ್ಯಗಳಾದ ಲಿಂಗ ಆಧಾರಿತ ಶ್ರಮ ವಿಭಜನೆಯನ್ನು ತೊಡೆದು ಹಾಕುವುದು, ಕೌಟುಂಬಿಕ ಶ್ರಮದ ಹೊಣೆಯನ್ನು ಕಡಿಮೆ ಮಾಡುವುದು, ನೀತಿ ನಿರ್ಣಯದಲ್ಲಿ ಪಾಲ್ಗೊಳ್ಳುವುದು, ಆಸ್ತಿಯ ಲ್ಲಿ ಪಾಲು ಮುಂತಾದವುಗಳನ್ನು ನಿರ್ವಹಿಸಲು ಆಸಕ್ತಿ ತೋರುವುದಿಲ್ಲ. ಇಂತಹ ವಿಕೇಂದ್ರೀಕರಣದ ಸಾಧಕ ಬಾಧಕಗಳನ್ನು ಗ್ರಾಮೀಣ ನೆಲೆಯಲ್ಲಿ ನಿಂತು ಅದೂ ಗ್ರಾಮ ರಾಜಕೀಯದಲ್ಲಿ ಮಹಿಳೆಯರ ಭಾಗವಹಿಸುವಿಕೆಯ ಕುರಿತು ಜಿಜ್ಞಾಸೆ ಇರುವುದು ಕಂಡುಬರುತ್ತದೆ.

## ಅಧ್ಯಾಯ ೪

# ಅಭಿವೃದ್ಧಿ ಯೋಜನೆಗಳು ಮತ್ತು ಮಹಿಳೆ

೪

# ಅಭಿವೃದ್ಧಿ ಯೋಜನೆಗಳು ಮತ್ತು ಮಹಿಳೆ

ಭಾರತದ ಗ್ರಾಮೀಣ ಅಭಿವೃದ್ಧಿ ಬಡತನ ಮತ್ತು ಉದ್ಯೋಗ ನಿರ್ಮಾಣ ಯೋಜನೆಗಳು ಹಲವಾರು ವರ್ಷಗಳಿಂದ ಜಾರಿಯಲ್ಲಿರುವುದು ನಮಗೆಲ್ಲಾ ತಿಳಿದಿರುವ ವಿಷಯ. ಅಭಿವೃದ್ಧಿ ಎಂದರೆ ಸಾಮಾನ್ಯ ಅರ್ಥದಲ್ಲಿ ಪ್ರಗತಿ ಪಥದತ್ತ ಮುನ್ನಡೆಯುವುದು ಎಂದು ಅಭಿವೃದ್ಧಿ ಎನ್ನುವುದು ಕೆಳಮಟ್ಟದಿಂದ ಮೇಲ್ಮಟಕ್ಕೆ ಬದಲಾವಣೆಯಾಗುವಂಥ ಒಂದು ಕ್ರಿಯೆ. ರಾಷ್ಟ್ರೀಯ ಆದಾಯ, ಕೃಷಿ, ಕೈಗಾರಿಕೆ, ಸಾರಿಗೆ, ವಾಣಿಜ್ಯ ಇತ್ಯಾದಿ ಕ್ಷೇತ್ರಗಳಲ್ಲಿ ಕ್ರಿಯಾತ್ಮಕವಾದ ಬದಲಾವಣೆಗಳು ಉಂಟಾಗಬೇಕು. ಭಾರತ ಸರ್ಕಾರವು ಇತ್ತೀಚಿಗೆ ಹಲವಾರು ಬಡತನ ನಿರ್ಮೂಲನ ಮತ್ತು ಉದ್ಯೋಗ ನಿರ್ಮಾಣ ಯೋಜನೆಗಳನ್ನು ಅವುಗಳ ಪ್ರಸ್ತುತತೆ ಮತ್ತು ಪರಿಣಾಮಗಳನ್ನು ಸುಧಾರಿಸುವ ಉದ್ದೇಶದಿಂದ ಮರು ರೂಪಿಸಿರುವುದು. ಅಂತಹ ಹಲವಾರು ಪ್ರಮುಖ ಯೋಜನೆಗಳು ಜಾರಿಯಲ್ಲಿದ್ದರೂ ಯಾವ ಯೋಜನೆಗಳಿಂದಲೂ ಸಹ ಪರಿಪೂರ್ಣ ಅಭಿವೃದ್ಧಿಯನ್ನು ಸಾಧಿಸಲಾಗಲಿಲ್ಲ. ಹಾಗಾಗಿ ಈ ಅಭಿವೃದ್ಧಿ ಯೋಜನೆಗಳು ಯಾವುವು? ಏಕೆ ಈ ಅಭಿವೃದ್ಧಿ ಯೋಜನೆಗಳು ವಿಫಲವಾಗಿವೆ? ಈ ಯೋಜನೆಗಳ ಉದ್ದೇಶಗಳು ಏನಾಗಿದ್ದವು? ಇವು ಎಲ್ಲಿ ವಿಫಲತೆಯನ್ನು ಅನುಭವಿಸಿವೆ? ಈ ಯೋಜನೆಗಳು ಮಹಿಳೆಯರಿಗೆ ಎಷ್ಟು ಪ್ರಾಮುಖ್ಯತೆಯನ್ನು ನೀಡಿವೆ ಎಂಬುದನ್ನು ತಿಳಿದುಕೊಳ್ಳುವುದು ಅನಿವಾರ್ಯವಾಗಿದೆ. ಈ ನಿಟ್ಟಿನಲ್ಲಿ ಇವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

## ೪.೧. ಗ್ರಾಮೀಣ ಸಮುದಾಯಿಕ ಅಭಿವೃದ್ಧಿ ಕಾರ್ಯಕ್ರಮ

ಭಾರತ ಹಳ್ಳಿಗಳ ದೇಶ, ಗ್ರಾಮಗಳೇ ಭಾರತೀಯ ಸಮಾಜದ ಜೀವನಾಡಿ ಈ ಗ್ರಾಮಗಳ ಅಭಿವೃದ್ಧಿಗಾಗಿ ಭಾರತ ಸರ್ಕಾರ ಕೈಗೊಂಡ ಯೋಜನೆಯೇ ಸಮುದಾಯ ಅಭಿವೃದ್ಧಿ ಯೋಜನೆ, ಅಂದರೆ ಗ್ರಾಮೀಣ ಕುಟುಂಬ, ವ್ಯವಸಾಯದ ಅಭಿವೃದ್ಧಿ, ಕೈಗಾರಿಕೆಗಳ ಪುನರ್ ನಿರ್ಮಾಣ, ಕನಿಷ್ಟ, ಆರೋಗ್ಯ ಸುಧಾರಣೆ, ಮಕ್ಕಳ ಮತ್ತು ವಯಸ್ಕರ ಶಿಕ್ಷಣ ವಿಸ್ತರಣೆ ಮುಂತಾದ ಗ್ರಾಮೀಣ ಅಭಿವೃದ್ಧಿಗೆ ಪೂರಕವಾದ ಕಾರ್ಯಕ್ರಮವನ್ನು "ಸಮುದಾಯಿಕ ಅಭಿವೃದ್ಧಿ ಕಾರ್ಯಕ್ರಮ"ವೆಂದು ಕರೆಯಲಾಗುವುದು.

ವಿಶ್ವಸಂಸ್ಥೆಯ ಪ್ರಕಾರ ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕ ಹಾಗೂ ವಿವಿಧ ಉನ್ನತಿಯ ಮೂಲಕ ರಾಷ್ಟ್ರದ ಸಮಗ್ರ ಪ್ರಗತಿಯನ್ನು ಸಾಧಿಸುವ ಯೋಜನೆಯೇ ಸಮುದಾಯಿಕ ಅಭಿವೃದ್ಧಿ

ಯೋಜನೆ ಎನ್ನಲಾಗಿದೆ. ಭಾರತದ ಯೋಜನಾ ಆಯೋಗದ ಪ್ರಕಾರ ಸಮುದಾಯಿಕ ಅಭಿವೃದ್ಧಿ ಯೋಜನೆಯು ಗ್ರಾಮೀಣ ಅಭಿವೃದ್ಧಿ ಯೋಜನೆಯಾಗಿದೆ. ಈ ಯೋಜನೆಯನ್ನು ಕೇಂದ್ರ ಸರ್ಕಾರವು ಅಕ್ಟೋಬರ್ ೨, ೧೯೫೨ರಲ್ಲಿ ಆರಂಭಿಸಿ ಇದನ್ನು ದೇಶದಾದ್ಯಂತ ೧೯೫೩ರಲ್ಲಿ ರಾಷ್ಟ್ರೀಯ ವಿಸ್ತರಣಾ ಯೋಜನೆಯ ವ್ಯವಸ್ಥೆಯಲ್ಲಿ ಪ್ರಾರಂಭಿಸಲಾಯಿತು. ಮೊದಲನೆಯ ಪಂಚವಾರ್ಷಿಕ ಯೋಜನೆಯಲ್ಲಿ ಈ ಯೋಜನೆಗೆ ೫೦ ಕೋಟಿ ರೂ.ಗಳನ್ನು ವೆಚ್ಚ ಮಾಡಲಾಯಿತು. ಸಮುದಾಯಿಕ ಅಭಿವೃದ್ಧಿ ಯೋಜನೆಯಲ್ಲಿ ಎರಡು ವಿಧಗಳಿವೆ ಅವುಗಳೆಂದರೆ

### ೪.೧.೧. ಮೂಲ ಗ್ರಾಮ ಅಭಿವೃದ್ಧಿ ಯೋಜನೆ

ಈ ಯೋಜನೆಯು ೫೦೦ ಹಳ್ಳಿಗಳನ್ನು, ೨ ಲಕ್ಷ ಜನಸಂಖ್ಯೆಯನ್ನು ಒಳಗೊಂಡಿರುತ್ತದೆ. ೫೦೦ ಹಳ್ಳಿಗಳಲ್ಲಿ ಪ್ರತಿ ೧೦೦ ಹಳ್ಳಿಗೆ ಒಂದು ಗುಂಪಾಗಿ ೫ ಭಾಗಗಳಾಗಿ ವಿಂಗಡಿಸಲಾಯಿತು. ಪ್ರತಿಯೊಂದು ಗುಂಪಿಗೆ ಗ್ರಾಮ ಸೇವಕರನ್ನು ನೇಮಿಸಲಾಯಿತು. ಈ ಮೂಲಕ ಗ್ರಾಮ ಅಭಿವೃದ್ಧಿ ಯೋಜನೆಯು ವ್ಯವಸಾಯ ಉತ್ಪಾದನೆಯನ್ನು ಹೆಚ್ಚಿಸುವುದರ ಜೊತೆಗೆ ಸಮುದಾಯಿಕ ಹಾಗೂ ಸಾರ್ವಜನಿಕ ಕಾರ್ಯಗಳನ್ನು ಯೋಜಿಸುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ.

### ೪.೧.೨. ಸಂಯೋಜಿತ ಯೋಜನೆ

ಈ ಯೋಜನೆಯು ವ್ಯವಸಾಯ ಅಭಿವೃದ್ಧಿ ಜೊತೆಗೆ ಗೃಹ ಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸುವುದು. ಗ್ರಾಮೀಣ ಮತ್ತು ನಗರ ಪ್ರದೇಶಗಳ ಜನರಿಗೆ ಕನಿಷ್ಟ ಆರೋಗ್ಯ ಸೌಲಭ್ಯವನ್ನು ಒದಗಿಸುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ. ಈ ಯೋಜನೆಯನ್ನು ಭಾರತ ಸರ್ಕಾರ ಅಕ್ಟೋಬರ್ ೨, ೧೯೫೨ರಂದು ಪ್ರಾಯೋಗಿಕವಾಗಿ ಆರಂಭಿಸಿತು. ಮುಂದೆ ೧೯೫೩ರಲ್ಲಿ ರಾಷ್ಟ್ರೀಯ ವಿಸ್ತರಣಾ ಯೋಜನೆಯ ವ್ಯವಸ್ಥೆಯಲ್ಲಿ ಪ್ರಾರಂಭಿಸಲಾಯಿತು. ಈ ಯೋಜನೆಯ ಅಭಿವೃದ್ಧಿಗಾಗಿ ೫೧೯ ಕೋಟಿ ರೂ.ಗಳನ್ನು ಮೀಸಲಿಡಲಾಯಿತು.

**ಸಮುದಾಯಿಕ ಯೋಜನೆಯ ಉದ್ದೇಶಗಳು**

- ಗ್ರಾಮೀಣ ಜನರ ಜೀವನ ಕ್ರಮವನ್ನು ಬದಲಾಯಿಸುವುದು
- ಜವಾಬ್ದಾರಿಯುತ ಜನರನ್ನು ಆಯ್ಕೆ ಮಾಡುವುದು.
- ನವಭಾರತವನ್ನು ನಿರ್ಮಿಸಲು ಕ್ರಿಯಾತ್ಮಕವಾಗಿ ಭಾಗವಹಿಸುವ ಜನರನ್ನು ಸೃಷ್ಟಿಸುವುದು.
- ವ್ಯವಸಾಯ ಗೃಹ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವುದರ ಮೂಲಕ ಗ್ರಾಮೀಣ ಜನರ ಆದಾಯ ವನ್ನು ಹೆಚ್ಚಿಸುವುದು.

- ಗ್ರಾಮೀಣ ಜನರ ಶಾಲೆ ಮತ್ತು ಉಪಾಧ್ಯಾಯರನ್ನು ಗ್ರಾಮೀಣ ಅಭಿವೃದ್ಧಿಗೆ ಭಾಗವಹಿಸುವಂತೆ ಮಾಡಿ ಶಾಲೆಯ ಸಮುದಾಯಿಕ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದು.
- ಗ್ರಾಮೀಣ ಜನರ ಆರೋಗ್ಯ ಪರಿಸ್ಥಿತಿಯನ್ನು ಉತ್ತಮಪಡಿಸಲು "ಉತ್ತಮ ಆರೋಗ್ಯ ಪರಿಸರ" ನಿರ್ಮಿಸುವುದು.
- ಮಾನವ ನಿರ್ಮಿತ ಸಾಮಾಜಿಕ ಪರಿಸ್ಥಿತಿಯನ್ನು ಅಥವಾ ಅಸಮಾನತೆಯನ್ನು ಹೋಗಲಾಡಿಸುವುದು ಮತ್ತು ಅಸ್ಪೃಶ್ಯತೆಯನ್ನು ನಿಯಂತ್ರಿಸುವುದು.
- ಗ್ರಾಮೀಣ ಪ್ರದೇಶದಲ್ಲಿ ಕುಡಿಯುವ ನೀರಿನ ಸೌಲಭ್ಯವನ್ನು ಉತ್ತಮಪಡಿಸಿ ಜನರಲ್ಲಿ ಒಳ್ಳೆಯ ಮನೋಭಾವನೆಯನ್ನು ಬೆಳೆಸುವುದು.
- ಗ್ರಾಮೀಣ ಅಭಿವೃದ್ಧಿ ಕಾರ್ಯದಲ್ಲಿ ಯುವ ಜನರು ಪಾಲ್ಗೊಳ್ಳುವಂತೆ ಮಾಡುವುದು.
- ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಯನ್ನು ಹೆಚ್ಚಿಸುವುದು.

ಈ ನಿಟ್ಟಿನಲ್ಲಿ ಬಹು ಯೋಜನೆಯ ಉದ್ದೇಶವನ್ನು ಸಕ್ರಿಯಗೊಳಿಸಲು ಗ್ರಾಮೀಣ ಮಟ್ಟದಲ್ಲಿ ಗ್ರಾಮ ಸೇವಕರ, ೨ನೇ ಹಂತದಲ್ಲಿ ವಿಸ್ತರಣಾಧಿಕಾರಿಗಳು, ಅಂತಿಮ ಹಂತದಲ್ಲಿ ವಿಭಾಗದ ಅಧಿಕಾರಿಗಳನ್ನು ನೇಮಕ ಮಾಡಲಾಯಿತು.

ಈ ಯೋಜನೆಯ ಅನುಕೂಲ ಅನಾನುಕೂಲಗಳನ್ನು ಮೌಲ್ಯಮಾಪನ ಮಾಡಲು ಯೋಜನಾ ಆಯೋಗ, ಸಮುದಾಯ ಅಭಿವೃದ್ಧಿ ಯೋಜನೆಯ ರಾಷ್ಟ್ರೀಯ ಸಂಸ್ಥೆ ಮೊದಲಾದವು ಸಕ್ರಿಯವಾಗಿ ಭಾಗವಹಿಸಿದವು. ಪ್ರೊ.ಮಿಲನ್ ಕಾರ್ಲ್ ಟೇಲರ್ ಮತ್ತು ಎಸ್.ಇ.ದುಚಿ ಮೊದಲಾದ ತಜ್ಞರು ಹೆಚ್ಚಿನ ಶ್ರಮ ವಹಿಸಿದ್ದಾರೆ.

### ಸಮುದಾಯ ಅಭಿವೃದ್ಧಿ ಯೋಜನೆಯ ಅನುಕೂಲಗಳು

- ಈ ಯೋಜನೆಯು ಅನೇಕ ಕ್ಷೇತ್ರಗಳಲ್ಲಿ ಯೋಜಿತ ಬೆಳವಣಿಗೆಯನ್ನು ಸಾಧಿಸಿ ಮುಂದಿನ ಪ್ರಗತಿಗೆ ತಳಹದಿಯಾಯಿತು.
- ವ್ಯವಸಾಯ ಕ್ಷೇತ್ರದಲ್ಲಿ ಸುಧಾರಿತ ಪದ್ಧತಿಯನ್ನು ಜಾರಿಗೆ ತರುವುದರ ಮೂಲಕ ಉತ್ಪಾದನೆಯನ್ನು ಹೆಚ್ಚಿಸಿದೆ.
- ಹೊಸ ವ್ಯವಸಾಯದ ವಿಧಾನ, ತಂತ್ರಗಳು, ಯಾಂತ್ರಿಕ ಬೇಸಾಯವನ್ನು ಜಾರಿಗೊಳಿಸಲಾಯಿತು.
- ಕುಟುಂಬ ಕಲ್ಯಾಣ ಯೋಜನೆಯನ್ನು ಜನಪ್ರಿಯಗೊಳಿಸಲಾಗಿದೆ.

- ಮಹಿಳೆಯರಿಗೆ ಮತ್ತು ಮಕ್ಕಳಿಗೆ ಸುಧಾರಿತ ಆರೋಗ್ಯ ವೈದ್ಯಕೀಯ ಹಾಗೂ ನೈರ್ಮಲ್ಯ ಸೌಲಭ್ಯಗಳು ಮಾರಕವಾದ ರೋಗವನ್ನು ಕಡಿಮೆ ಮಾಡಿ ಜೀವಿತ ಅವಧಿಯನ್ನು ಹೆಚ್ಚಿಸಿತು.
- ಸ್ಥಳೀಯ ಅಭಿವೃದ್ಧಿ ಕಾರ್ಯದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಉದ್ಯೋಗ ಅವಕಾಶವನ್ನು ಹೆಚ್ಚಿಸಿತು.
- ಪ್ರಾದೇಶಿಕ ಅಭಿವೃದ್ಧಿ ಸಮತೋಲನವನ್ನು ಏರ್ಪಡಿಸಿ ಗೃಹ ಮತ್ತು ಸಣ್ಣ ಕೈಗಾರಿಕೆಯನ್ನು ಅಭಿವೃದ್ಧಿಪಡಿಸಲಾಯಿತು.
- ಸಾರಿಗೆ ಸಂಪರ್ಕವನ್ನು ಹೆಚ್ಚಿಸಲಾಯಿತು.
- ಜನತೆಯಲ್ಲಿ ಮೂಢನಂಬಿಕೆಯನ್ನು ಹೋಗಲಾಡಿಸಿ ವೈಚಾರಿಕ ಮನೋಭಾವವನ್ನು ಬೆಳೆಸಿತು.
- ಸಮುದಾಯಿಕ ಅಭಿವೃದ್ಧಿಯಲ್ಲಿ ಜನರು ಸ್ವಯಂ ಪೂರ್ತಿಯಾಗಿ ಮತ್ತು ಸೇವಾ ಮನೋಭಾವದಿಂದ ಭಾಗವಹಿಸುವಂತೆ ಮಾಡಲಾಯಿತು.
- ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗೆ ಸಹಾಯ ಮಾಡಲಾಯಿತು.

**ಯೋಜನೆಯ ಅನಾನುಕೂಲಗಳು**

- ಭೂ ಸಾಗುವಳಿ, ಭೂ ಕೊರೆತ, ಭೂ ಸಂರಕ್ಷಣೆ, ಬೆಳೆಗಳಿಗೆ ತಗುಲುವ ರೋಗ ತಡೆಯಲು ಈ ಯೋಜನೆ ವಿಫಲವಾಯಿತು.
- ಹೈನುಗಾರಿಕೆ ಮತ್ತು ಮೀನುಗಾರಿಕೆಯಲ್ಲಿ ನಿರೀಕ್ಷಿತ ಮಟ್ಟದ ಪ್ರಗತಿ ಕಾಣಲಿಲ್ಲ.
- ವಿವಿಧ ರಾಜ್ಯಗಳು ಒಂದೊಂದು ಪ್ರದೇಶದಲ್ಲಿ ಒಂದೊಂದು ರೀತಿಯಲ್ಲಿ ಅಭಿವೃದ್ಧಿ ಕಂಡುಬಂದಿತು.
- ಈ ಅಭಿವೃದ್ಧಿ ಯೋಜನೆಯ ಫಲಶೃತಿಯು ಕೇವಲ ಶ್ರೀಮಂತರಿಗೆ ದಕ್ಕಿತು.
- ಜನರ ಸಕ್ರಿಯ ಪಾಲ್ಗೊಳ್ಳುವಿಕೆಯಾಗಲಿ, ಸಂಘ-ಸಂಸ್ಥೆಗಳ ಪಾಲ್ಗೊಳ್ಳುವಿಕೆಯು ನಿರೀಕ್ಷಿತ ಮಟ್ಟದಲ್ಲಿರಲಿಲ್ಲ.
- ಹೆಚ್ಚಿನ ಕೆಲಸ ಮಾಡಿದರು ಪ್ರಚಾರದ ಅನುಭವದ ಸಮಸ್ಯೆಯನ್ನು ಎದುರಿಸಲಾಯಿತು.
- ಆರೋಗ್ಯ ಮತ್ತು ಶಿಕ್ಷಣದ ಪ್ರಗತಿಯು ನಿರೀಕ್ಷಿತ ಮಟ್ಟದಲ್ಲಿ ಸಾಗಲಿಲ್ಲ.
- ಸ್ಥಳೀಯ ಸಮಸ್ಯೆ ಮತ್ತು ಸ್ಥಳೀಯರಿಗೆ ಹೆಚ್ಚಿನ ಅವಕಾಶ ನೀಡಲಿಲ್ಲ.
- ಇದು ಸರ್ಕಾರಿ ಯೋಜನೆಯಾಯಿತೇ ಹೊರತು ಜನಪ್ರಿಯ ಯೋಜನೆಯಾಗಲಿಲ್ಲ.
- ಮಹಿಳೆಯರಿಗೆ ಈ ಯೋಜನೆಯಿಂದ ಅಭಿವೃದ್ಧಿಯನ್ನು ಹೊಂದಲು ಸಾಧ್ಯವಾಗಲಿಲ್ಲ.

## ೪.೨. ಇಂದಿರಾ ಆವಾಸ ಯೋಜನೆ

ಜೀತ ಪದ್ಧತಿಯಿಂದ ಮುಕ್ತರಾದವರಿಗಾಗಿ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಡು ಬಡವರಿಗಾಗಿ ಮನೆಗಳ ನಿರ್ಮಾಣ ಮಾಡಿಕೊಡುವುದು ಈ ಯೋಜನೆಯ ಉದ್ದೇಶ. ಇದು ಕೇಂದ್ರ ಸರಕಾರದ ಯೋಜನೆ ಪರಿಶಿಷ್ಟಜಾತಿ. ಪರಿಶಿಷ್ಟಪಂಗಡದವರಿಗೆ ಶೇ.೬೦ರಷ್ಟು ಮತ್ತು ಇತರೆಯವರಿಗೆ ಶೇ.೪೦ ರಷ್ಟು ಮನೆಗಳ ನಿರ್ಮಾಣ ಮಾಡಲು ಅವಕಾಶವನ್ನು ಕಲ್ಪಿಸಿಕೊಡಲಾಯಿತು. ಇಂದಿರಾ ಆವಾಸ ಯೋಜನೆ ಕಾರ್ಯಕ್ರಮವನ್ನು ೧೯೮೫-೮೬ರಲ್ಲಿ ಪ್ರಾರಂಭಿಸಲಾಯಿತು. ೧೯೮೮-೮೯ರ ವೇಳೆಗೆ ೫.೨ ಲಕ್ಷ ಮನೆಗಳನ್ನು ನಿರ್ಮಾಣಗೊಳಿಸಲಾಯಿತು. ಇವುಗಳ ನಿರ್ಮಾಣಕ್ಕೆ ತಗಲಿದ ವೆಚ್ಚ ರೂ.೧೧,೩೮೮ ಕೋಟಿ ರೂ. ಆಗಿತ್ತು.

೧೯೮೯-೯೦ ರಿಂದ ಇಂದಿರಾ ಆವಾಸ ಯೋಜನೆಯನ್ನು ಜೆ.ಆರ್.ವೈ.ನಲ್ಲಿ ಮುಂದುವರಿಸಲಾಗಿದೆ. ಈ ಯೋಜನೆಯಲ್ಲಿ ಮನೆಕಟ್ಟಿಕೊಳ್ಳಲು ಫಲಾನಭವಿಗಳಿಗೆ ರೂ.೧೪,೦೦೦ಯಿಂದ ೨೦,೦೦೦ ರೂ. ಗಳವರೆಗೆ ಆಗಸ್ಟ್ ೧೯೯೬ ರಿಂದ ಹೆಚ್ಚಿಸಲಾಗಿದೆ. ಮನೆಯನ್ನು ಕಟ್ಟುವ ಮತ್ತು ಅದನ್ನು ಪೂರ್ಣಗೊಳಿಸುವ ಹಕ್ಕನ್ನು ಫಲಾನುಭವಿಗಳು ಪಡೆದಿರುತ್ತಾರೆ. ೧೯೯೦ ರಿಂದ ೧೯೯೬ರವರೆಗೆ ಜೆ.ಆರ್. ವೈ.ಯ ಆಶ್ರಯದಲ್ಲಿ ೨೯ ಲಕ್ಷ ಮನೆಗಳನ್ನು ನಿರ್ಮಿಸಲಾಯಿತು. ೩.೬೩೧ ಕೋಟಿ ರೂ.ವೆಚ್ಚ ಮಾಡಲಾಯಿತು. ಈ ಸಣ್ಣ ಮನೆಗಳ ಸರಾಸರಿ ವೆಚ್ಚ ರೂ.೧೨.೫೨೧ ಆದರೆ ೧೯೯೫-೯೬ರ ನಂತರ ಐ.ಎ.ವೈ ಮತ್ತು ಜೆ.ಆರ್.ವೈ ಯಿಂದ ಪುನ ಪ್ರತ್ಯೇಕಗೊಳಿಸಲಾಯಿತು. ಹಾಗೂ ಗ್ರಾಮೀಣ ಗೃಹ ಯೋಜನೆಯನ್ನು ಇದರೊಂದಿಗೆ ವಿಲೀನಗೊಳಿಸಲಾಯಿತು. ಹೀಗೆ ಗ್ರಾಮೀಣ ಬಡಜನತೆಗೆ ಕಡಿಮೆ ವೆಚ್ಚದಲ್ಲಿ ಮನೆಗಳ ನಿರ್ಮಾಣದ ಗುರಿಯೊಂದಿಗೆ ಐ.ಎ.ವೈ.ಯು ಮುಂದುವರೆದಿದೆ.

೧೯೯೬-೨೦೦೦ದ ಅವಧಿಯ ವೇಳೆಗೆ ಹೆಚ್ಚುತ್ತಿರುವ ಜನಸಂಖ್ಯೆಯನ್ನು ಪರಿಗಣಿಸಿ ೨೨.೬೯ ದಶಲಕ್ಷ ಗೃಹಗಳ ಕೊರತೆ ಉಂಟಾಗಬಹುದೆಂದು ಅಂದಾಜು ಮಾಡಲಾಗಿತ್ತು. ೧೯೯೬ ಮಾರ್ಚ್ ೩೧ರ ವೇಳೆಗೆ ೫.೬ ದಶಲಕ್ಷ ಗೃಹ ನಿರ್ಮಾಣ ಮುಗಿದಿದ್ದು ಇದರಿಂದಾಗಿ ಈ ಕೊರತೆಯನ್ನು ೧೭ ಲಕ್ಷ ಸಂಖ್ಯೆಗೆ ಇಳಿಸಲಾಗಿದೆ. ೧೯೯೬-೯೭ರ ಅವಧಿಯಲ್ಲಿ ದೇಶದಲ್ಲಿ ೧೧.೨೩ ದಶಲಕ್ಷ ಗೃಹಗಳ ನಿರ್ಮಾಣದ ಗುರಿಯನ್ನು ಹೊಂದಲಾಗಿತ್ತು. ಈ ಸಾಧನೆಗಾಗಿ ರೂ.೧,೪೨,೪೨೦ ಕೋಟಿಗಳನ್ನು ಕಾಯ್ದಿರಿಸಲಾಗಿತ್ತು(ಕರ್ನಾಟಕ ಸರ್ಕಾರ, ನಾವು ಮತ್ತು ನಮ್ಮ ಗ್ರಾಮಪಂಚಾಯಿತಿ, ಪು.೯೬, ೨೦೦೨).

## ೪.೩. ಜವಾಹರ್ ರೋಜಗಾರ್ ಯೋಜನೆ

೧೯೮೯ರಲ್ಲಿ ಸ್ಥಾಪಿತವಾದ ಈ ಯೋಜನೆ ಬಡತನ ರೇಖೆಗಿಂತ ಕೆಳಗಿರುವವರಿಗೆ ವರ್ಷದಲ್ಲಿ ೫೦ ರಿಂದ ೧೦೦ ದಿನ ಉದ್ಯೋಗವನ್ನು ತಾವು ಇದ್ದ ಸ್ಥಳದಲ್ಲಿ ಒದಗಿಸಿಕೊಡುವುದು. ಈ ಉದ್ದೇಶ

ಸಾಧನೆಗಾಗಿ ಕೇಂದ್ರ ಸರಕಾರ ಶೇ.೮೦ ಹಾಗೂ ರಾಜ್ಯ ಸರಕಾರವು ಶೇ.೨೦ ಬಂಡವಾಳವನ್ನು ಭರಿಸಬೇಕೆಂದು ನಿರ್ಧರಿಸಲಾಯಿತು. ಕೇಂದ್ರ ಮತ್ತು ರಾಜ್ಯಗಳಿಗೆ ಬರುವ ಒಟ್ಟು ನಿಧಿಯಲ್ಲಿ ೮೦ರಷ್ಟು ಗ್ರಾಮ ಪಂಚಾಯಿತಿಗಳಿಗೆ ಒದಗಿಸಿ ಫಲಾನುಭವಿಗಳಿಗೆ ತಲುಪುವಂತೆ ಮಾಡಬೇಕು. ಇದರಲ್ಲಿ ೩೦ರಷ್ಟು ಹಣವನ್ನು ಮಹಿಳೆಯರಿಗೆ ಮೀಸಲಿಡಲಾಯಿತು. ಇದನ್ನು ೧೯೮೯ ಏಪ್ರಿಲ್ ೨೮ರಂದು ಶ್ರೀ ರಾಜೀವ್ ಗಾಂಧಿಯವರು ಗ್ರಾಮೀಣ ಅಭಿವೃದ್ಧಿಯನ್ನು ಉದ್ದೇಶವನ್ನಾಗಿಸಿಕೊಂಡು ಕೈಗೊಂಡ ಪ್ರಮುಖ ಯೋಜನೆ.

**ಈ ಯೋಜನೆಯ ಪ್ರಮುಖ ಉದ್ದೇಶಗಳು**

- ಗ್ರಾಮೀಣ ಪ್ರದೇಶದ ಸ್ತ್ರೀ-ಪುರುಷರಿಗೆ ನಿರುದ್ಯೋಗಿ ಮತ್ತು ಅರೆ ಉದ್ಯೋಗಿಗಳಿಗೆ ಹೆಚ್ಚಿನ ಲಾಭದಾಯಕ ಉದ್ಯೋಗಾವಕಾಶವನ್ನು ಒದಗಿಸುವುದು.
- ಗ್ರಾಮೀಣ ಬಡಜನತೆಯ ಆದಾಯ ಸ್ಥಿರತೆಯನ್ನು ಹೆಚ್ಚಿಸುವುದು.
- ಗ್ರಾಮೀಣ ಅರ್ಥವ್ಯವಸ್ಥೆಯ ಅವಶ್ಯಕತೆಗಳನ್ನು ಪೂರೈಸುವ ಸಲುವಾಗಿ ಶಾಶ್ವತ ಆಸ್ತಿಗಳನ್ನು ನಿರ್ಮಿಸಿ ಅರ್ಥ ವ್ಯವಸ್ಥೆಯ ಮೂಲ ರಚನೆಯನ್ನು ಒಳಪಡಿಸುವುದು.
- ಪರಿಶಿಷ್ಟ ಜಾತಿಯವರಲ್ಲಿ ಉದ್ಯೋಗಾವಕಾಶಗಳನ್ನು ಹೆಚ್ಚಿಸುವುದು.
- ಗ್ರಾಮೀಣ ಜನರ ಜೀವನವನ್ನು ಸುಧಾರಿಸುವುದು.
- ಗ್ರಾಮೀಣ ಪ್ರದೇಶದಲ್ಲಿ ಆರ್ಥಿಕ ಚಟುವಟಿಕೆಗೆ ಪ್ರೇರಣೆ.

**ಈ ಯೋಜನೆಯ ಪ್ರಮುಖ ಲಕ್ಷಣಗಳು**

- ಜೆ.ಆರ್.ವೈ.ನ ಕಾರ್ಯ ಸಾಧನೆಯು ದೇಶದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ತಲುಪಿತು. ಆದರೆ NREP ಮತ್ತು RLEGPಗಳ ಕಾರ್ಯ ಸಾಧನೆಯು ದೇಶದ ಕೇವಲ ೫೫ ಹಳ್ಳಿಗಳಿಗೆ ಮಾತ್ರ ತಲುಪಿತು.
- ಗ್ರಾಮೀಣ ಪ್ರದೇಶದಲ್ಲಿ ಬಡತನ ರೇಖೆಗಿಂತ ಕಡಿಮೆ ಇರುವ ೪೪೦ ಲಕ್ಷ ಕುಟುಂಬಗಳಿಗೆ ಅನ್ವಯವಾಗುವಂತೆ ಗ್ರಾಮಪಂಚಾಯಿತಿಗಳ ಮೂಲಕ ಗ್ರಾಮೀಣ ಉದ್ಯೋಗ ಕಾರ್ಯಕ್ರಮವನ್ನು ಜಾರಿಗೊಳಿಸಲಾಯಿತು.
- ಈ ಯೋಜನೆಯಲ್ಲಿ ಶೇ.೮೦ರಷ್ಟು ಕೇಂದ್ರ ಸರ್ಕಾರ ಮತ್ತು ಶೇ.೨೦ರಷ್ಟು ವೆಚ್ಚವನ್ನು ರಾಜ್ಯ ಸರ್ಕಾರಗಳು ಭರಿಸಿವೆ.
- ಈ ಯೋಜನೆಯಲ್ಲಿ ಬಹುಪಾಲು ಉದ್ಯೋಗಾವಕಾಶಗಳಲ್ಲಿ ಶೇ.೩೦ರಷ್ಟು ಸ್ತ್ರೀಯರಿಗಾಗಿಯೇ ಮಿಸಲಿಡಲಾಗಿತ್ತು.

## ೪.೪. ಪ್ರಧಾನ ಮಂತ್ರಿ ರೋಜ್‌ಗಾರ್ ಯೋಜನೆ

ಪ್ರಧಾನ ಮಂತ್ರಿ ರೋಜ್ ಗಾರ್ ಯೋಜನೆಯನ್ನು ನಗರ ಪ್ರದೇಶಗಳಲ್ಲಿ ೧೯೯೩-೯೪ರಲ್ಲಿ ಜಾರಿಗೊಳಿಸಲಾಯಿತು. ಆನಂತರ ಈ ಯೋಜನೆಯನ್ನು ೧೯೯೪-೯೫ರಲ್ಲಿ ಗ್ರಾಮೀಣ ಪ್ರದೇಶಗಳಿಗೂ ವಿಸ್ತರಿಸಲಾಯಿತು.

ಈ ಯೋಜನೆಯು ಸುಶಿಕ್ಷಿತ ನಿರುದ್ಯೋಗಿಗಳಿಗೆ ಸ್ವ-ಉದ್ಯೋಗ ಒದಗಿಸುವ ಗುರಿಯನ್ನು ಹೊಂದಿದೆ.ಈ ಯೋಜನೆಯ ಮೂಲಕ ಎಂಟನೇ ಪಂಚವಾರ್ಷಿಕ ಯೋಜನೆಯ ೧೯೯೨-೯೭) ಅವಧಿಯಲ್ಲಿ ಏಳು ಲಕ್ಷ ಸೂಕ್ಷ್ಮ ಉದ್ಯಮಗಳನ್ನು ಸ್ಥಾಪಿಸುವ ಮೂಲಕ ಒಂದು ದಶಲಕ್ಷಕ್ಕಿಂತಲೂ ಅಧಿಕ ಮಂದಿ ನಿರುದ್ಯೋಗಿಗಳಿಗೆ ಉದ್ಯೋಗ ಒದಗಿಸುವ ಪ್ರಯತ್ನ ಮಾಡಲಾಯಿತು.

ಈ ಯೋಜನೆಯು ಒಂಬತ್ತನೇ ಪಂಚವಾರ್ಷಿಕ ಯೋಜನೆಯ ಅವಧಿಯಾದ ೧೯೯೭-೨೦೦೨ರ ಸಾಲಿನಲ್ಲೂ ಮುಂದುವರಿಯುತ್ತಿದೆ. ೧೯೯೯-೨೦೦೦ರ ಆರ್ಥಿಕ ವರ್ಷಕ್ಕೆ ೨.೨೦ ಲಕ್ಷ ಫಲಾನುಭವಿಗಳ ಗುರಿಯನ್ನು ನಿರ್ಧರಿಸಲಾಗಿತ್ತು. ೧೯೯೯ರ ಅಕ್ಟೋಬರ್ ಮಾಹೆಯ ವೇಳೆಗೆ ೫೫೪೯೫ ಸಾಲಗಳನ್ನು ಮಂಜೂರು ಮಾಡಿ ೨೬೦೭೦ರಷ್ಟು ಸಾಲಗಳನ್ನು ವಿತರಿಸಲಾಗಿತ್ತು. ೧೯೯೯-೨೦೦೦ರ ಆಯವ್ಯಯದಲ್ಲಿ ಈ ಯೋಜನೆಯ ಅನುಷ್ಟಾನಕ್ಕಾಗಿ ಕೇಂದ್ರ ಯೋಜನಾ ವೆಚ್ಚದಲ್ಲಿ ರೂ.೧೭೩ ಕೋಟಿ ಹಣವನ್ನು ಒದಗಿಸಲಾಗಿತ್ತು.

ಈ ಕೆಳಗಿನ ಷರತ್ತುಗಳನ್ನು ಪೂರೈಸುವ ದೇಶದ ಗ್ರಾಮೀಣ ಅಥವಾ ನಗರ ಪ್ರದೇಶದ ಯಾವುದೇ ಭಾಗದಲ್ಲಿ ವಾಸವಾಗಿರುವ ವಿದ್ಯಾವಂತ ನಿರುದ್ಯೋಗ ವ್ಯಕ್ತಿ ೧೮ ರಿಂದ ೩೫ ವರ್ಷಗಳ ಒಳಗೆ ಇರಬೇಕು. ಮತ್ತು ಪ.ಜಾತಿ ಮತ್ತು ಪ.ಪಂಗಡಕ್ಕೆ ಸೇರಿರಬೇಕು. ಮಾಜಿ ಸೈನಿಕ, ಅಂಗವಿಕಲರಿಗೆ ಮತ್ತು ಮಹಿಳೆಯರಿಗೆ ೧೦ ವರ್ಷಗಳ ರಿಯಾಯಿತಿ ಇರುತ್ತದೆ. ಈ ಯೋಜನೆಯ ಫಲಾನುಭವಿಯಾಗಲು ೮ನೇ ತರಗತಿ ತೇರ್ಗಡೆಯಾಗಿರಬೇಕು. ಸರಕಾರಿ ಮಾನ್ಯತೆ ಅಥವಾ ಅನುಮತಿ ಪಡೆದ ಸಂಸ್ಥೆಯಲ್ಲಿ ೬ ತಿಂಗಳ ವೃತ್ತಿ ತರಬೇತಿ ಪಡೆದವರಿಗೆ ಆದ್ಯತೆ ನೀಡಲಾಗುತ್ತದೆ. ವಾರ್ಷಿಕ ಆದಾಯ ೨೪,೦೦೦ರೂ ಒಳಗಿರಬೇಕು. ಸುಸ್ತಿದಾರರಾದವರು ಯಾವುದೇ ರಾಷ್ಟ್ರೀಕೃತ ಬ್ಯಾಂಕು, ಹಣಕಾಸು ಸಂಸ್ಥೆ ಸಹಕಾರಿ ಬ್ಯಾಂಕು ಇವುಗಳ ಸುಸ್ತಿದಾರನಾಗಿರಬಾರದು. ವ್ಯಕ್ತಿಯು ಬೇರಾವುದೇ ಸರ್ಕಾರಿ ಯೋಜನೆಗಳಿಂದ ಧನ ಸಹಾಯ ಈಗಾಗಲೇ ಪಡೆದಿದ್ದಲ್ಲಿ ಅಂತಹ ವ್ಯಕ್ತಿ ಈ ಯೋಜನೆಗೆ ಅರ್ಹರಾಗುವುದಿಲ್ಲ. ಈ ಯೋಜನೆಯಲ್ಲಿ ಪ.ಜಾತಿ ಮತ್ತು ಪ.ಪಂಗಡಗಳಿಗೆ ೨೨.೫ ಹಿಂದುಳಿದ ವರ್ಗಗಳಿಗೆ ೨೭ ಮಹಿಳೆಯರಿಗೆ ೩೩.೩೩ ಅಲ್ಪಸಂಖ್ಯಾತರಿಗೆ ೧೨ ಮತ್ತು ಅಂಗವಿಕಲರಿಗೆ ೩ ಮೀಸಲಾತಿಯನ್ನು ಒದಗಿಸಲಾಗಿದೆ(ಭೈರಪ್ಪ ಕೆ., ಸಮಗ್ರ ಗ್ರಾಮೀಣ ಸಮಜ, ಪು.೮೦೦, ೨೦೦೨).

**ಒಳಗೊಳ್ಳಲಾದ ಚಟುವಟಿಕೆಗಳು**

ಉದ್ದಿಮೆದಾರರು ಯಾವುದೇ ಉದ್ಯಮ ಅಂದರೆ ಕೈಗಾರಿಕೆ, ಸೇವೆ, ಅಥವಾ ವ್ಯಾಪಾರ ಮುಂತಾದವುಗಳಿಗಾಗಿ ಸಾಲ ಪಡೆಯಬಹುದಾಗಿದೆ. ನೇರವಾಗಿ ಕೃಷಿ ವಲಯಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ಉದಾ: ಬೇಸಾಯ, ಗೊಬ್ಬರ ಖರೀದಿಗಳನ್ನು ಬಿಟ್ಟು ಬೇರಾವುದೇ ಕೈಗಾರಿಕೆ, ಸೇವೆ ಅಥವಾ ವ್ಯಾಪಾರವನ್ನೊಳಗೊಂಡ ಆರ್ಥಿಕ ಚಟುವಟಿಕೆಗಳು ಈ ಮೇಲಿನ ಎಲ್ಲಾ ಅರ್ಹತೆಗಳನ್ನು ಹೊಂದಿದ್ದರೆ ಮಾತ್ರ ಈ ಒಂದು ಯೋಜನೆಯನ್ನು ಪಡೆದುಕೊಳ್ಳಲು ಸಾಧ್ಯ.

## ೪.೫. ಜವಾಹರ್ ಗ್ರಾಮ ಸಮೃದ್ಧಿ ಯೋಜನೆ(JGSY)

ಜವಾಹರ್ ಗ್ರಾಮ ಸಮೃದ್ಧಿಯೋಜನೆಯು ಒಂದು ವೇತನ ಉದ್ಯೋಗ ಕಾರ್ಯಕ್ರಮವಾಗಿದೆ. ಇದನ್ನು ಹಿಂದಿನ ಜವಾಹರ್ ರೋಜ್ ಗಾರ್ ಯೋಜನೆ ಅಥವಾ ಜೆಆರ್ ವೈಯನ್ನು ಪರಿಷ್ಕರಿಸುವ ಮೂಲಕ ೧೯೯೯ರ ಏಪ್ರಿಲ್ ತಿಂಗಳಿನಲ್ಲಿ ಜಾರಿಗೊಳಿಸಲಾಗಿದೆ. ಇದು ಜೆ.ಆರ್ .ವೈ ಯೋಜನೆಯ ನೂತನ ಹೆಸರಾಗಿದ್ದು ಸಂಪೂರ್ಣ ಹೊಸ ರೂಪವನ್ನು ಪಡೆದಿರುವುದು.

**ಯೋಜನೆಯ ಉದ್ದೇಶಗಳು**

- ಗ್ರಾಮೀಣ ಪ್ರದೇಶಗಳ ಮೂಲಭೂತ ಸೌಕರ್ಯಗಳನ್ನು ಅಭಿವೃದ್ಧಿಪಡಿಸುವುದು.
- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಉದ್ಯೋಗ ಅವಕಾಶವನ್ನು, ಸೃಷ್ಟಿ ಮಾಡುವ ಕೆಲಸ ಕಾರ್ಯಗಳನ್ನು ತೆಗೆದುಕೊಳ್ಳುವುದು.
- ಗ್ರಾಮಮಟ್ಟದಲ್ಲಿ ದೀರ್ಘಕಾಲಿನ ಆಸ್ತಿಪಾಸ್ತಿಗಳನ್ನು ನಿರ್ಮಿಸುವುದು.
- ಗ್ರಾಮೀಣ ಭಾಗದ ನಿರುದ್ಯೋಗಿ ಬಡಜನರಿಗೆ ಹೆಚ್ಚುವರಿ ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದು.

**ಅನುಷ್ಠಾನ**

- ಈ ಯೋಜನೆಯನ್ನು ಪೂರ್ಣವಾಗಿ ಗ್ರಾಮ ಪಂಚಾಯಿತಿಗಳೇ ಅನುಷ್ಠಾನಗೊಳಿಸುತ್ತವೆ. ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿಗಳಿಗೆ ಈ ಯೋಜನೆಯಡಿಯಲ್ಲಿ ಯಾವುದೇ ಅನುದಾನವಿರುವುದಿಲ್ಲ.
- ಗ್ರಾಮ ಪಂಚಾಯಿತಿಯ ತಯಾರಿಸಿದ ಕಾಮಗಾರಿಗಳ ಕ್ರಿಯಾ ಯೋಜನೆಯನ್ನು ಗ್ರಾಮ ಸಭೆಯ ಅನುಮೋದನೆ ಪಡೆದು ಅನುಷ್ಠಾನ ಮಾಡುವುದು.
- ಈ ಯೋಜನೆಯ ಅನುದಾನವನ್ನು ಪ್ರತ್ಯೇಕವಾಗಿ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಅಂಚೆ ಕಛೇರಿಯ ಖಾತೆಯಲ್ಲಿರಬೇಕು ಮತ್ತು ಅಧ್ಯಕ್ಷರು/ಮತ್ತು ಕಾರ್ಯದರ್ಶಿ ಯಾರಾದರೊಬ್ಬರು ಸದಸ್ಯರು ಜಂಟಿಯಾಗಿ ಈ ಖಾತೆಯನ್ನು ನಿರ್ವಹಿಸಬೇಕು.

- ಈ ಯೋಜನೆಯಲ್ಲಿ ಯಾವುದೇ ಧರ್ಮಗಳಿಗೆ ಸಂಬಂಧಿಸಿದ, ಮಂದಿರ, ಮಸೀದಿ, ಚರ್ಚು, ಗುರುದ್ವಾರ ಇತ್ಯಾದಿಗಳನ್ನು, ಡಾಂಬರೀಕರಣ, ಕೆರೆ ಹೊಳೆತ್ತುವುದು ಇತ್ಯಾದಿಗಳನ್ನು ತೆಗೆದುಕೊಳ್ಳಬಾರದು.

- ಈ ಯೋಜನೆಯ ಪರಿಣಾಮಕಾರಿಯಾದ ಅನುಷ್ಠಾನಕ್ಕೆ ಪ್ರತಿ ಗ್ರಾಮದಲ್ಲೂ ಜಾಗೃತ ಸಮಿತಿ ರಚನೆ ಮಾಡಬೇಕು.

- ಆಡಳಿತಾತ್ಮಕ ವೆಚ್ಚಕ್ಕೆ ರೂ.೭೫೦೦ ಮೀರದಂತೆ ಖರ್ಚು ಮಾಡಬಹುದು.

- ಗ್ರಾಮಸಭೆಯು ಅನುಮೋದನೆ ನೀಡಿದ ಯಾವುದೇ ಕೆಲಸವನ್ನು ರೂ.೫೦,೦೦೦ಗಳಿಗೆ ಮೀರದಂತೆ ತಾಂತ್ರಿಕ ಹಾಗೂ ಆಡಳಿತಾತ್ಮಕ ಮಂಜೂರಾತಿ ನಿರೀಕ್ಷಿಸದೇ ಗ್ರಾಮ ಪಂಚಾಯಿತಿ ನಿರ್ವಹಿಸಬಹುದು.

- ಪ್ರತಿಯೊಂದು ಕಾಮಗಾರಿ ಪೂರ್ಣಗೊಂಡ ನಂತರ ಗ್ರಾಮ ಪಂಚಾಯಿತಿ ಗಮನಕ್ಕೆ ತಂದು ಹಣವನ್ನು ಪಾವತಿಸಬೇಕು.

- ಪ್ರತಿಯೊಂದು ಕಾಮಗಾರಿಗೆ ಮಾಸ್ಟರ್ ರೋಲ್ ಇಡಬೇಕು. ಗುತ್ತಿಗೆ ಆಧಾರದ ಮೂಲಕ ಕೆಲಸವನ್ನು ನಿರ್ವಹಿಸಬಾರದು.

- ತಾಂತ್ರಿಕ ಮೇಲ್ವಿಚಾರಣೆ ತಾಲ್ಲೂಕು ಪಂಚಾಯಿತಿ ನೋಡಿಕೊಳ್ಳತಕ್ಕದ್ದು.

ಈ ಯೋಜನೆಯಡಿ ವೇತನ ಆಧಾರಿತ ಉದ್ಯೋಗಗಳನ್ನು ಬಡತನ ರೇಖೆಗಿಂತ ಕೆಳಗೆ ಜೀವಿಸುತ್ತಿರುವ ಕುಟುಂಬಗಳಿಗೆ ನೀಡಲಾಗುತ್ತದೆ. ಈ ಯೋಜನೆಯಲ್ಲಿ ಸಂಪನ್ಮೂಲಗಳ ವಲಯಾಧಾರಿತ ಹಂಚಿಕೆ ಇಲ್ಲವಾದರೂ ಸಹ, ವಾರ್ಷಿಕ ಹಂಚಿಕೆಯಲ್ಲಿ ಶೇ.೨೨.೫ರಷ್ಟನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರಿಗೆ ಹಾಗೂ ಶೇ.೩ರಷ್ಟನ್ನು ಅಂಗವಿಕಲರಿಗೆ ವಿತರಣೆ ಮಾಡಬೇಕೆಂಬ ಷರತ್ತು ವಿಧಿಸಲಾಗಿರುವುದು. ಈ ಯೋಜನೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ೪:೧ ರಷ್ಟು ಅನುಪಾತದಲ್ಲಿ ಹಣಕಾಸು ಒದಗಿಸುತ್ತದೆ. ಈ ಯೋಜನೆಯ ಅನುಷ್ಠಾನಕ್ಕಾಗಿ ೧೯೯೯-೨೦೦೦ರಲ್ಲಿ ಕೇಂದ್ರ ಸರ್ಕಾರವು ರೂ.೧೬೬೫ ಕೋಟಿ ಹಣಕಾಸು ನೆರವು ಒದಗಿಸಿತ್ತು. ಈ ಸಾಲಿನ ಸೆಪ್ಟೆಂಬರ್ ತಿಂಗಳವರೆಗೆ ಈ ಯೋಜನೆಯ ಅನುಷ್ಠಾನಕ್ಕಾಗಿ ೧೯೯೯-೨೦೦೦ರಲ್ಲಿ ಕೇಂದ್ರ ಸರ್ಕಾರವು ರೂ.೧೬೬೫ ಕೋಟಿ ಹಣಕಾಸು ನೆರವು ಒದಗಿಸಿತ್ತು. ಈ ಸಾಲಿಸ ಸೆಪ್ಟೆಂಬರ್ ತಿಂಗಳವರೆಗೆ ಈ ಯೋಜನೆಯಡಿ ೫೮೭ ಲಕ್ಷ ಮಾನವ ದಿನಗಳ ಉದ್ಯೋಗಾವಕಾಶವನ್ನು ನಿರ್ಮಿಸಲಾಗಿತ್ತು(ಭೈರಪ್ಪ ಕೆ., ಸಮಗ್ರ ಗ್ರಾಮೀಣ ಸಮಾಜ, ಪು.೯೯೮, ೨೦೦೨).

## ೪.೬. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ

ಸರ್.ಎಂ.ವಿಶ್ವೇಶ್ವರಯ್ಯನವರ್ "Planned Economic India" ಎಂಬ ಗ್ರಂಥದಲ್ಲಿ ಯೋಜನಾ ಬದ್ಧ ಆರ್ಥಿಕ ಬೆಳವಣಿಗೆಯನ್ನು ವಿಶೇಷವಾಗಿ ಪ್ರಸ್ತಾಪಿಸಿದ್ದಾರೆ. ಅದರಲ್ಲಿ ಗ್ರಾಮೀಣ ಕೃಷಿ ಕೈಗಾರಿಕೆ ಉದ್ಯಮ ವರ್ಗದ ಕೈಗಾರಿಕೆಗಳ ಸಮತೋಲನ ಬೆಳವಣಿಗೆ ಇವುಗಳ ಜೊತೆಗೆ ಭಾರೀ ಅಥವಾ ಬೃಹತ್ ಕೈಗಾರಿಕೆಗಳಿಗೆ ಆದ್ಯತೆ ನೀಡಲಾಯಿತು. ಗ್ರಾಮೀಣ ಜನರ ಜೀವನ ಮಟ್ಟವನ್ನು ಹೆಚ್ಚಿಸುವುದರ ಜೊತೆಗೆ ಜನತೆಯ ಜೀವನ ಮಟ್ಟವನ್ನು ಹಸನಾಗಿಸಬೇಕೆಂಬ ಉದ್ದೇಶದಿಂದ ಸ್ಥಾಪಿತವಾದ ಕಾರ್ಯಕ್ರಮವೇ "ಗ್ರಾಮೀಣ ಅಭಿವೃದ್ಧಿ ಯೋಜನೆ"

ಈ ಯೋಜನೆಯನ್ನು ೧೯೭೬ರಲ್ಲಿ ಅಂದಿನ ಕೇಂದ್ರ ಸಚಿವರಾಗಿದ್ದ ಸುಬ್ರಹ್ಮಣ್ಯಂರವರು ಅಖಿಲ ಭಾರತ ವಿಜ್ಞಾನ ಕಾಂಗ್ರೆಸ್ ಸಮ್ಮೇಳನದಲ್ಲಿ ಪರಿಚಯಿಸಿದರು. ಈ ಯೋಜನೆಯನ್ನು ೧೯೮೦-೮೧ರಲ್ಲಿ ದೇಶಾದ್ಯಂತ ಜಾರಿಗೊಳಿಸಲಾಯಿತು. ಐ.ಆರ್ .ಡಿ.ಪಿ. ಕಾರ್ಯಕ್ರಮವು ೬ನೇ ಯೋಜನಾವಧಿಯಲ್ಲಿ ಒಂದು ಮಹತ್ವ ಪೂರ್ಣ ಕಾರ್ಯಕ್ರಮವಾಗಿ ಅನುಷ್ಠಾನಗೊಂಡಿತು. ಗ್ರಾಮೀಣ ಭಾಗದ ಪ್ರತಿಯೊಬ್ಬ ವ್ಯಕ್ತಿಯು ಸಾರ್ವತ್ರಿಕವಾಗಿ ಉಪಯುಕ್ತವಾದ ವಸ್ತುಗಳ ಉತ್ಪಾದನಾ ಚಟುವಟಿಕೆಗಳಲ್ಲಿ ಬಾಗವಹಿಸಿ ನೈಸರ್ಗಿಕವಾಗಿ ಲಭ್ಯವಿರುವ ಸಂಪನ್ಮೂಲವನ್ನು ಸಮಗ್ರವಾಗಿ ಸರಿಯಾಗಿ ಬಳಸಿಕೊಂಡು ಉತ್ಪಾದನಾ ಚಟುವಟಿಕೆಯಲ್ಲಿ ತೊಡಗಿದಾಗ ತನ್ನ ಮೂಲಭೂತ ಅವಶ್ಯಕತೆಯನ್ನು ಪೂರೈಸುವಷ್ಟು ವಸ್ತುಗಳನ್ನು ಉತ್ಪಾದಿಸಬಹುದು ಎಂಬುದೇ ಈ ಕಾರ್ಯಕ್ರಮದ ಪ್ರಮುಖ ಧ್ಯೇಯವಾಗಿದೆ.

### ಯೋಜನೆಯ ಗುರಿಗಳು

- ಎಲ್ಲರ ಹಸಿವನ್ನು ನೀಗಿಸುವುದು ಮತ್ತು ಸಾಕಷ್ಟು ಪ್ರಮಾಣದಲ್ಲಿ ಪೌಷ್ಟಿಕ ಆಹಾರವನ್ನು ಒದಗಿಸುವುದು ಅದಕ್ಕಾಗಿ ಎಣ್ಣೆಕಾಳು, ಜೋಳ, ಗೋಧಿ, ರಾಗಿ ಬೆಳವಣಿಗೆಗೆ ಪ್ರೋತ್ಸಾಹ ನೀಡುವುದು.
- ಉದ್ಯೋಗಾವಕಾಶವನ್ನು ಉಂಟು ಮಾಡುವ ಉದ್ಯಮಿಗಳಿಗೆ ತಂತ್ರಜ್ಞಾನದ ಸಹಾಯ ನೀಡುವುದು.
- ಕೂಲಿಗಾಗಿ ಕಾಳು ಯೋಜನೆಯ ಮೂಲಕ ಉದ್ಯೋಗ ಸೃಷ್ಟಿಸುವುದು ಇದರಿಂದ ಬಡತನವು ಸುಧಾರಿಸುತ್ತದೆ.
- ಮೂಲಭೂತ ಅವಶ್ಯಕತೆಗಳಾದ ಆಹಾರ, ವಸತಿ, ನೀರು, ರಸ್ತೆ, ಶಿಕ್ಷಣ ಮೊದಲಾದವುಗಳಿಗೆ ಪ್ರಥಮ ಪ್ರಾಶಸ್ತ್ಯ ನೀಡುವುದು.
- ಕಡ್ಡಾಯ ಪ್ರಾಥಮಿಕ ಶಿಕ್ಷಣ ಮತ್ತು ಸಾರ್ವಜನಿಕ ಶಿಕ್ಷಣಕ್ಕೆ ತ್ವರಿತ ಆದ್ಯತೆ ನೀಡುವುದು.

- ಜನ ತಾಂತ್ರಿಕ ಹಾಗೂ ಆಡಳಿತಾತ್ಮಕ ವಿಕೇಂದ್ರೀಕರಣವನ್ನು ಜಾರಿಗೆ ತರುವುದು.
- ಪ್ರತಿಯೊಂದು ಯೋಜನೆಯಲ್ಲೂ ಜನರೇ ಪಾಲ್ಗೊಳ್ಳುವಂತೆ ಮಾಡುವುದು.

ಉದ್ದೇಶಗಳು

ಜನವರಿ ೧೯೮೧ರಲ್ಲಿ ಪ್ರಕಟವಾದ ೬ನೇ ಪಂಚವಾರ್ಷಿಕ ಯೋಜನೆಯು ಈ ಕಾರ್ಯಕ್ರಮದ ನೀತಿ ಮತ್ತು ಉದ್ದೇಶಗಳನ್ನು ಸ್ಪಷ್ಟಪಡಿಸುತ್ತದೆ. ಅವುಗಳೆಂದರೆ

- ಈ ಯೋಜನೆಯು ಬಡತನ ವಿರೋಧಿ ಕಾರ್ಯಕ್ರಮವಾಗಿದ್ದು, ಬಡತನ ಮತ್ತು ನಿರುದ್ಯೋಗ ನಿವಾರಣೆಯ ಕ್ರಮವಾಗಿದೆ.
- ಕೃಷಿಯ ಉತ್ಪನ್ನ ಮತ್ತು ಉತ್ಪಾದಕತೆಯನ್ನು ಹೆಚ್ಚಿಸಿ ಕೃಷಿಯನ್ನು ಅಭಿವೃದ್ಧಿಪಡಿಸುವುದು.
- ಒಂದು ನಿರ್ದಿಷ್ಟ ಆಸ್ತಿ ನಿರ್ಮಾಣದ ಮೂಲಕ ರೇಷ್ಮೆ ಬೇಸಾಯ, ಪಶುಸಂಗೋಪನೆ, ನೇಯ್ಗೆ ಕರಕುಶಲ ಕೈಗಾರಿಕೆ ಮುಂತಾದ ಚಟುವಟಿಕೆಗಳಲ್ಲಿ ಸ್ವಯಂ ಉದ್ಯೋಗ ಕಲ್ಪಿಸುವುದು.
- ಸಮಗ್ರ ಗ್ರಾಮೀಣ ಅಭಿವೃದ್ಧಿಗಾಗಿ ಶ್ರಮಿಸುವಂತಹ ಉದ್ದೇಶವನ್ನು ಹೊಂದಿರುವುದು
- ಜನರ ಜೀವನ ಮಟ್ಟವನ್ನು ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಉತ್ತಮಗೊಳಿಸುವುದು. ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ(ಐ.ಆರ್.ಡಿ.ಪಿ) ಸಾಕಷ್ಟು ಯಶಸ್ಸಿ ಕಂಡಿತಾದರೂ ಇದು ಈ ಕೆಳಗಿನ ಲೋಪದೋಷಗಳನ್ನು ಒಳಗೊಂಡಿರುತ್ತದೆ.

ಲೋಪದೋಷಗಳು

- ಕಡಿಮೆ ಫಲಾನುಭವಿಗಳು : ೬ನೇ ಪಂಚಾವಾರ್ಷಿಕ ಯೋಜನಾ ಅವಧಿಯಲ್ಲಿ ೨೦ ಮಿಲಿಯನ್ ಜನರನ್ನು ಸೇರಿಸಿಕೊಳ್ಳುವ ಗುರಿ ಹೊಂದಿದ್ದರೂ ನೈಜ ಸಾಧನೆಯು ತೀರ ಕಡಿಮೆ ಇತ್ತು.
- ಈ ಕಾರ್ಯಕ್ರಮದ ಹಿಂದೆ ಭ್ರಷ್ಟಾಚಾರ, ಮೋಸ, ವಂಚನೆಗಳು ಅಡಗಿದ್ದವು.
- ಈ ಯೋಜನೆಯ ಕಾರ್ಯಕ್ರಮಗಳು ಅರ್ಹ ಫಲಾನುಭವಿಗಳಿಗೆ ದೊರೆಯಲಿಲ್ಲ.
- ಇಲ್ಲಿ ಪಶು ಸಂಗೋಪನೆಗೆ ಹೆಚ್ಚಿನ ಪ್ರಧಾನ್ಯತೆ ನೀಡಲಾಗಿತ್ತು.
- ಈ ಕಾರ್ಯಕ್ರಮದಲ್ಲಿ ಯಾವುದೇ ರೀತಿಯ ಸುಧಾರಣೆ ಮತ್ತು ನಿರೀಕ್ಷೆಗಳು ಕಂಡುಬರಲಿಲ್ಲ.
- ಸಾಲದ ಮೊತ್ತವು ಅಗತ್ಯ ಪ್ರಮಾಣದಲ್ಲಿರಲಿಲ್ಲ.

## ೪.೭. ಸ್ವರ್ಣ ಜಯಂತಿ ಗ್ರಾಮ ಸ್ವ ಉದ್ಯೋಗ ಯೋಜನೆ

ಸ್ವರ್ಣ ಜಯಂತಿ(ಗ್ರಾಮ ಸ್ವರೋಜ್ ಗಾರ್ ಯೋಜನೆ ಎಸ್ ಜಿಎಸ್ ವೈ) ಸ್ವರ್ಣ ಜಯಂತಿ ಗ್ರಾಮ ಸ್ವ ಉದ್ಯೋಗ ಯೋಜನೆಯಾಗಿದೆ. ಹಿಂದೆ ಜಾರಿಯಲ್ಲಿದ್ದ ಸಮಗ್ರ ಗ್ರಾಮೀನ ಅಭಿವೃದ್ಧಿ ಯೋಜನೆ ಅಥವಾ ಐ.ಆರ್.ಡಿ.ಪಿ., ಸ್ವಉದ್ಯೋಗಕ್ಕಾಗಿ ಗ್ರಾಮೀಣ ಯುವಜನರ ತರಬೇತಿ ಅಥವಾ ಟ್ರೈಸಮ್ ಅಥವಾ ಟಿ.ಆರ್.ವೈ.ಎಸ್., ಇ.ಎಮ್., ಗ್ರಾಮೀಣ ಭಾಗದ ಮಹಿಳೆ ಮತ್ತು ಶಿಶು ಅಭಿವೃದ್ಧಿ ಅಥವಾ ಡ್ವಾಕ್ರಾ ಅಥವಾ ಡಿ.ಡಬ್ಲ್ಯೂಸಿ.ಆರ್.ಎ ಮತ್ತು ದಶದಕ್ಷಬಾವಿ ಯೋಜನೆ ಅಥವಾ ಎಂ.ಡಬ್ಲ್ಯೂ.ಎಸ್.ಗಳನ್ನು ೧೯೯೯ರ ಏಪ್ರಿಲ್ ಮಾಹೆಯಲ್ಲಿ ಒಂದೂಗೂಡಿಸಿ ಸ್ವರ್ಣ ಜಯಂತಿ ಗ್ರಾಮ ಸ್ವ ಉದ್ಯೋಗ ಯೋಜನೆ ಅಥವಾ ಎಸ್ .ಜಿ.ಎಸ್ .ವೈ ಎಂಬ ಯೋಜನೆಯನ್ನು ಈ ಕೆಳಗಿನ ಉದ್ದೇಶ ಗಳೊಂದಿಗೆ ಜಾರಿಗೊಳಿಸಲಾಗಿದೆ.

**ಯೋಜನೆಯ ಉದ್ದೇಶಗಳು**

- ದೇಶದಲ್ಲಿ ಬಡತನ ನಿವಾರಣೆಗಾಗಿ ಪ್ರಮುಖ ರೀತಿಯ ಮಾರ್ಗೋಪಾಯಗಳನ್ನು ಕಂಡುಕೊಳ್ಳು ವಂತಹದ್ದು.
- ಬ್ಯಾಂಕುಗಳಿಂದ ದೊರೆಯುವ ಸಾಲದ ಪ್ರಯೋಜನಗಳನ್ನು ಬಳಸಿಕೊಳ್ಳುವುದು.
- ಈ ಕಾರ್ಯಕ್ರಮದಲ್ಲಿ ಎದುರಾಗುವಂತಹ ಹಲವು ರೀತಿಯ ಸಮಸ್ಯೆಗಳನ್ನು ನಿವಾರಿಸುವುದು.
- ಒಟ್ಟಿನಲ್ಲಿ ಈ ಯೋಜನೆಯು ಗ್ರಾಮೀಣ ಬಡಜನರ "ಸ್ವಸಹಾಯ ಗುಂಪು"ಗಳನ್ನು ಸಂಘಟಿಸುವ ಪ್ರಮುಖ ಯೋಜನೆಯನ್ನು ಒಳಗೊಂಡಿದೆ.

ಅದು ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಪ್ರತಿನಿಧಿಗಳು, ಬ್ಯಾಂಕುಗಳು, ಸಂಬಂಧಪಟ್ಟ ಇಲಾಖೆಗಳು, ಪಂಚಾಯತ್ ರಾಜ್ ಸಂಸ್ಥೆಗಳು, ಸ್ವಯಂ ಸೇವಾ ಸಂಸ್ಥೆಗಳು ಮತ್ತು ಇತರೆ ಅರೆಸರ್ಕಾರಿ, ಸಂಘಟನೆ ಗಳನ್ನು ಸಮನ್ವಯಗೊಳಿಸುತ್ತದೆ. ಅದು ಬ್ಯಾಂಕ್ ಸಾಲ ಮತ್ತು ಸರ್ಕಾರಿ ಸಹಾಯ ಧನವನ್ನು ನೀಡುವುದರ ಮೂಲಕ ತಿಂಗಳಿಗೆ ಕನಿಷ್ಟ ರೂ.೨೦೦೦ ಆದಾಯ ತರುವ ಆದಾಯ ಉತ್ಪತ್ತಿ ಮಾಡುವ ಆಸ್ತಿ ಪಾಸ್ತಿಗಳ ನಿರ್ಮಾಣ ಮಾಡಿ ನೆರವು ನೀಡಲ್ಪಟ್ಟ ಕುಟುಂಬವನ್ನು ಬಡತನ ರೇಖೆಗಿಂತ ಮೇಲೆತ್ತುವ ಗುರಿ ಹೊಂದಿರುತ್ತದೆ.

ಈ ಯೋಜನೆಯಡಿ ಯೋಜನೆಯ ಶೇ.೩೦ರಷ್ಟು ಸಹಾಯಧನವನ್ನು ಗರಿಷ್ಟ ರೂ.೭೫೦೦ರ ಮಿತಿಯೊಳಗೆ ನೀಡಲಾಗುತ್ತದೆ. ಆದರೆ ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ರೂ.೧೦೦೦೦ ಗರಿಷ್ಟ ಮಿತಿಯೊಳಗೆ ಯೋಜನೆಯ ಶೇ.೩೦ರ ಸಹಾಯಧನವನ್ನು ನೀಡಲಾಗುತ್ತದೆ. ಗುಂಪು ಚಟುವಟಿಕೆಗೆ

೧.೨೫ ಲಕ್ಷ ಗರಿಷ್ಠ ಮಿತಿಯೊಳಗೆ ಶೇ.೫೦ರ ಸಹಾಯ ಧನ ನೀಡಲು ಅವಕಾಶ ಕಲ್ಪಿಸಲಾಗಿದೆ. ಆದರೆ ನೀರಾವರಿ ಯೋಜನೆಗಳಿಗೆ ಯಾವುದೇ ಮಿತಿಯನ್ನು ಹೇರಲಾಗುವುದಿಲ್ಲ. ಈ ಯೋಜನೆಯಲ್ಲಿ ಕನಿಷ್ಠ ಪಕ್ಷ ಶೇ.೫೦ರಷ್ಟು ಪರಿಶಿಷ್ಟ ಜಾತಿ, ಪ.ಪಂಗಡದವರಿಗೆ, ಶೇ.೪೦ರಷ್ಟು ಮಹಿಳೆಯರಿಗೆ ಮತ್ತು ಶೇ.೩ರಷ್ಟು ಅಂಗವಿಕಲರಿಗೆ ಮೀಸಲಿಡಬೇಕು.

ಈ ಯೋಜನೆಗಾಗಿ ೭೫:೨೫ರ ಅನುಪಾತದಲ್ಲಿ ಕೇಂದ್ರ ಮತ್ತು ರಾಜ್ಯಗಳು ವೆಚ್ಚದ ಹಂಚಿಕೆಯನ್ನು ಮಾಡುತ್ತಿದ್ದು, ಬಿಡುಗಡೆಯಾದ ಒಟ್ಟು ಹಣಕಾಸಿನ ಮೌಲ್ಯ ೭೬೦೬ ಕೋಟಿ ರೂ.೩೭.೨೬ ಲಕ್ಷ ಕುಟುಂಬಗಳು ಈ ಯೋಜನೆಯ ಲಾಭವನ್ನು ಪಡೆದಿದೆ(ಭೈರಪ್ಪ ಕೆ., ಸಮಗ್ರ ಗ್ರಾಮೀಣ ಸಮಾಜ, ಪು.೭೯೭, ೨೦೦೨).

ಒಂದು ರಾಷ್ಟ್ರವು ಅಭಿವೃದ್ಧಿಯಾಗಬೇಕಾದರೆ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಪ್ರಕ್ರಿಯೆಲ್ಲಿ ಪಾಲ್ಗೊಳ್ಳಬೇಕು. ಅವರ ಭಾಗವಹಿಸುವಿಕೆ ಕಡಿಮೆಯಿದೆ. ಅಂದರೆ ಅಭಿವೃದ್ಧಿಯನ್ನು ಸಾಧಿಸಿಲ್ಲವೆಂದೇ ಅರ್ಥ. ಸ್ವಾತಂತ್ರ್ಯದ ನಂತರ ನಮ್ಮ ದೇಶದಲ್ಲಿ ಯೋಜನಾ ಆರ್ಥಿಕತೆಯನ್ನು ಅಳವಡಿಸಿಕೊಂಡಾಗಿನಿಂದಲೂ ಮಹಿಳಾ ಅಭಿವೃದ್ಧಿ ಸಲುವಾಗಿ ಅನೇಕ ಪ್ರಯತ್ನಗಳೂ ನಡೆದಿವೆ. ಸಮಾಜದಲ್ಲಿ ಬೇರೂರಿರುವ 'ಜಂಡರ್ ವ್ಯವಸ್ಥೆ ಪಕ್ಷ ಪಾತ'ವನ್ನು ಹೋಗಲಾಡಿಸಿ ನಮ್ಮ ಸಂವಿಧಾನವು ಮಹಿಳೆಯರಿಗೆ ನೀಡಿರುವ ಸಮಾನತೆಯನ್ನು ಜಾರಿಗೆ ತರುವ ನಿಟ್ಟಿನಲ್ಲಿ ಸರ್ಕಾರ ತನ್ನ ಎಲ್ಲಾ ಪ್ರಯತ್ನಗಳನ್ನು ನಿರ್ದೇಶಿಸಿದೆ. ಈ ನಿಟ್ಟಿನಲ್ಲಿ ಸರಕಾರ ಮಹಿಳಾ ಪರ ಕಾಳಜಿಯನ್ನು ವಹಿಸಿ ಕೈಗೊಂಡಿರುವ ಅಭಿವೃದ್ಧಿ ಯೋಜನೆಗಳು ಈ ಕೆಳಗಿನಂತಿವೆ.

## ೪.೮. ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳಾ ಪರ ಕಾಳಜಿಗಳು

ಸ್ವಾತಂತ್ರ್ಯದ ನಂತರ ಭಾರತ ಸರಕಾರ ದೇಶದ ಸಮಗ್ರ ಅಭಿವೃದ್ಧಿಗೋಸ್ಕರ ಯೋಜನಾಬದ್ಧ ಆರ್ಥಿಕ ವ್ಯವಸ್ಥೆಯನ್ನು ಅಳವಡಿಸಿಕೊಂಡಿತು. ಅದರಲ್ಲಿ ಪಂಚವಾರ್ಷಿಕ ಯೋಜನೆಯನ್ನು ಅನುಸರಿಸುತ್ತದೆ. ಈ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳೆಯರಿಗೋಸ್ಕರ ಏನೇನು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಮಹಿಳಾಭಿವೃದ್ಧಿಗೆ ಎಷ್ಟು ಹಣ ಮೀಸಲಾಗಿಡಲಾಗಿದೆ. ಏನೇನು ಬದಲಾವಣೆಗಳಾಗಿವೆ ಎಂದು ನೋಡುವುದು ಈ ಅಧ್ಯಯನದ ಉದ್ದೇಶ.

ಮೊದಲನೆ ಪಂಚವಾರ್ಷಿಕ ಯೋಜನೆ (೧೯೫೧-೫೬)ಯಲ್ಲಿ ಮಹಿಳಾ ಅಭಿವೃದ್ಧಿ ಪರಿಕಲ್ಪನೆಯ ಕಲ್ಯಾಣ ಗುರಿಯನ್ನು ಹೊಂದಿತ್ತು. ಇದರಲ್ಲಿ ಮಹಿಳೆಯರಿಗೋಸ್ಕರ ಪ್ರತ್ಯೇಕ ಕಾರ್ಯಕ್ರಮಗಳು ಇರಲಿಲ್ಲ. ಈ ಒಂದು ಯೋಜನಾವಧಿಯಲ್ಲಿ ಸರ್ಕಾರ ಕೈಗೊಂಡಂತಹ ಮೊದಲ ಕಾರ್ಯವೆಂದರೆ ೧೯೫೩ರಲ್ಲಿ ಕೇಂದ್ರ ಸಮಾಜ ಕಲ್ಯಾಣ ಮಂಡಳಿಯ ಸ್ಥಾಪನೆ. ಈ ಮಂಡಳಿಯು ನಿರ್ಗತಿಕ, ಪರಿತ್ಯಕ್ತ

ಮಹಿಳೆಯರು ಹಾಗೂ ವಿಧವೆಯರಿಗೆ ಉದ್ಯೋಗ ಮಾಡಿ ಆದಾಯ ಪಡೆಯುವಂತಾಗಲೂ ಸಮಾಜೋ ಆರ್ಥಿಕ ಕಾರ್ಯಕ್ರಮವನ್ನು ೧೯೫೮ರಲ್ಲಿ ಪ್ರಾರಂಭಿಸಿತು. ಇದರ ಜೊತೆಗೆ ಹ್ಯಾಂಡ್ ಲೂಮ್ ಹಾಗೂ ಕರಕುಶಲ ಘಟಕಗಳ ಸ್ಥಾಪನೆಗೆ ಬೆಂಬಲ ನೀಡಿತು. ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ (೧೯೫೬-೬೧) ಮಹಿಳೆಯರನ್ನು ಸಂಘಟಿಸಲು 'ಮಹಿಳಾ ಮಂಡಳಿ'ಗಳನ್ನು ಸ್ಥಾಪಿಸಲಾಯಿತು. ಇವುಗಳು ಗ್ರಾಮೀಣ ಮಟ್ಟದಲ್ಲಿ ಮಹಿಳಾಭಿವೃದ್ಧಿಯ ಕೇಂದ್ರ ಸ್ಥಾನಗಳಾಗುವುದರ ಜೊತೆಗೆ ಮಹಿಳೆಯರಿಗೆ ಹೊಲಿಗೆ, ಎಂಬ್ರಾಯಿಡರ್, ಗೃಹ ನಿರ್ವಹಣೆ, ಮಕ್ಕಳ ಪಾಲನೆ, ತೋಟಗಾರಿಕೆಗಳಲ್ಲಿ ತರಬೇತಿ ನೀಡಲಾಯಿತು. ಈ ಮಹಿಳಾ ಮಂಡಳಿಗಳನ್ನು ಅಮೇರಿಕಾದ 'ಮಹಿಳಾ ಸಂಘಗಳ ಮಾದರಿಯಲ್ಲಿ ರೂಪಿಸಲಾಗಿತ್ತು. ನಮ್ಮ ಗ್ರಾಮ ಮಟ್ಟದ ಪರಿಸ್ಥಿತಿಗೆ ಈ ಮಾದರಿಯು ಹೊಂದದಿದ್ದುದರಿಂದ ಮಹಿಳಾ ಮಂಡಳಿಗಳು ನಿರೀಕ್ಷಿಸಿದ ಮಟ್ಟದಲ್ಲಿ ಯಶಸ್ವಿಯಾಗಲಿಲ್ಲ. ಮೂರು ಮತ್ತು ನಾಲ್ಕು ಯೋಜನೆಗಳಲ್ಲಿ (೧೯೬೧-೭೪) ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಾಯಿತು. ತಾಯಿ ಮತ್ತು ಮಗುವಿನ ಆರೋಗ್ಯವನ್ನು ಉತ್ತಮಪಡಿಸಲು ಕ್ರಮ ಕೈಗೊಳ್ಳಲಾಯಿತು. ಗರ್ಭಿಣಿಯರಿಗೆ ಹಾಲುಣಿಸುವ ತಾಯಂದಿರಿಗೆ ಹಾಗೂ ಮಕ್ಕಳಿಗೆ ಪೌಷ್ಟಿಕ ಆಹಾರ ನೀಡುವ ಯೋಜನೆಯನ್ನು ಪ್ರಾರಂಭಿಸಲಾಯಿತು. ಐದನೇ ಪಂಚವಾರ್ಷಿಕ ಯೋಜನೆಯಲ್ಲಿ (೧೯೭೪-೭೮) ಮಹಿಳಾ ಅಭಿವೃದ್ಧಿ ಪರಿಶ್ರಮವು 'ಕಲ್ಯಾಣದಿಂದ' ಅಭಿವೃದ್ಧಿಗೆ ಪಲ್ಲಟಗೊಂಡಿತು. ಸಮಾಜ ಕಲ್ಯಾಣ ಪರಿಕಲ್ಪನೆಯು ವಿಸ್ತಾರಗೊಂಡು ಕುಟುಂಬದ ಸಮಸ್ಯೆಗಳಿಗೆ ಸ್ಪಂದಿಸುವುದರ ಜೊತೆಗೆ ಮಹಿಳೆಯರ ಪಾತ್ರವನ್ನು ರೂಪಿಸುವ ಕಾರ್ಯ ಈ ಯೋಜನೆಯಲ್ಲಿ ಹೊರಹೊಮ್ಮಿತು. ಈ ಯೋಜನೆಯಲ್ಲಿ ಮಹಿಳೆಯರ ಮತ್ತು ಮಕ್ಕಳ ಆರೋಗ್ಯಕ್ಕೆ ಆದ್ಯತೆಯು ಮುಂದುವರೆದು ಒಂದು ಹೊಸ ಕಾರ್ಯಕ್ರಮ ಜಾರಿಗೆ ಬಂದಿತು. ಅದೇ 'ಸಮಗ್ರ ಬಾಲ ವಿಕಾಸ ಯೋಜನೆ', ಗ್ರಾಮ ಮಟ್ಟದಲ್ಲಿ ತಾಯಿ ಹಾಗೂ ಮಗುವಿನ ಪೌಷ್ಠಿಕತೆ ಮತ್ತು ಆರೋಗ್ಯವನ್ನು ಉತ್ತಮಪಡಿಸುವುದು ಈ ಯೋಜನೆಯ ಗುರಿಯಾಗಿತ್ತು.

ಆರನೇ ಪಂಚವಾರ್ಷಿಕ ಯೋಜನೆಯು (೧೯೮೦-೮೫) ಮಹಿಳಾಭಿವೃದ್ಧಿ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಏಕೆಂದರೆ ಅಭಿವೃದ್ಧಿ ಯೋಜನೆಯಲ್ಲಿ ಮೊದಲ ಬಾರಿಗೆ 'ಮಹಿಳಾಭಿವೃದ್ಧಿ' ಎಂಬ ಪ್ರತ್ಯೇಕ ಅಧ್ಯಾಯವನ್ನು ಸೇರಿಸಲಾಯಿತು. ಈ ಯೋಜನೆಯು ಮಹಿಳೆಯರ ಆರೋಗ್ಯ ಶಿಕ್ಷಣ ಹಾಗೂ ಉದ್ಯೋಗಕ್ಕೆ ಆದ್ಯತೆ ನೀಡುವ ಬಹುಮುಖಿ ಪರಿಕ್ರಮವನ್ನು ಅಳವಡಿಸಿಕೊಂಡಿತು. ಗ್ರಾಮೀಣ ಮಹಿಳೆಯರ ಅಭಿವೃದ್ಧಿಗೆ 'ಡ್ವಾಕ್ರಾ'(DWCRA ಡೆವಲಪ್ ಮೆಂಟ್ ಆಫ್ ವುಮೆನ್ ಎಂಡ್ ಚಿಲ್ಡ್ರನ್ ಇನ್ ರೂರಲ್ ಏರಿಯಾಸ್) ಎಂಬ ಕಾರ್ಯಕ್ರಮವನ್ನು ೧೯೮೨ರಲ್ಲಿ ಜಾರಿಗೊಳಿಸಲಾಯಿತು. ಏಳನೇ ಪಂಚ ವಾರ್ಷಿಕ ಯೋಜನೆಯಲ್ಲಿ (೧೯೮೫-೯೦) ಮಹಿಳೆಯರಿಗಾಗಿ ಅಭಿವೃದ್ಧಿ ಕಾರ್ಯಕ್ರಮಗಳು ಮುಂದುವರೆದವು. ಅವುಗಳ ಮುಖ್ಯ ಉದ್ದೇಶವೆಂದರೆ ಮಹಿಳೆಯರ ಆರ್ಥಿಕ, ಸಾಮಾಜಿಕ ಹಾಗೂ

ರಾಜಕೀಯ ಸ್ಥಾನವನ್ನು ಉತ್ತಮಪಡಿಸುವುದು ಹಾಗೂ ಅವರನ್ನು ಅಭಿವೃದ್ಧಿಯ ಮುಖ್ಯವಾಹಿನಿಗೆ ತರುವುದು. ಈ ಕಾರ್ಯಕ್ರಮಗಳ ಲಾಭವು ಮಹಿಳೆಯರನ್ನು ತಲುಪುವಂತಾಗಲು 'ಬೆನಿಫಿಶಿಯರಿ ಓರಿಯಂಟಲು ಪ್ರೋಗ್ರಾಮ್ 'ಗಳನ್ನು ಗುರುತಿಸಿ ಬೆಂಬಲಿಸುವುದು. ಎಂಟನೇಯ ಪಂಚವಾರ್ಷಿಕ ಯೋಜನೆಯು ೧೯೯೨ರಲ್ಲಿ ಪ್ರಾರಂಭವಾಯಿತು. ಈ ಯೋಜನೆ 'ವಿವಿಧ ಕ್ಷೇತ್ರಗಳ ಅಭಿವೃದ್ಧಿ' ಕಾರ್ಯಕ್ರಮಗಳ ಲಾಭಗಳಿಂದ ಮಹಿಳೆಯರು ವಂಚಿತರಾಗದಂತೆ ನೋಡಿಕೊಳ್ಳುವ ಭರವಸೆಯನ್ನು ನೀಡಿತು. ಈ ಯೋಜನೆ ಮೂರು ಪ್ರಮುಖ ಕ್ಷೇತ್ರಗಳಾದ ಶಿಕ್ಷಣ, ಆರೋಗ್ಯ ಹಾಗೂ ಉದ್ಯೋಗಗಳಲ್ಲಿ ಯೋಜನೆಗಳ ಲಾಭವು ಮಹಿಳೆಯರಿಗೆ ತಲುಪುತ್ತಿದೆಯೋ ಇಲ್ಲವೋ ಎಂಬುದನ್ನು ಎಚ್ಚರಿಕೆಯಿಂದ ಗಮನಿಸಲಾಯಿತು. ಅಭಿವೃದ್ಧಿಯ ಪ್ರಕ್ರಿಯೆಗಳಲ್ಲಿ ಮಹಿಳೆಯರು ಸಮಾನ ಪಾಲುದಾರರಾಗಿ ಭಾಗವಹಿಸುವಂತೆ ಮಾಡುವುದಕ್ಕೆ ಹೆಚ್ಚಿನ ಒತ್ತು ನೀಡಿತು. ಅಂದರೆ ಅಲ್ಲಿಯವರೆಗೆ ಮಹಿಳೆಯರನ್ನು ಫಲಾನುಭವಿಗಳನ್ನಾಗಿ ನೋಡಲಾಗುತ್ತಿತ್ತು. ಈ ಯೋಜನಾವಧಿಯಲ್ಲಿ ಅವರನ್ನು ಪಾಲುದಾರರನ್ನಾಗಿ ಮತ್ತು ಭಾಗವಹಿಸುವವರನ್ನಾಗಿ ನೋಡುವುದರ ಪರಿಪಾಠವು ಬೆಳೆಯಿತು. ಇದರಿಂದ ಈ ಯೋಜನೆಯಲ್ಲಿ ಪರಿಕ್ರಮವು ಮಹಿಳಾ 'ಅಭಿವೃದ್ಧಿಯಿಂದ ಸಶಕ್ತೀಕರಣಕ್ಕೆ' ಪಲ್ಲಟಗೊಂಡಿತು(ಹೇಮಲತಾ ಹೆಚ್.ಎಂ., ಮಹಿಳಾ ಅಧ್ಯಯನ, ಸಂಚಿಕೆ ೩, ಪು.೯೮, ೨೦೦೬).

## ೪.೯. ಮಹಿಳೆಯರಿಗಾಗಿಯೇ ನಿರ್ದಿಷ್ಟಪಡಿಸಿದ ಯೋಜನೆಗಳು

೮೦ರ ದಶಕದಿಂದೀಚೆಗೆ ಭಾರತ ಸರ್ಕಾರ ಮಹಿಳಾ ಅಭಿವೃದ್ಧಿಗಾಗಿ ಮಹಿಳಾ ನಿರ್ದಿಷ್ಟ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ. ಅಂದರೆ ಮಹಿಳೆಯರಿಗಾಗಿಯೇ ವಿಶೇಷವಾಗಿ ಅವರ ಸಶಕ್ತೀಕರಣಕ್ಕಾಗಿ ಕಾರ್ಯನೀತಿ ಹಾಗೂ ಯೋಜನೆಗಳನ್ನು ರೂಪಿಸಿ ಜಾರಿಗೊಳಿಸುತ್ತಿವೆ. ಅದೇ ರೀತಿಯಲ್ಲಿ ರಾಜ್ಯ ಸರಕಾರಗಳು ಕೂಡ ೨೦೦೦ ಮತ್ತು ೨೦೦೧ನೇ ಸಾಲಿನಿಂದ ಮಹಿಳೆಯರಿಗಾಗಿಯೇ ಕೆಲವು ಯೋಜನೆಗಳನ್ನು ರೂಪಿಸಿವೆ. ಈ ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳು ರೂಪಿಸಿರುವಂತಹ ಯೋಜನೆಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.



### ೪.೯.೧. ಕೇಂದ್ರ ಸರಕಾರ ರೂಪಿಸಿರುವಂತಹ ಯೋಜನೆಗಳು

#### ೪.೯.೧.೧. ಮಹಿಳೆಯರು ಮತ್ತು ಹುಡುಗಿಯರಿಗೆ ತಾತ್ಕಾಲಿಕ ಆಶ್ರಯ ತಾಣಗಳು

೧೯೬೯ರಲ್ಲಿ ಈ ಯೋಜನೆಯು ಜಾರಿಗೆ ಬಂದಿತು. ಈ ಯೋಜನೆಯಡಿ ಕುಟುಂಬದ ಸಮಸ್ಯೆಗಳು, ಮಾನಸಿಕ ಒತ್ತಡ, ಸಾಮಾಜಿಕ ಬಹಿಷ್ಕಾರ ಹಾಗೂ ಇತರ ಶೋಷಣೆಗಳಿಂದ ಅಪಾಯಕ್ಕೀಡಾದ ಮಹಿಳೆಯರು ಮತ್ತು ಹುಡುಗಿಯರಿಗೆ ತಾತ್ಕಾಲಿಕ ಆಶ್ರಯ ತಾಣಗಳನ್ನು ತೆರೆಯಲಾಯಿತು. ಇಲ್ಲಿ ಆಶ್ರಯವನ್ನು ಅರಸಿ ಬಂದಂತಹ ಮಹಿಳೆಯರಿಗೆ ವೈದ್ಯಕೀಯ ಸೌಲಭ್ಯ, ಮಾನಸಿಕ ಚಿಕಿತ್ಸೆ, ಶಿಕ್ಷಣ

ಹಾಗೂ ವೃತ್ತಿ ತರಬೇತಿ ಮತ್ತು ಮನೋರಂಜನ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ೧೯೯೫ನೇ ಇಸವಿಯಲ್ಲಿ ೨೯೮ ತಾತ್ಕಾಲಿಕ ಆಶ್ರಯ ತಾಣಗಳು ಸಹಾಯ ಧನವನ್ನು ಪಡೆದು ಅದರಿಂದ ೫೯೬೦ ಮಹಿಳೆಯರು ಅನುಕೂಲ ಪಡೆದರು.

**೪.೯.೧.೨. ಉದ್ಯೋಗಸ್ಥ ಮಹಿಳೆಯರಿಗೆ ವಸತಿ ನಿಲಯ**

ಉದ್ಯೋಗ ಮಾರುಕಟ್ಟೆಯಲ್ಲಿ ಮಹಿಳೆಯರ ಚಲನಶೀಲತೆಯನ್ನು ಹೆಚ್ಚಿಸುವ ಸಲುವಾಗಿ ಸರ್ಕಾರ ೧೯೭೩ರಲ್ಲೇ ಉದ್ಯೋಗಸ್ಥ ಮಹಿಳೆಯರಿಗೆ ವಸತಿ ನಿಲಯಗಳನ್ನು ತೆರೆಯುವ ಯೋಜನೆಯನ್ನು ಆರಂಭಿಸಿತು. ಇದು ನಗರ ಅಥವಾ ಪಟ್ಟಣಗಳಿಗೆ ಉದ್ಯೋಗ ನಿಮಿತ್ತ ಬರುವ ಒಂಟಿ ಮಹಿಳೆಯರಿಗೆ ಸುರಕ್ಷಿತ ಮತ್ತು ಕಡಿಮೆ ವೆಚ್ಚದ ವಸತಿ ಸೌಕರ್ಯವನ್ನು ಒದಗಿಸುವ ಗುರಿಯನ್ನು ಹೊಂದಿದೆ. ರೂ.೫೦೦೦ಕ್ಕಿಂತ ಕಡಿಮೆ ಸಂಚಿತ ವೇತನ ಪಡೆಯುತ್ತಿರುವ ಉದ್ಯೋಗಸ್ಥ ಮಹಿಳೆಯರು ಈ ವಸತಿ ನಿಲಯಗಳಲ್ಲಿ ವಾಸಿಸಲು ಅರ್ಹರು. ಅವರು ಗರಿಷ್ಠ ೫ ವರ್ಷಗಳ ಕಾಲ ಅಲ್ಲಿ ವಾಸಿಸಬಹುದು. ಈ ಯೋಜನೆಯಿಂದ ೪೯೫೦೫ ಉದ್ಯೋಗಸ್ಥ ಮಹಿಳೆಯರು ಹಾಗೂ ಅವರನ್ನು ಅವಲಂಬಿಸಿದ್ದ ೬,೮೫೨ ಮಕ್ಕಳು ಲಾಭ ಪಡೆದುಕೊಂಡರು.

**೪.೯.೧.೩. ಸಮಗ್ರ ಬಾಲ ವಿಕಾಸ ಯೋಜನೆ**

ಸಮಗ್ರ ಬಾಲ ವಿಕಾಸ ಯೋಜನೆಯು ೧೯೭೪ರಲ್ಲಿ ಪ್ರಾರಂಭವಾಯಿತು. ಇಡೀ ದೇಶದಲ್ಲಿ ಅತ್ಯಂತ ಹಿಂದುಳಿದ ಗ್ರಾಮೀಣ, ಬುಡಕಟ್ಟು ಹಾಗೂ ನಗರದ ಕೊಳಚೆ ಪ್ರದೇಶಗಳಲ್ಲಿ ವಾಸಿಸುವ ಲಕ್ಷಾಂತರ ಮಕ್ಕಳು ಮತ್ತು ತಾಯಂದಿರಿಗೆ ಈ ಯೋಜನೆಯು ವರದಾನವಾಗಿ ಬಂದಿತು. ಇದು ಚಿಕ್ಕ ಮಕ್ಕಳ, ಗರ್ಭಿಣಿಯರು, ಹಾಲುಣಿಸುವ ತಾಯಂದಿರು ಹಾಗೂ ಯುವತಿಯರ ಪೌಷ್ಟಿಕತೆ ಮತ್ತು ಆರೋಗ್ಯದ ಮಟ್ಟವನ್ನು ಉತ್ತಮಪಡಿಸುವ ಗುರಿಯನ್ನು ಹೊಂದಿದೆ.

**೪.೯.೧.೪. ಉದ್ಯೋಗಸ್ಥ ಅಥವಾ ರೋಗಪೀಡಿತ ತಾಯಂದಿರ ಮಕ್ಕಳಿಗೆ ಶಿಶುಕೇಂದ್ರ**

೧೯೭೫-೭೬ ರಿಂದ ಸರ್ಕಾರ ಉದ್ಯೋಗಸ್ಥ ಅಥವಾ ರೋಗಪೀಡಿತ ತಾಯಂದಿರ ಮಕ್ಕಳಿಗೆ ಶಿಶುಕೇಂದ್ರಗಳನ್ನು ತೆರೆಯುತ್ತಿದೆ. ಅವುಗಳನ್ನು ಅಂಗನವಾಡಿ ಕೇಂದ್ರಗಳೆಂದು ಕರೆಯಲಾಗುತ್ತದೆ. ಈ ಯೋಜನೆಯು ೦.೫ ವರ್ಷ ವಯಸ್ಸಿನ ಮಕ್ಕಳನ್ನು ಹಗಲು ಹೊತ್ತಿನಲ್ಲಿ ನೋಡಿಕೊಳ್ಳುವ ಸೇವೆಯನ್ನು ಒದಗಿಸುತ್ತದೆ. ಮಕ್ಕಳನ್ನು ನೋಡಿಕೊಳ್ಳುವ ಕಾರ್ಯಕರ್ತೆಯರನ್ನು ಮತ್ತು ಅಡುಗೆ ಕೆಲಸಗಾರರನ್ನು ಸರ್ಕಾರ ನೇಮಿಸುತ್ತದೆ. ರಾಷ್ಟ್ರಮಟ್ಟದಲ್ಲಿ ಎರಡು ಪ್ರಮುಖ ಸಂಘಟನೆಗಳಾದ 'ಇಂಡಿಯನ್ ಕೌನ್ಸಿಲ್ ಫಾರ್ ಚೈಲ್ಡ್ ವೆಲ್ ಫೇರ್' ಮತ್ತು ಭಾರತೀಯ ಅಧಿಮ್ ಜಾತಿ ಸೇವಕ ಸಂಘ'ಗಳು ಶಿಶು ಕೇಂದ್ರಗಳನ್ನು ನಡೆಸುತ್ತಿವೆ. ಇಡೀ ರಾಷ್ಟ್ರದಲ್ಲಿ ೧೨,೪೭೦ ಶಿಶು ಕೇಂದ್ರಗಳಿದ್ದು, ೩.೧೨ ಲಕ್ಷ ಮಕ್ಕಳು

ಇದರ ಉಪಯೋಗ ಪಡೆಯುತ್ತಿವೆ. ಹಣಕಾಸಿನ ಮುಗ್ಗಟ್ಟಿನಿಂದ ಈ ಯೋಜನೆಯು ೧೯೮೮-೮೯ರಿಂದ ವಿಸ್ತಾರಗೊಳ್ಳದೆ ಸ್ಥಿರವಾಗಿ ನಿಂತಿದೆ.

**೪.೯.೧.೫. ಕನ್ಡೆನ್ಸ್ಡ್ ಕೋರ್ಸ್ ಆಫ್ ಎಜುಕೇಶನ್ ಮತ್ತು ವೃತ್ತಿ ತರಬೇತಿ ಕಾರ್ಯಕ್ರಮ**

ಈ ಯೋಜನೆಯನ್ನು ಸರ್ಕಾರ ಕ್ರಮವಾಗಿ ೧೯೫೮ ಮತ್ತು ೧೯೭೫ರಲ್ಲಿ ಪ್ರಾರಂಭಿಸಿತು. ಇದರ ಮುಖ್ಯ ಉದ್ದೇಶ ಅಗತ್ಯವಿರುವ ಮಹಿಳೆಯರ ವಿದ್ಯಾರ್ಹತೆ ಮತ್ತು ಕೌಶಲ್ಯವನ್ನು ಹೆಚ್ಚಿಸಿ ಉದ್ಯೋಗದಲ್ಲಿ ತೊಡಗುವಂತೆ ಮಾಡುವುದು. ಈ ಯೋಜನೆ ೧೫ ವರ್ಷ ಮತ್ತು ೧೫ ವರ್ಷಕ್ಕಿಂತ ಮೇಲ್ಪಟ್ಟ ಹುಡುಗಿಯರು ಪ್ರಾಥಮಿಕ ಮಾಧ್ಯಮಿಕ, ಪ್ರೌಢಶಿಕ್ಷಣದಲ್ಲಿ ಉತ್ತೀರ್ಣರಾಗಲು ೨-೩ ವರ್ಷಗಳ ಕೋರ್ಸುಗಳನ್ನು, ಎಸ್ .ಎಸ್ .ಎಲ್ .ಸಿ ಮತ್ತು ಪಿ.ಯು.ಸಿ.ಯಲ್ಲಿ ಅನುತ್ತೀರ್ಣರಾದ ಹುಡುಗಿಯರಿಗೆ ಒಂದು ವರ್ಷದ ಕೋರ್ಸನ್ನು ನಡೆಸಲು ಈ ಇಲಾಖೆಯು ಅನುದಾನ ನೀಡುತ್ತದೆ.

**೪.೯.೧.೬. ತರಬೇತಿ + ಉದ್ಯೋಗ + ಉತ್ಪಾದನಾ ಕೇಂದ್ರಗಳು (NORAD)**

NORAD ಎಂದು ಕರೆಯಲ್ಪಡುವ ತರಬೇತಿ, ಉದ್ಯೋಗ ಮತ್ತು ಉತ್ಪಾದನಾ ಕೇಂದ್ರಗಳ ಯೋಜನೆಯಲ್ಲಿ ಸಾರ್ವಜನಿಕ ಘಟಕಗಳು, ಕಾರ್ಪೋರೇಷನ್ಸ್ , ಸ್ವಾಯತ್ತ ಮಂಡಳಿಗಳು, ಸ್ವಯಂಸೇವಾ ಸಂಸ್ಥೆಗಳು ಮಹಿಳೆಯರಿಗೆ ಅಸಂಪ್ರದಾಯಿಕ ಕೌಶಲ್ಯಗಳಲ್ಲಿ ತರಬೇತಿ ನೀಡಲು ಸಹಾಯ ಧನವನ್ನು ನೀಡಲಾಗುತ್ತದೆ. ಅಸಂಪ್ರದಾಯಿಕ ಕೌಶಲ್ಯಗಳಲ್ಲಿ ಎಲೆಕ್ಟ್ರಾನಿಕ್ಸ್, ಎಲೆಕ್ಟ್ರಿಕಲ್ಸ್, ಗಡಿಯಾರ ಉತ್ಪಾದನೆ, ಕಂಪ್ಯೂಟರ್, ಪ್ರಿಂಟಿಂಗ್ ಮತ್ತು ಬೆಂಡಿಂಗ್, ಸಿದ್ಧ ಉಡುಪು ಉತ್ಪಾದನೆ, ಹೋಟೆಲ್ ಮ್ಯಾನೇಜ್ ಮೆಂಟ್, ಫ್ಯಾಷನ್ ಟೆಕ್ನಾಲಜಿ, ಪ್ರವಾಸೋಧ್ಯಮ, ಬೇಕರಿ ಉತ್ಪಾದನೆ ಮತ್ತು ಆಫೀಸ್ ಮ್ಯಾನೇಜ್ ಮೆಂಟ್ ಈ ತರಬೇತಿಗಳು ಈ ಒಂದು ಯೋಜನೆಯಲ್ಲಿ ಸೇರಿರುತ್ತದೆ.

**೪.೯.೧.೭. ಮಹಿಳೆಯರಿಗೆ ತರಬೇತಿ ಮತ್ತು ಉದ್ಯೋಗ ಕಾರ್ಯಕ್ರಮ**

ಸಪೋರ್ಟ್ ಟು ಟ್ರೇನಿಂಗ್ ಎಂಡ್ ಎಂಪ್ಲಾಯ್ ಮೆಂಟ್ ಪ್ರೋಗ್ರಾಮ್ ಫಾರ್ ವುಮೆನ್ (STEP) ಇದನ್ನು ೧೯೮೭ರಲ್ಲಿ ಪ್ರಾರಂಭಿಸಲಾಯಿತು. ಬಡ ಮಹಿಳೆಯರ ಕೌಶಲ್ಯವನ್ನು ವೃದ್ಧಿಗೊಳಿಸಿ ಜಾಗೃತಿ ಮೂಡಿಸುವ ತರಬೇತಿ ನೀಡಿ ಸಾಂಪ್ರದಾಯಿಕ ವಲಯಗಳಾದ ಕೃಷಿ, ಪಶುಸಂಗೋಪನೆ, ಮೀನುಗಾರಿಕೆ, ಹ್ಯಾಂಡ್ ಲೂಮ್ , ಕರಕುಶಲ, ರೇಷ್ಮೆ ಸಾಕಾಣಿಕೆ, ಸಾಮಾಜಿಕ ಅರಣ್ಯೀಕರಣ, ವಾಟರ್ ಶೆಡ್ ಡೆವಲಪ್ ಮೆಂಟ್ ಇತ್ಯಾದಿಗಳಲ್ಲಿ ಉದ್ಯೋಗಾವಕಾಶಗಳನ್ನು ಪಡೆಯುವಂತೆ ಮಾಡುವುದು ದರ ಗುರಿ. ತರಬೇತಿ ಮತ್ತು ಉದ್ಯೋಗದ ಜೊತೆಗೆ ಈ ಯೋಜನೆಯು ಮಹಿಳೆಯರಲ್ಲಿ ಜಂಡರ್ ಸೂಕ್ಷ್ಮತೆ ಬೆಳೆಸುವ ಅವರನ್ನು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ತೊಡಗುವಂತೆ ಮಾಡಲು ಬೇಕಾದ ಸೇವಾ ಸೌಲಭ್ಯಗಳನ್ನು ಒದಗಿಸುತ್ತದೆ.

## ೪.೯.೨. ರಾಜ್ಯ ಸರಕಾರ ರೂಪಿಸಿರುವಂತಹ ಯೋಜನೆಗಳು

### ೪.೯.೨.೧. ಸ್ತ್ರೀ-ಶಕ್ತಿ ಯೋಜನೆ

ಕರ್ನಾಟಕ ಘನ ಸರ್ಕಾರವು ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಗಾಗಿ ಸ್ವಶಕ್ತಿ, ನಮ್ಮ ಮಗಳು, ನಮ್ಮ ಶಕ್ತಿ, ಬಾಲಕಾರ್ಮಿಕರಿಗಾಗಿ ಪುನರ್ವಸತಿ ಕೇಂದ್ರ, ಕಾನೂನಿನ ಮಹಿಳಾ ಪದವೀಧರೆಯರಿಗೆ ಆರ್ಥಿಕ ನೆರವು, ಗ್ರಾಮೀಣ ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿವೇತನ, ವಿದ್ಯಾರ್ಥಿ ನಿಲಯಗಳು ವಿಧವಾ ಮಾಶಸನ, ಮಾಂಗಲ್ಯ ಭಾಗ್ಯ ಮುಂತಾದ ಕಾರ್ಯಕ್ರಮಗಳನ್ನು ಜಾರಿಗೆ ತಂದಿವೆ.

ಸ್ತ್ರೀ-ಶಕ್ತಿ ಯೋಜನೆಯು ಕರ್ನಾಟಕ ಘನ ಸರ್ಕಾರವು ಜಾರಿಗೆ ತಂದಿರುವ ಒಂದು ವಿಶೇಷ ಯೋಜನೆ. ಇದನ್ನು "ಮಹಿಳೆಯರ ಏಳಿಗೆಯಲ್ಲಿ ದೇಶದ ಅಭಿವೃದ್ಧಿ ಅಡಗಿದೆ" ಎಂಬ ಮಹಾತ್ಮ ಗಾಂಧೀಜಿಯವರ ಮೌಲ್ಯಯುತ ನುಡಿ ಆಧಾರಿತ ನಂಬಿಕೆಯನ್ನು ಸಾಕಾರಗೊಳಿಸಲು ಹಮ್ಮಿಕೊಳ್ಳಲಾಗಿದೆ. ಯಾವುದೇ ಸಮಾಜದ ಸುಭದ್ರ ಸ್ಥಿತಿಗೆ ಸ್ತ್ರೀಯರ ಕೊಡುಗೆ ಅಪಾರ. ಸಮಾಜವೆಂಬ ನಿರಂತರ ಚಲಿಸುವ ರಥಕ್ಕೆ ಇರುವ ಎರಡು ಗಾಲಿಗಳೇ ಪುರುಷ ಮತ್ತು ಸ್ತ್ರೀ. ಈ ಎರಡೂ ಗಾಲಿಗಳು ಸಮಾನ ಸ್ಥಾನಮಾನದವುಗಳು ಹಾಗೂ ಸಮಾನ ಬಲದವುಗಳಾಗಿರುವುದೇ ಸೂಕ್ತ. ಇವೆರಡರಲ್ಲಿ ಯಾವುದೊಂದನ್ನು ಕಡೆಗಾಣಿಸಿದರೂ ಪರಿಣಾಮ ಕಷ್ಟ. ಅಂತೆಯೇ ಸದೃಢ ಸಮಾಜದ ಅಸ್ತಿತ್ವಕ್ಕೆ ಸದೃಢ ಪುರುಷ ಹಾಗೂ ಸದೃಢ ಸ್ತ್ರೀಯರ ಇರುವಿಕೆ ಅತ್ಯಗತ್ಯ. ಆದರೆ ಭಾರತೀಯ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳಲ್ಲಿ ಕಾಲಕಾಲಕ್ಕೆ ಬಹಳ ಏರಿಳಿತಗಳು ಕಂಡುಬಂದಿವೆ. ಆಕೆಯನ್ನು ಪುರುಷನಿಗೆ ಸರಿಸಮಾನವಾಗಿ ನಡೆಸಿಕೊಂಡಿರುವುದು ಕಡಿಮೆ. ಈ ಹಿನ್ನೆಲೆಯಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ಸುಧಾರಿಸುವ ನಿಟ್ಟಿನಲ್ಲಿ ಉಪಯುಕ್ತ ಯೋಜನೆಯಾಗಿ ಈ ಯೋಜನೆಯನ್ನು ಕರ್ನಾಟಕ ರಾಜ್ಯವು ೨೦೦೦ದ ಇಸವಿ ಅಕ್ಟೋಬರ್ ಎರಡನೇ ತಾರೀಕಿನಂದು ಜಾರಿಗೆ ತಂದಿದೆ.

#### ಕಾರ್ಯಕ್ರಮಗಳು

ಸ್ತ್ರೀ ಶಕ್ತಿಯೋಜನೆಯನ್ವಯ ಕೈಗೊಳ್ಳಲಾಗಿರುವ ಕಾರ್ಯಕ್ರಮಗಳು ಈ ಕೆಳಕಂಡಂತಿರುವುವು.

- ರಾಜ್ಯದ ೧೭೫ ತಾಲ್ಲೂಕುಗಳಲ್ಲಿ ತಲಾ ಗರಿಷ್ಠ ೨೦ ಮಹಿಳೆಯರ ತಲಾ ಒಂದು ಲಕ್ಷ ಸ್ವ-ಸಹಾಯ ತಂಡಗಳನ್ನು ರೂಪಿಸುವುದು. ಈ ಮಹಿಳೆಯರಿಗೆ ಸಂಪಾದನೆಯ ವಿವಿಧ ಚಟುವಟಿಕೆಗಳಲ್ಲಿ ತರಬೇತಿ ನೀಡಿ ಅವರನ್ನು ಸ್ವಾವಲಂಬಿಗಳನ್ನಾಗಿಸುವುದು.
- ಈ ಯೋಜನೆಗೆ ನಿಗಧಿಪಡಿಸಲಾಗಿರುವ ೨೨ ಕೋಟಿ ರೂಪಾಯಿಗಳ ಜೊತೆಗೆ ರೂ.೫೦ ಕೋಟಿ ಹಣದ ಆವರ್ತ ನಿಧಿಯನ್ನು ಸ್ಥಾಪಿಸುವುದು.

- ಸ್ತ್ರೀಯರಿಗೆ ಸಂಬಂಧಿಸಿದ ವಿವಿಧ ಇಲಾಖೆಗಳೊಡನೆ ಸಮನ್ವಯವನ್ನು ಸಾಧಿಸುತ್ತಾ, ಸಾಲ ನೀಡುವ ಸಂಸ್ಥೆಗಳ ವಿವರಗಳನ್ನು ನೀಡಲಾಗುವುದು. ಸ್ತ್ರೀಯರಿಗೆ ಸುಲಭವಾಗಿ ಸಾಲ ಸಿಗುವಂತೆ ಏರ್ಪಾಡು ಮಾಡುವುದು.
- ಅಂಗನವಾಡಿ ಕಾರ್ಯಕರ್ತೆಯರ ಮೂಲಕ ಸ್ವ ಸಹಾಯ ತಂಡಗಳನ್ನು ಗುರ್ತಿಸುವುದು.
- ಸಮಸ್ತ ಉಸ್ತುವಾರಿಗೆ ಕಂಪ್ಯೂಟರ್ ಜಾಲದ ಮೂಲಕ ಅಂಕಿ ಅಂಶಗಳನ್ನು ಗಣಕೀಕರಿಸುವುದು.

**ಅನುಸರಿಸುವ ಮಾನದಂಡಗಳು**

ಸ್ತ್ರೀ-ಶಕ್ತಿ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಸ್ತ್ರೀಯರು ಸ್ವಸಹಾಯ ತಂಡಗಳನ್ನು ರೂಪಿಸುವಾಗ ಅನುಸರಿಸಲಾಗುವ ಮಾನದಂಡಗಳು ಈ ಕೆಳಕಂಡಂತಿರುವುವು.

- ಬಡತನದ ರೇಖೆಗಿಂತ ಕೆಳಗಿರುವ ಗ್ರಾಮೀಣ ಸ್ತ್ರೀಯರು
- ಭೂರಹಿತ ಕೃಷಿ ಕಾರ್ಮಿಕ ಸ್ತ್ರೀಯರು
- ಪರಿಶಿಷ್ಟ ಜಾತಿ ಹಾಗೂ ಪಂಗಡಗಳಿಗೆ ಸೇರಿದ ಸ್ತ್ರೀಯರು.
- ಮದ್ಯ ಹಾಗೂ ಮಾದಕ ವಸ್ತುಗಳ ವ್ಯಸನಿಗಳ ಕುಟುಂಬಗಳ ಸ್ತ್ರೀಯರು.
- ಅಂಗವಿಕಲ ಕುಟುಂಬಗಳಿಗೆ ಸೇರಿದ ಸ್ತ್ರೀಯರು.

**೪.೯.೨.೨. ನಮ್ಮ ಮಗಳು, ನಮ್ಮ ಶಕ್ತಿ ಯೋಜನೆ**

**ಕಾರ್ಯಕ್ರಮದ ಹಿನ್ನೆಲೆ ಹಾಗೂ ಉದ್ದೇಶ**

ಇತ್ತೀಚೆಗೆ ಹೆಣ್ಣು ಭ್ರೂಣ ಹತ್ಯೆ ಸಂಖ್ಯೆ ವಿಪರೀತವಾಗಿದ್ದು ಲಿಂಗ ಅಸಮಾನತೆಯನ್ನು ತಡೆಯಲು ಈ ಕಾರ್ಯಕ್ರಮವನ್ನು ಸರ್ಕಾರವು ಜಾರಿಗೆ ತಂದಿದೆ. ಹೆಣ್ಣು ಮಕ್ಕಳು ಅಂಗನವಾಡಿ ಕೇಂದ್ರಕ್ಕೆ ಹಾಜರಾಗುವುದು, ಹೆಣ್ಣು ಭ್ರೂಣ ಹತ್ಯೆ ತಡೆಯುವುದು, ಲಿಂಗ ಅಸಮಾನತೆಯನ್ನು ತಡೆಯುವುದು, ಹೆಣ್ಣು ಮಕ್ಕಳ ಪ್ರಾಯ ಪೂರ್ವ ವಿವಾಹ, ಕುಟುಂಬ ಯೋಜನೆ, ಹೆಣ್ಣು ಮಕ್ಕಳ ವ್ಯಾಸಂಗ ಮುಂದುವರಿಸುವಿಕೆ ಮುಂತಾದ ಅನೇಕ ಉದ್ದೇಶಗಳನ್ನು ಈ ಯೋಜನೆ ಹೊಂದಿದೆ.

**ಯೋಜನಾ ವಿವರ**

ಇದು ರಾಜ್ಯ ಸರಕಾರದ ಕಾರ್ಯಕ್ರಮವಾಗಿದ್ದು, ರಾಜ್ಯ ಸರ್ಕಾರದಿಂದ ಪೂರ್ಣ ಅನುದಾನ ಬಿಡುಗಡೆಯಾಗುತ್ತದೆ. ಅರ್ಹತೆಯುಳ್ಳ ಫಲಾನುಭವಿಗಳನ್ನು ತಾಲ್ಲೂಕು ಮಟ್ಟದ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಆಯ್ಕೆ ಮಾಡಿ ಪಟ್ಟಿಯನ್ನು ಸಹಾಯಕ ನಿರ್ದೇಶಕರಿಗೆ ಸೂಕ್ತ ಶಿಫಾರಸ್ಸಿನೊಂದಿಗೆ

ಕಳುಹಿಸಿದ ನಂತರ ಆ ವರ್ಷದಲ್ಲಿ ಲಭ್ಯವಿರುವ ಅನುಧಾನಕ್ಕೆ ಅನುಗುಣವಾಗಿ ಫಲಾನುಭವಿಗಳಿಗೆ ಫಲಾನುಭವಿಯ ಹಾಗೂ ಅವರ ತಾಯಿಯ ಹೆಸರಲ್ಲಿ ಭಾರತೀಯ ಜೀವ ವಿಮಾ ನಿಗಮಕ್ಕೆ ರೂ.೨೫೦೦ ಅನ್ನು ಠೇವಣಿ ಇಡಲು ಅನುಮೋದನೆಗಾಗಿ ಮುಖ್ಯ ಕಾರ್ಯನಿರ್ವಹಕ ಅಧಿಕಾರಿಗಳಿಗೆ ಸಹಾಯಕ ನಿರ್ದೇಶಕರು, ಸಲ್ಲಿಸಬೇಕು. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಅನುಮೋಧನೆ ಮೇರೆಗೆ ಭಾರತೀಯ ಜೀವ ವಿಮಾ ನಿಗಮಕ್ಕೆ ಸಹಾಯಕ ನಿರ್ದೇಶಕರು ಠೇವಣಿ ಮಾಡಬೇಕು. ಇದರೊಂದಿಗೆ ಮಗುವಿನ ತಾಯಿಯ ಹೆಸರಲ್ಲಿ ವಿಮೆ ಮಾಡಲು ಪ್ರತಿ ಫಲಾನುಭವಿಗೆ ವಿಮೆ ಕಂತು ರೂ.೬೫ ಅನ್ನು ಭರಿಸಬೇಕಾಗಿದ್ದು ಈ ವಿಮೆ ಕಂತಿನ ಮೊತ್ತವನ್ನು ಭಾರತೀಯ ಜೀವ ವಿಮಾ ನಿಗಮ ಯೋಜನೆಯ ವಿಧಿಯಿಂದ ಗಳಿಸಿದ ಹಣದಿಂದ ಭರಿಸಲಾಗುತ್ತಿದೆ.

ಈ ಯೋಜನೆಯನ್ವಯ ಮಗುವಿಗೆ ೬ ವರ್ಷ ವಯಸ್ಸಿನಿಂದ ೯ ವರ್ಷದವರೆಗೆ ೪ ವರ್ಷಗಳು ವಾರ್ಷಿಕ ರೂ.೨೦೦, ೧೦ ವರ್ಷದಿಂದ ೧೩ನೇ ವರ್ಷದವರೆಗೆ, ೪ ವರ್ಷಗಳು ವಾರ್ಷಿಕ ರೂ.೩೦೦ ೧೪ನೇ ವರ್ಷದಿಂದ ೧೭ನೇ ವರ್ಷದವರೆಗೆ, ೪ ವರ್ಷಗಳು ವಾರ್ಷಿಕ ರೂ.೪೦೦ ಲಾಭಾಂಶವನ್ನು ಹಾಗೂ ೧೮ ವರ್ಷ ತುಂಬಿದಾಗ ರೂ.೪೪೧೦ ಗಳನ್ನು ಭಾರತೀಯ ಜೀವ ವಿಮಾ ನಿಗಮದಲ್ಲಿ ಫಲಾನುಭವಿಗಳಿಗೆ ನೀಡತಕ್ಕದ್ದು ಈ ಲಾಭಾಂಶ ಹಾಗೂ ಮೊತ್ತವನ್ನು ಪಡೆಯಲು ಫಲಾನುಭವಿಗಳು ಪ್ರತಿ ವರ್ಷವೂ ವ್ಯಾಸಂಗವನ್ನು ಮುಂದುವರಿಸಿರಬೇಕು. ಹಾಗೂ ೧೮ ವರ್ಷದವರೆಗೆ ವಿವಾಹವಾಗಿರ ಕೂಡದು. ಲಾಭಾಂಶದ ಹಣವನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಫಲಾನುಭವಿಗಳಿಂದ ಜಂಟಿ ಖಾತೆಯನ್ನು ತೆರೆಯಿಸಿ ಪಾವತಿಸತಕ್ಕದ್ದು.

ಅರ್ಹತೆಗಳು

ಈ ಕೆಳಕಂಡ ಅರ್ಹತೆಯುಳ್ಳ ಹೆಣ್ಣು ಮಕ್ಕಳು ಈ ಯೋಜನೆಯಡಿ ಪ್ರಯೋಜನ ಪಡೆಯಬಹುದು.

- ಹೆಣ್ಣು ಮಗುವಿನ ಕುಟುಂಬವು ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುತ್ತಿದ್ದು ಬಡತನ ರೇಖೆಗಿಂತ ಕಡಿಮೆಯಿರಬೇಕು.
- ಮೂರು ಮಕ್ಕಳಿಗಿಂತ ಹೆಚ್ಚು ಮಕ್ಕಳಿರದ ಕುಟುಂಬವಾಗಿರಬೇಕು. ಇಬ್ಬರೂ ಹೆಣ್ಣು ಮಕ್ಕಳಿಗೆ ಮಾತ್ರ ಈ ಯೋಜನೆಯ ಪ್ರಯೋಜನ ಸೀಮಿತವಾಗಿರುತ್ತದೆ.
- ಮಗುವಿನ ಚಾಲ್ತಿ ವರ್ಷದ ತಾರೀಖಿಗೆ ೫ ವರ್ಷ ಪೂರ್ಣಗೊಂಡಿರಬೇಕು. ಆದಾಗ್ಯೂ ಮಗುವು ಯೋಜನೆಗನುಸಾರವಾಗಿ ಅರ್ಹವಾಗಲು ೬ ವರ್ಷ ವಯಸ್ಸು ದಾಟಿರಕೂಡದು.
- ಮಗುವಿನ ತಂದೆ-ತಾಯಿಯರಲ್ಲಿ ಒಬ್ಬರು ಕುಟುಂಬ ಕಲ್ಯಾಣ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡಿರಬೇಕು.

- ಹೆಣ್ಣು ಮಗುವಿಗೆ ರೋಗ ನಿರೋಧಕ ಚುಚ್ಚು ಮದ್ದುಗಳನ್ನು ಹಾಕಿಸಿರಬೇಕು.
- ಹೆಣ್ಣು ಮಗುವು ಅಂಗನವಾಡಿ ಕೇಂದ್ರಕ್ಕೆ ನಿಯಮಿತವಾಗಿ ಹಾಜರಾಗುತ್ತಿರಬೇಕು.
- ಮಗುವು ಯಾವುದೇ ಬಾಲ ಕಾರ್ಮಿಕ ನಿಷೇಧ ಕಾಯ್ದೆ ೧೯೮೬ ರನ್ವಯ ಬಾಲಕಾರ್ಮಿಕಳಾಗಿರಕೂಡದು.
- ವಾರ್ಷಿಕ ಲಾಭಾಂಶ ಪಡೆಯಲು ಆ ಮಗುವು ಶಾಲೆಯಲ್ಲಿ ಪ್ರವೇಶ ಪಡೆದಿರತಕ್ಕದ್ದು ಮತ್ತು ನಿಯಮಿತವಾಗಿ ಶಾಲೆಗೆ ಹಾಜರಾಗಬೇಕು.
- ಶಾಲೆಯಲ್ಲಿ ಪ್ರವೇಶ ಪಡೆದ ನಂತರ ನಾಲ್ಕನೇ ತರಗತಿಯವರೆಗೆ ಪ್ರತಿ ವರ್ಷವು ರೂ.೨೦೦ರಂತೆ ಲಾಭಾಂಶ ನೀಡಬೇಕು. ನಾಲ್ಕನೇ ತರಗತಿಯಿಂದ ಏಳನೇ ತರಗತಿಯವರೆಗೆ ಪಾಸಗಿದ್ದಲ್ಲಿ, ಪ್ರತಿ ವರ್ಷವು ೩೦೦ ರಂತೆ ಲಾಭಾಂಶ ನೀಡಬೇಕು. ಏಳನೇ ತರಗತಿಯಿಂದ ಎಸ್.ಎಸ್.ಎಲ್.ಸಿ.ವರೆಗೆ, ಪಾಸಾಗಿದ್ದಲ್ಲಿ ರೂ.೪೦೦ ರಂತೆ ಲಾಭಾಂಶ ನೀಡಬೇಕು.

**ಯೋಜನೆಗಳ ಅನುಷ್ಠಾನ ವಿಧಾನ**

೧. ಪ್ರತಿವರ್ಷವೂ ಈ ಯೋಜನೆಗೆ ಬೇಕಾಗುವ ಅನುಧಾನವನ್ನು ವಾರ್ಷಿಕ ಕರಡು ಯೋಜನೆಯಲ್ಲಿ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಪ್ರಸ್ತಾಪಿಸಿ ಜಿಲ್ಲಾ ಪಂಚಾಯತ್ ಗೆ ಕಳುಹಿಸಬೇಕು. ವಾರ್ಷಿಕ ಅನುದಾನ ಲಿಂಕ್ ಡಾಕ್ಯುಮೆಂಟಿನಲ್ಲಿ ನಿಗದಿಯಾಗಿ ಬಂದ ನಂತರ ಫಲಾನುಭವಿಗಳ ಹಾಗೂ ಅನುದಾನ ವಿವರಗಳನ್ನೊಳಗೊಂಡ ಕ್ರಿಯಾ ಯೋಜನೆಯನ್ನು ಜಿಲ್ಲಾ ಪಂಚಾಯತ್ ಗೆ ಸಲ್ಲಿಸಿ ಅನುಮೋದನೆ ಪಡೆಯಬೇಕು. ನಂತರ ಎಂ.ಎಂ.ಆರ್ .ನಲ್ಲಿ ಮಾಸಿಕ ಆರ್ಥಿಕ ಮತ್ತು ಭೌತಿಕ ಗುರಿಯನ್ನು ತಯಾರಿಸಿ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯಿಂದ ಅನುಮೋದನೆ ಪಡೆಯಬೇಕು.

೨. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಫಲಾನುಭವಿಗಳನ್ನು ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಸಹಾಯಕ ನಿರ್ದೇಶಕರಿಗೆ ಸೂಕ್ತ ಶಿಫಾರಸ್ಸಿನೊಂದಿಗೆ ಮಂಜೂರಾತಿಗಾಗಿ ಕಳುಹಿಸಬೇಕು.

೩. ಸಹಾಯಕ ನಿರ್ದೇಶಕರು, ಲಭ್ಯವಿರುವ ಅನುಧಾನಕ್ಕನುಗುಣವಾಗಿ ಫಲಾನುಭವಿಗಳ ಹೆಸರಿನಲ್ಲಿ ಭಾರತೀಯ ಜೀವ ವಿಮಾ ನಿಗಮಕ್ಕೆ ಠೇವಣಿ ಮಾಡಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಅನುಮೋದನೆ ಪಡೆಯಬೇಕು. ನಂತರ ಠೇವಣಿ ಮಾಡತಕ್ಕದ್ದು.

೪. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ತಾಲ್ಲೂಕು ಮಟ್ಟದಲ್ಲಿ ಈ ಯೋಜನೆಯ ಫಲಾನುಭವಿಗಳು ವ್ಯಾಸಂಗವನ್ನು ಪ್ರತಿವರ್ಷವೂ ಮುಂದುವರೆಸುತ್ತಿರುವ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯಸ್ಥರಿಂದ ದೃಢೀಕರಣ ಪಡೆದು ಕಛೇರಿಯಲ್ಲಿ ದಾಖಲೆ ಇಡಬೇಕು. ಈ ಮಾಹಿತಿಯನ್ನು ಸಿಡಿಪಿಒರವರು

ಸಹಾಯಕ ನಿರ್ದೇಶಕರಿಗೆ ಕಳುಹಿಸಬೇಕು. ಸಹಾಯಕ ನಿರ್ದೇಶಕರು ಕ್ರೂಢೀಕರಿಸಿದ ವರದಿಯನ್ನು ದೃಢೀಕರಿಸಿ ಜೀವವಿಮಾ ನಿಗಮಕ್ಕೆ ಕಳುಹಿಸಬೇಕು. ಜೀವ ವಿಮಾ ನಿಗಮ ನೀಡಿದ ಲಾಭಾಂಶದ ಚೆಕ್ಕನ್ನು ಸಹಾಯಕ ನಿರ್ದೇಶಕರು, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಕಳುಹಿಸಬೇಕು.

### ೪.೯.೨.೩. ವಿಧವೆಯರ ಮತ್ತು ದೇವದಾಸಿಯರ ಪುನರ್ ವಿವಾಹ ಯೋಜನೆ

**ಕಾರ್ಯಕ್ರಮದ ಹಿನ್ನೆಲೆ ಹಾಗೂ ಉದ್ದೇಶ**

ಸಮಾಜದ ಅನಿಷ್ಟ ಪದ್ಧತಿಗಳಲ್ಲಿ ಒಂದಾದ ದೇವದಾಸಿ ಪದ್ಧತಿ ಹಾಗೂ ವಿಧವೆಯರ ಶೋಚನೀಯ ಪರಿಸ್ಥಿತಿಗಳನ್ನು ಮನಗಂಡು ಅವರ ಪುನರ್ ವಸತಿಗಾಗಿ ಕಾರ್ಯಕ್ರಮವನ್ನು ಸರ್ಕಾರವು ರೂಪಿಸಿದೆ. ದೇವದಾಸಿಯರು, ವಿಧವೆಯರನ್ನು ವಿವಾಹವಾಗಿ ಅವರಿಗೆ ಸೂಕ್ತ ಪುನರ್ ವಸತಿ ಕಲ್ಪಿಸಿದಲ್ಲಿ ಅಂತಹ ವಿವಾಹಗಳಿಗೆ ಪ್ರೋತ್ಸಾಹ ನೀಡುವ ಉದ್ದೇಶ ಈ ಯೋಜನೆಯದಾಗಿದೆ.

**ಯೋಜನಾ ವಿವರ**

ರಾಜ್ಯ ವಲಯ ಕಾರ್ಯಕ್ರಮವಾಗಿದ್ದು ಅನುದಾನ ಪೂರ್ಣ ರಾಜ್ಯದ್ದಾಗಿರುತ್ತದೆ. ದೇವದಾಸಿಯರು, ವಿಧವೆಯನ್ನು ವಿವಾಹವಾಗುವ ದಂಪತಿಗಳಿಗೆ ಸರ್ಕಾರದಿಂದ ರೂ.೧೦,೦೦೦ಗಳನ್ನು ಪ್ರೋತ್ಸಾಹ ಧನವಾಗಿ ನೀಡಲಾಗುವುದು. ಈ ಕಾರ್ಯಕ್ರಮದಲ್ಲಿ ಪ್ರೋತ್ಸಾಹ ಧನ ಪಡೆಯಲು ಅಗತ್ಯವಾದ ಅಂಶಗಳು ಈ ರೀತಿ ಇದೆ.

- ಅರ್ಜಿದಾರಳು ೧೮ ಕ್ಕಿಂತ ಹೆಚ್ಚು ವಯಸ್ಸಿನ ವಿಧವೆಯಾಗಿರಬೇಕು.
- ಕರ್ನಾಟಕ ರಾಜ್ಯದಲ್ಲಿ ಕನಿಷ್ಟ ೫ ವರ್ಷಗಳಿಂದ ವಾಸ ಮಾಡುತ್ತಿರಬೇಕು.
- ವಿಧವೆಯ ಕುಟುಂಬದ ವರಮಾನವು ಬಡತನ ರೇಖೆಗಿಂತ ಕಡಿಮೆ ಮಟ್ಟದ ಆದಾಯ ಹೊಂದಿರಬೇಕು.
- ವರಮಾನ ಪ್ರಮಾಣ ಪತ್ರವನ್ನು ಅಧಿಕೃತ ಅಧಿಕಾರಿಗಳಿಂದ ಪಡೆದು ಲಗತ್ತಿಸಿರಬೇಕು.
- ಅರ್ಜಿದಾರರ ಗುಣ, ನಡತೆಯ ಬಗ್ಗೆ ಸ್ಥಳೀಯರಾದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಅಥವಾ ಗೆಜೆಟೆಡ್ ಅಧಿಕಾರಿಗಳಿಂದ ಪತ್ರವನ್ನು ಲಗತ್ತಿಸಿರಬೇಕು.
- ವಿಧವೆಯರಿಗೆ ಸಂಬಂಧಿಸಿದಂತೆ ಹಿಂದಿನ ಪತಿ ಮರಣ ಹೊಂದಿದ್ದಕ್ಕೆ ಮರಣ ಪತ್ರ ನೀಡಬೇಕು.
- ದೇವದಾಸಿ ಹಾಗೂ ಅವರುಗಳನ್ನು ವಿವಾಹವಾಗುವ ಪುರುಷರು ಇಬ್ಬರು ಯಾವುದೇ ಖಾಯಿಲೆಯಿಂದ ನರಳುತ್ತಿಲ್ಲವೆಂದು ಸರ್ಕಾರಿ ವೈದ್ಯಾಧಿಕಾರಿಗಳಿಂದ ದೃಢೀಕರಣ ಲಗತ್ತಿಸಬೇಕು.
- ವಿವಾಹದ ನೊಂದಣಾಧಿಕಾರಿಗಳಿಂದ ವಿವಾಹವು ನೊಂದಣಿಯಾಗಿ ದೃಢೀಕರಣ ಪತ್ರ ಲಗತ್ತಿಸಬೇಕು.

- ಮಂಜೂರಾತಿ ನೀಡಿದ ವಿವಾಹಗಳಿಗೆ ಪ್ರೋತ್ಸಾಹ ಧನದ ಮೊತ್ತ ರೂ.೧೦,೦೦೦ಗಳಲ್ಲಿ ರೂ.೫೦೦೦ಗಳನ್ನು ನಗದು ರೂಪದಲ್ಲಿ ಮತ್ತು ಉಳಿದ ೫,೦೦೦ ರೂ.ಗಳನ್ನು ವಿವಾಹವಾಗುವ ವಿಧವೆ ಅಥವಾ ದೇವದಾಸಿಯ ಹೆಸರಿನಲ್ಲಿ ರಾಷ್ಟ್ರೀಯ ಉಳಿತಾಯ ಪತ್ರದಲ್ಲಿ ತೊಡಗಿಸಿ ನೀಡಬೇಕು.

**ಯೋಜನೆಗಳ ಅನುಷ್ಠಾನ ವಿಧಾನ**

ಪ್ರತಿವರ್ಷವೂ ಈ ಕಾರ್ಯಕ್ರಮಕ್ಕೆ ಬೇಕಾಗುವ ಅನುಧಾನವನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಕರಡು ವಾರ್ಷಿಕ ಯೋಜನೆಯಲ್ಲಿ ಪ್ರಸ್ತಾಪಿಸಿ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಸಲ್ಲಿಸಬೇಕು. ಸರ್ಕಾರದಿಂದ ಲಿಂಕ್ ಡಾಕ್ಯುಮೆಂಟ್ ನಲ್ಲಿ ಅನುದಾನ ನಿಗದಿಯಾಗಿ ಬಂದ ನಂತರ ಪ್ರೋತ್ಸಾಹ ಧನ ನೀಡುವ ವಿವಾಹಗಳ ಸಂಖ್ಯೆ ಹಾಗೂ ಅರ್ಜಿಗಳ ವಿವರಗಳನ್ನು ಒಳಗೊಂಡು ಕ್ರಿಯಾ ಯೋಜನೆಯನ್ನು ತಾಲ್ಲೂಕು ಪಂಚಾಯಿತಿ ಸ್ಥಾಯಿ ಸಮಿತಿ ಮುಂದೆ ಮಂಡಿಸಿ ಅನುಮೋದನೆ ಪಡೆಯಬೇಕು. ಕ್ರಿಯಾ ಯೋಜನೆ ಅನುಮೋದನೆಯಾದ ನಂತರ ಪ್ರತಿ ಮಾಹೆಯ ಆರ್ಥಿಕ ಮತ್ತು ಭೌತಿಕ ಗುರಿಯನ್ನು ಎಂ.ಎಂ.ಆರ್ .ನಲ್ಲಿ ನಮೂದಿಸಿ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಸಲ್ಲಿಸಿ ಅನುಮೋದನೆ ಪಡೆಯಬೇಕು. ಎಲ್ಲಾ ದೃಡೀಕರಣಗಳನ್ನೊಗೊಂಡು ಬಂದಿರುವ ಅರ್ಜಿಗಳನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಪರಿಶೀಲಿಸಿ ಅರ್ಜಿದಾರಳ ಮನೆಗೆ ಬೇಟಿ ನೀಡಿ ವಿವಾಹದ ನಂತರ ಫಲಾನುಭವಿಗೆ ಸಾಮಾಜಿಕ ಭದ್ರತೆ ಸಿಗುವ ಬಗ್ಗೆ ಮನವರಿಕೆ ಮಾಡಿಕೊಂಡು ಕಾರ್ಯನಿರ್ವಾಹಕ ಅಧಿಕಾರಿಗಳ ಮಂಜೂರಾತಿಗೆ ಶಿಫಾರಸ್ಸು ಮಾಡಿ ಕಳುಹಿಸಬೇಕು ಮತ್ತು ಅನುಮೋದನೆ ನಂತರ ಪ್ರೋತ್ಸಾಹಧನವನ್ನು ಮೇಲೆ ತಿಳಿಸಿದಂತೆ ವಿತರಿಸಬೇಕು.

## ೪.೧೦. ಗ್ರಾಮೀಣ ಪ್ರದೇಶಗಳಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಯೋಜನೆ (DWCRA)

ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮವಾದ ಐ.ಆರ್ .ಡಿ.ಪಿ.ಯಲ್ಲಿ ಶೇ.೪೧ರಷ್ಟು ಸಂಪನ್ಮೂಲವನ್ನು ಮಹಿಳೆಯರಿಗಾಗಿಯೇ ಮೀಸಲಾಗಿಟ್ಟರೂ ಕೂಡ ಅದು ಮಹಿಳೆಯರಿಗೆ ತಲುಪದಿರುವುದನ್ನು ಮನಗಂಡಂತಹ ಸರ್ಕಾರ ೧೯೮೨ರಲ್ಲಿ ಗ್ರಾಮೀಣ ಪ್ರದೇಶದ ಮಹಿಳೆಯರಿಗಾಗಿ ಮಹಿಳಾ ನಿರ್ದಿಷ್ಟ ಕಾರ್ಯಕ್ರಮವಾದ 'ಡ್ವಾಕ್ರಾ'ವನ್ನು ಐ.ಆರ್ .ಡಿ.ಪಿ.ಯ ಉಪಯೋಜನೆಯಾಗಿ ಪ್ರಾರಂಭಿಸಿತು. ಮಹಿಳೆಯರು ಸಂಪೂರ್ಣ ಕುಟುಂಬದ ಜವಾಬ್ದಾರಿಯನ್ನು ಹೊತ್ತಿರುತ್ತಾರೆ. ಅದರ ಜೊತೆಗೆ ಮಕ್ಕಳ ಹೊಣೆಯು ಕೂಡ ತಾಯಂದಿರ ಮೇಲಿರುತ್ತದೆ. ಕುಟುಂಬದ ನಿರ್ವಹಣೆಗೆ, ಮಕ್ಕಳ ಪಾಲನೆಗೆ ಹೋರಾಟ ಮಾಡುವಂತಹ ಸಂದಿಗ್ಧ ಸಂದರ್ಭದಲ್ಲಿ ಕುಟುಂಬದ ಪರಿಸ್ಥಿತಿಯನ್ನು ಸುಧಾರಿಸಲು ಹಾಗೂ ಮಕ್ಕಳನ್ನು ಉತ್ತಮ

ಪ್ರಜೆಗಳನ್ನಾಗಿ ರೂಪಿಸಲು ಮಹಿಳೆಯರ ಪರಿಸ್ಥಿತಿಯನ್ನು ಸುಧಾರಿಸುವುದು ಅಗತ್ಯ ಎಂದು ಕಂಡುಕೊಂಡಂತಹ ಸರ್ಕಾರ 'ಡ್ವಾಕ್ರಾ' ಯೋಜನೆಯನ್ನು ಜಾರಿಗೆ ತಂದಿತು. ಇದರ ಮುಖ್ಯ ಉದ್ದೇಶಗಳನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

- ಗ್ರಾಮೀಣ ಮಹಿಳೆಯರ ಆದಾಯವನ್ನು ಹೆಚ್ಚಿಸುವುದು.
- ಮಹಿಳಾ ಗುಂಪುಗಳನ್ನು ರಚಿಸುವುದರ ಮೂಲಕ ಮಹಿಳೆಯರ ಸ್ಥಾನವನ್ನು ಬಲಪಡಿಸುವುದು.
- ಸಾಮಾಜಿಕ ಸೇವಾ ಸೌಲಭ್ಯಗಳನ್ನು ಗ್ರಾಮೀಣ ಮಹಿಳೆಯರಿಗೆ ದೊರೆಯುವಂತೆ ಮಾಡುವುದು.

ಒಟ್ಟಿನಲ್ಲಿ ಗ್ರಾಮೀಣ ಮಹಿಳೆಯರ ಸಾಮಾಜಿಕ ಆರ್ಥಿಕ ಸ್ಥಾನವನ್ನು ಉತ್ತಮಪಡಿಸುವುದು ಈ ಯೋಜನೆಯ ಗುರಿ. ಇದರಲ್ಲಿ ಸಮುದಾಯದ ಭಾಗವಹಿಸುವಿಕೆ. ತರಬೇತಿ, ವಿಕೇಂದ್ರೀಕರಣ ಕಲ್ಪನೆ, ಸರ್ಕಾರ, ಸಮುದಾಯ ಹಾಗೂ ಸರ್ಕಾರೇತರ ಸಂಸ್ಥೆಗಳ ಜಂಟಿ ಪ್ರಯತ್ನಗಳು ಸೇರಿವೆ.

ಈ ಮೇಲಿನ ಎಲ್ಲಾ ಅಭಿವೃದ್ಧಿ ಯೋಜನೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅವುಗಳ ವಿಫಲತೆಗೆ ಕಾರಣಗಳೇನು? ಎಂಬುದನ್ನು ಮತ್ತು ಮಹಿಳೆಗೆ ಈ ಯೋಜನೆಗಳಿಂದ ಆಗಿರುವ ಉಪಯೋಗಗಳೇನು? ಎಂಬುದನ್ನು ತಿಳಿಯಬಹುದಾಗಿದೆ. ಈ ಎಲ್ಲಾ ಯೋಜನೆಗಳನ್ನು ಪರಿಶೀಲಿಸಿದಾಗ ಸಾಮಾನ್ಯವಾಗಿ ಕಂಡುಬರುವ ಅಂಶವೆಂದರೆ ಈ ಯೋಜನೆಗಳಲ್ಲಿನ ಲಿಂಗ ಅಸಮಾನತೆಯ ಅಂಶಗಳು ಮತ್ತು ಪ್ರಾದೇಶಿಕ ಅಸಮಾನತೆಗಳು ಹೆಚ್ಚು ಹೆಚ್ಚು ಕಂಡುಬರುತ್ತವೆ. ಹಾಗೂ ಈ ಯೋಜನೆಗಳು ಕೇಂದ್ರ ಸರಕಾರದ ಯೋಜನೆಗಳಾಗಿರುವುದರಿಂದ ಇವುಗಳ ಅನುಷ್ಠಾನದಲ್ಲಿ ಬಹಳಷ್ಟು ಲೋಪದೋಷಗಳು ಕಂಡುಬರುತ್ತಿವೆ. ಈ ಎಲ್ಲಾ ಯೋಜನೆಗಳ ಉದ್ದೇಶಗಳು ಉತ್ತಮವಾಗಿಯೇ ಇವೆ. ಆದರೆ ಅವುಗಳು ಯಾವುವೂ ಕೂಡ ಜನರಿಗೆ ಸಮರ್ಪಕವಾಗಿ ದೊರೆಯುತ್ತಿಲ್ಲ. ಇದಕ್ಕೆ ಕಾರಣ ಸರಕಾರದ ನಿರ್ಲಕ್ಷ್ಯ ಮತ್ತು ಜನರಲ್ಲಿರುವ ಅಜ್ಞಾನ, ಅಧಿಕಾರಿಗಳು ಅಭಿವೃದಿಗೆ ಸಂಬಂಧಿಸಿದ ಯೋಜನೆಗಳ ಬಗೆಗೆ ನಿರ್ಲಕ್ಷ್ಯ ತಾಳುತ್ತಾರೆ. ಯೋಜನೆಗಳಿಗೆ ನೀಡಿದ ಹಣ ಖಾಲಿಯಾಗುತ್ತದೆ. ಆದರೆ ಯಾವ ಯೋಜನೆಗಳ ಲಾಭಗಳೂ ಜನರಿಗೆ ತಲುಪುವುದಿಲ್ಲ. ಜನರು ಈ ಯೋಜನೆಗಳ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಗೆ ಪ್ರಶ್ನೆಗಳನ್ನೇ ಹಾಕುವುದಿಲ್ಲ. ಪ್ರಶ್ನಿಸುವ ಮನಸ್ಸು ಕೂಡ ಇಲ್ಲವಾಗಿದೆ. ಅಭಿವೃದ್ಧಿಯಲ್ಲಿನ ಪ್ರಾದೇಶಿಕ ಅಸಮಾನತೆಗಳು ಭಾರತದಂತಹ ರಾಷ್ಟ್ರಕ್ಕೆ ಅಥವಾ ಕರ್ನಾಟಕದಂತಹ ರಾಜ್ಯಕ್ಕೆ ಸೀಮಿತವಾಗಿರದೆ ಇದು ಜಾಗತಿಕ ಸಂಗತಿಗಳಾಗಿವೆ. ಅಭಿವೃದ್ಧಿಯ ಇತಿಹಾಸವನ್ನು ನೋಡಿದಾಗ ಪ್ರಾದೇಶಿಕ ಭಿನ್ನತೆ ಮತ್ತು ಅಸಮಾನತೆಗಳನ್ನು ಕಾಣಬಹುದು. ಈ ಅಸಮಾನತೆಯ ಅಂತರಗಳನ್ನು ಪ್ರಜ್ಞಾಪೂರ್ವಕವಾಗಿ ತಡೆಯದಿದ್ದರೆ ಅವು ಮತ್ತಷ್ಟು ಹೆಚ್ಚಾಗುವ ಸಾಧ್ಯತೆಗಳಿರುತ್ತವೆ. ಈ ಅಸಮಾನತೆಯ ಅವಾಂತರಗಳು ಜನರ ಬದುಕಿನ ಮೇಲೂ ತೀವ್ರ ಪರಿಣಾಮ ಬೀರುತ್ತವೆ. ಭಾರತವು ತನ್ನ ಎದುರಿಗಿಟ್ಟುಕೊಂಡಿರುವ ಪ್ರಮುಖ ಗುರಿಗಳಲ್ಲಿ

ಸಮಾನತೆ ಸಹ ಒಂದಾಗಿದೆ. ಸಂವಿಧಾನದ ೪೪ನೇ ತಿದ್ದುಪಡಿಯು ಸರಕಾರವು ವಿವಿಧ ಗುಂಪುಗಳ ನಡುವಿನ ಹಾಗೂ ಭಿನ್ನ ವಲಯಗಳ ನಡುವಿನ ವರಮಾನ ಮತ್ತು ಅವಕಾಶಗಳಲ್ಲಿಯ ಅಸಮಾನತೆಯನ್ನು ಕಡಿಮೆ ಮಾಡಲು ಪ್ರಯತ್ನಪಡಬೇಕೆಂದು ತಿಳಿಸಿದೆ. ಹಾಗೂ ಸಂವಿಧಾನದ ೧೬ನೆಯ ಕಲಂ ಸಹ, ದೇಶದ, ರಾಜ್ಯಗಳ ವಿವಿಧ ಗುಂಪು, ವಲಯಗಳ ನಡುವೆ ಸಮಾನತೆ ಇರಬೇಕೆಂದು ಸಾರುತ್ತದೆ. ಆದ್ದರಿಂದ ವಿವಿಧ ವಲಯಗಳ ನಡುವಿನ ಮತ್ತು ಅಂತರ ವಲಯಗಳ ನಡುವಿನ ಅಂತರ ಅಸಮಾನತೆಗಳ ತೀವ್ರತೆಯನ್ನು ಕುಗ್ಗಿಸುವುದು ಸರಕಾರದ ಆದ್ಯ ಕರ್ತವ್ಯಗಳಲ್ಲಿ ಒಂದಾಗಿದೆ. ಆದರೆ ಇಂದು ಈ ಸಮಾನತೆ ಎಂಬುದು ಕೇವಲ ಸಂವಿದಾನದ ಪುಸ್ತಕದಲ್ಲಿದೆಯೇ ಹೊರತು ವಾಸ್ತವದಲ್ಲಿ ಈ ಸಮಾನತೆ ಎಂಬುದು ಇಲ್ಲವಾಗಿದೆ.

ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರು, ಮಕ್ಕಳು ಮತ್ತು ಪುರುಷರು ಕೇಂದ್ರಬಿಂದುವಾಗಿರಬೇಕು. ಅಭಿವೃದ್ಧಿ ಇವರ ಸುತ್ತ ಸುತ್ತಬೇಕೆ ಹೊರತು ಪುರುಷರು ಅಭಿವೃದ್ಧಿಯನ್ನು ಸುತ್ತುವರಿಯಬಾರದು. ಜನತೆಯ ಕೇಂದ್ರಿತವಾದುದೇ ನಿಜವಾದ ಅಭಿವೃದ್ಧಿ. 'ಜನತೆ' ಎಂಬುದು ಹೆಣ್ಣು-ಗಂಡು ಇಬ್ಬರನ್ನು ಒಳಗೊಂಡಿರುತ್ತದೆ. ಹೀಗಾಗಿ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಜನತೆಯನ್ನು ಕೇವಲ ಉಪಕರಣದ ದೃಷ್ಟಿಯಲ್ಲಿ ವೀಕ್ಷಿಸದೆ ಜನತೆಯೇ ಅಭಿವೃದ್ಧಿಯ ಮೂಲ ಮತ್ತು ಕೊನೆ ಎಂಬ ತತ್ವವನ್ನು ಪ್ರತಿಪಾದಿಸಿದೆ. ಈ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಮರೆ ಮಾಚಿದ ಮಹಿಳೆಯರು, ಮಹಿಳೆಯರ ಕಾರ್ಯಭಾರ, ರಾಷ್ಟ್ರೀಯ ವರಮಾನಕ್ಕೆ ಮಹಿಳೆಯರ ಕೊಡುಗೆಗಳು ಈ ವಿಚಾರ ಪ್ರಣಾಳಿಕೆಯಲ್ಲಿ ಹೊಸ ಜೀವ ಪಡೆಯಬೇಕಾಗುತ್ತದೆ. ಆದರೆ ಕೇಂದ್ರ ಸರಕಾರದ ಅಭಿವೃದ್ಧಿ ಯೋಜನೆಗಳಲ್ಲಿ ಲಿಂಗ ಅಸಮಾನತೆಗಳು ಮತ್ತು ಪ್ರಾದೇಶಿಕ ಅಸಮಾನತೆಗಳು ಈ ಯೋಜನೆಗಳ ಮುಳುವಿಗೆ ಕಾರಣವಾಗಿವೆ. ಹಾಗೂ ಇಂದು ಎಲ್ಲಾ ಸ್ವಾರ್ಥ ಪ್ರಪಂಚದಲ್ಲಿ ಅಭಿವೃದ್ಧಿಯು ಸಾಧ್ಯವಿಲ್ಲ. ಕೇಂದ್ರ ಸರಕಾರದ ಯೋಜನೆಗಳು ಮುಖ್ಯವಾಗಿ ಗ್ರಾಮೀಣ ಪ್ರದೇಶಗಳನ್ನು ಮತ್ತು ಅಲ್ಲಿನ ಜನರನ್ನು ಗುರಿಯಾಗಿಟ್ಟುಕೊಂಡು ರೂಪಿತವಾಗಿವೆ. ಆದರೆ ಇವುಗಳು ಯಾವುವು ಗ್ರಾಮೀಣ ಪ್ರದೇಶಗಳಿಗೆ ಸಮರ್ಪಕವಾಗಿ ತಲುಪುತಿಲ್ಲ ಹಾಗಾಗಿ ಯೋಜನೆಗಳು ವಿಫಲತೆಯನ್ನು ಅನುಭವಿಸುತ್ತಿವೆ.

ಅಭಿವೃದ್ಧಿ ಯೋಜನೆಗಳು ಮಹಿಳೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿರುವುದನ್ನು ಕಾಣಬಹುದು. "ಮಹಿಳೆಯರ ಅಭಿವೃದ್ಧಿ ಎನ್ನುವುದು ಭಾರತದಲ್ಲಿನ ಅಭಿವೃದ್ಧಿ ಕಾರ್ಯಕ್ರಮ ಯೋಜನೆಗಳಲ್ಲಿ ಅನುಷಂಗಿಕ ಸಂಗತಿಯಾಗಿದೆಯೇ ವಿನಃ, ಅದು ಆದ್ಯತೆಯ ಸಂಗತಿಯಾಗಿಲ್ಲ ಎಂಬುದನ್ನು ಅನೇಕ ಅಧ್ಯಯನಗಳು ಗುರುತಿಸಿವೆ"(ಮಹಿಳೆ : ಆರ್ಥಿಕತೆ ಮತ್ತು ಅಭಿವೃದ್ಧಿ; ಚಂದ್ರಶೇಖರ್ ಟಿ.ಆರ್ ., ಪು.೧೮೨). ಇಂದು ಅಭಿವೃದ್ಧಿ ಯೋಜನೆಗಳು ಮಹಿಳೆಯರನ್ನು ಕೇವಲ ಜನಸಂಖ್ಯಾ ಘಟಕವಾಗಿ ಸಂತಾನೋತ್ಪತ್ತಿಯ ಸಾಧನವಾಗಿ ಮತ್ತು ಜೈವಿಕ ಸಂಗತಿಯಾಗಿ ಪರಿಭಾವಿಸಿಕೊಂಡಿವೆ. ಮಹಿಳೆಯರನ್ನು

ಸಾಮಾಜಿಕ ಸಂಗತಿಯಾಗಿ, ಅಭಿವೃದ್ಧಿಯ ನಿಯೋಗಿಗಳಾಗಿ, ದುಡಿಮೆಯ ಶಕ್ತಿಯಾಗಿ ಗುರುತಿಸಲು ಅಭಿವೃದ್ಧಿ ಯೋಜನೆಗಳು ಸಿದ್ಧವಿಲ್ಲ. ಹಾಗಾಗಿ ಯೋಜನೆಗಳಲ್ಲಿ ಲಿಂಗ ಅಸಮಾನತೆಯ ಅಂಶಗಳು ಕಂಡುಬರುತ್ತವೆ. ವಾಸ್ತವದಲ್ಲಿ ಅಭಿವೃದ್ಧಿ ಎನ್ನುವುದು ಮಹಿಳೆಯರಿಗೆ ಒಂದು ಶಾಪವಾಗಿ ಪರಿಣಮಿಸಿದೆ. ಏಕೆಂದರೆ ಮಹಿಳೆಯರು ಅಭಿವೃದ್ಧಿಯ ಫಲಾನುಭವಿಗಳು, ಅವರು ಪರಾವಲಂಬಿಗಳು, ಮತ್ತು ಅನುಭೋಗಿಗಳು, ಅವರಿಗೆ ತಮ್ಮದೇ ಆದ ಹಿತಾಸಕ್ತಿಗಳು ಇರದೆ ಅವರ ಬದುಕು ಕುಟುಂಬದ ಚೌಕಟ್ಟಿಗೆ ಮೀಸಲು, ಅವರ ದುಡಿಮೆಯು ಕೇವಲ ಗೃಹವಾರ್ತೆಗೆ ಮಾತ್ರ ಸೀಮಿತವಾದುದು ಎಂಬಂತಹ ಹಲವಾರು ಪೂರ್ವಗ್ರಹ ಪೀಡಿತ ನಂಬಿಕೆಗಳು ಸಮಾಜದಲ್ಲಿ ಮನೆ ಮಾಡಿಕೊಂಡಿವೆ. ಹಾಗಾಗಿ ಅಭಿವೃದ್ಧಿ ಯೋಜನೆಗಳಲ್ಲಿ ಮಹಿಳೆಯರನ್ನು ಪರಿಗಣಿಸದೆ ಇರುವುದು ಕಂಡುಬರುತ್ತದೆ. ಈ ಅಭಿವೃದ್ಧಿ ಯೋಜನೆಗಳನ್ನು ರೂಪಿಸುತ್ತಿರುವ ಯೋಜನಾ ತಜ್ಞರು ಪುರುಷಶಾಹಿ ವ್ಯವಸ್ಥೆಯಿಂದ ಬಂದಿರುವುದರಿಂದ ಅವರೂ ಕೂಡ ಆ ವ್ಯವಸ್ಥೆಯ ನಿಯಮಗಳಿಗೆ ಅನುಗುಣವಾಗಿ ಯೋಜನೆಗಳನ್ನು ರೂಪಿಸುತ್ತಿದ್ದಾರೆ. ಮತ್ತು ಅವರಿಗೆ ಮಹಿಳೆಯರ ಸಮಸ್ಯೆಗಳೇನು ಎಂಬುದು ತಿಳಿದಿರುವುದಿಲ್ಲ. ತಿಳಿದಿದ್ದರೂ ಕೂಡ ಮಹಿಳೆಯನ್ನು ಉದಾರವಾದಿ ನೆಲೆಯಲ್ಲಿಯೇ ನೋಡುತ್ತಿದ್ದಾರೆ. ವಾಸ್ತವವಾಗಿ ರೋಗದ ಕಾರಣವನ್ನು ತಿಳಿಯದೆ ರೋಗ ನಿಧಾನವನ್ನು ರೂಪಿಸಲು ಸಾಧ್ಯವಿಲ್ಲ. ಹಾಗಾಗಿ ಯೋಜನೆಯನ್ನು ರೂಪಿಸುವವರು ಮಹಿಳೆಯರ ಅಧೀನ ಸ್ಥಿತಿಗೆ, ಲಿಂಗ ಸಂಬಂಧಿ ಅಸಮಾನತೆಗೆ ಕಾರಣರಾಗುತ್ತಾರೆ.

ಇನ್ನು ಅಭಿವೃದ್ಧಿ ಯೋಜನೆಗಳೂ ಎಲ್ಲಿ ವಿಫಲತೆಯನ್ನು ಅನುಭವಿಸುತ್ತಿವೆ ಎಂದರೆ ಅವುಗಳ ಕಾರ್ಯಾನುಷ್ಠಾನದಲ್ಲಿ. ಏಕೆಂದರೆ ಯೋಜನೆಗಳು ಬಂದಿದ್ದಾಗಲೂ ಸಹ ಅವುಗಳನ್ನು ಕಾರ್ಯರೂಪಕ್ಕೆ ತರುವುದರಲ್ಲಿ ವಿಳಂಬ ಮಾಡಲಾಗುತ್ತದೆ. ಹಾಗೆಯೇ ಇಂದಿನ ಸ್ವಾರ್ಥ ಯುಗದಲ್ಲಿ ಎಲ್ಲವೂ ಸ್ವಾರ್ಥಿಗಳ ಪಾಲಾಗುತ್ತಿವೆ. ಏಕೆಂದರೆ ಸರಕಾರಿ ಅಧಿಕಾರಿಗಳು ಸ್ವಾರ್ಥ ರಾಜಕಾರಣಿಗಳು ಯೋಜನೆಗಳು ಬರುವುದನ್ನೇ ಕಾಯುತ್ತಿರುತ್ತಾರೆ. ಬಂದ ಕೂಡಲೇ ಆ ಯೋಜನೆಗಳನ್ನು ನುಂಗಿ ಹಾಕುವಂತಹ ಕೆಲಸದಲ್ಲಿ ತೊಡಗುತ್ತಾರೆ. ಇದು ಇಂದಿನ ವಾಸ್ತವ ಸತ್ಯ. ಹಾಗೂ ಯೋಜನೆಗಳನ್ನು ಕಾರ್ಯರೂಪಕ್ಕೆ ತಂದಿದ್ದರೂ ಸಹ ಅವುಗಳು ಯಾವುವು ಪೂರ್ಣ ರೂಪದಲ್ಲಿ ನಡೆದಿಲ್ಲ. ಕೆಲಸಗಳನ್ನು ಅರ್ಧಕ್ಕೆ ನಿಲ್ಲಿಸಿರುವಂತಹ ಹಲವಾರು ಉದಾಹರಣೆಗಳನ್ನು ನೋಡಬಹುದು. ಹಾಗೆಯೇ ಕೆಲವೊಂದು ಸಂದರ್ಭದಲ್ಲಿ ಯೋಜನೆಯು ತ್ವರಿತಗತಿಯಲ್ಲಿ ಮುಗಿಯಬೇಕು. ಬೇಗ ಬೇಗ ಬಿಲ್ ಗಳನ್ನು ಪಡೆಯಬೇಕು ಎನ್ನುವಂತಹ ಮನೋಭಾವನೆಯಿಂದ ಯಂತ್ರಗಳನ್ನು ಕಾಮಗಾರಿಗಳಲ್ಲಿ ಬಳಸುವುದು ಅಥವಾ ಕಾಮಗಾರಿಗಳು ಪೂರ್ಣಗೊಳ್ಳದೇ ಇದ್ದರೂ ಪೂರ್ಣಗೊಂಡಿವೆ ಎಂದು ವರದಿಯನ್ನು ಸಲ್ಲಿಸುವಂತಹ ಕಾರ್ಯಗಳೂ ನಡೆದಿವೆ. ಹಾಗಾಗಿ ಈ ತರಹದ ಸ್ವಾರ್ಥಿಗಳಿಂದ ಅಭಿವೃದ್ಧಿಯಾಗುವುದು ಸಾಧ್ಯವೇ? ಇಲ್ಲ. ಹಾಗೂ ಗ್ರಾಮೀಣ ಭಾಗದಲ್ಲಿನ ಜನರು ಬಹಳಷ್ಟು ಅನಕ್ಷರಸ್ಥರಿರುತ್ತಾರೆ. ಹಾಗಾಗಿ ಅವರನ್ನು

ವಂಚಿಸುವ ಕೆಲಸ ಮಾಡಲಾಗುತ್ತಿದೆ. ಹಾಗೂ ಅಭಿವೃದ್ಧಿ ಯೋಜನೆಗಳು ಗ್ರಾಮೀಣ ಭಾಗದಲ್ಲಿ ಉಳ್ಳವರ ಸ್ವತ್ತಾಗಿರುವುದನ್ನು ನಾವು ಕಾಣಬಹುದಾಗಿದೆ. ಇಷ್ಟೆಲ್ಲಾ ದೋಷಗಳಿದ್ದು ಯೋಜನೆಗಳು ಸಫಲತೆಯನ್ನು ಪಡೆಯಬೇಕೆಂದರೆ ಸಾಧ್ಯವಿಲ್ಲ. ಇವುಗಳೆಲ್ಲವನ್ನು ಕೂಡ ಸರಕಾರ ಗಂಭೀರವಾಗಿ ಚಿಂತನೆಯನ್ನು ನಡೆಸಬೇಕು. ಮತ್ತು ಈ ಯೋಜನೆಯಲ್ಲಿನ ಲಿಂಗ ಅಸಮಾನತೆಯನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಕೆಲಸಗಳನ್ನು ಕೈಗೊಳ್ಳಬೇಕು. ಏಕೆಂದರೆ ಅಭಿವೃದ್ಧಿಯು ಕೇವಲ ಪುರುಷನಿಂದ ಸಾಧ್ಯವಿಲ್ಲ. ಮಹಿಳೆಯರೂ ಕೂಡ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಪಾಲ್ಗೊಂಡಾಗ ಮಾತ್ರ ಸಂಪೂರ್ಣವಾಗಿ ದೇಶ ಅಭಿವೃದ್ಧಿ ಹೊಂದುತ್ತದೆ. ಇಲ್ಲವಾದರೆ ಅಭಿವೃದ್ಧಿ ಹೊಂದುತ್ತಲೇ ಇರುತ್ತದೆ.

ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳು ಮಹಿಳೆಯರಿಗಾಗಿಯೇ ಅಥವಾ ಮಹಿಳೆಯರ ಅಭಿವೃದ್ಧಿಗಾಗಿಯೇ ಪ್ರತ್ಯೇಕವಾದಂತಹ ಯೋಜನೆಗಳನ್ನು ಜಾರಿಗೆ ತಂದಿರುವುದನ್ನು ಈ ಹಿಂದೆ ನೋಡಲಾಗಿದೆ. ಇಲ್ಲಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಯೋಜನೆಗಳನ್ನು ಜಾರಿಗೆ ತಂದಿವೆ ನಿಜ, ಆದರೆ ಈ ಯೋಜನೆಗಳು ಯಾರಿಗೆ, ಎಷ್ಟು ಪ್ರಮಾಣದಲ್ಲಿ ಉಪಯೋಗವಾಗಿವೆ? ಕೆಲವು ಯೋಜನೆಗಳು ಇಂದಿಗೂ ಜಾರಿಯಲ್ಲಿ ಇವೆ. ಇದ್ದಾಗಲೂ ಸಹ ಎಷ್ಟು ಜನ ಈ ಯೋಜನೆಗಳಿಂದ ಉಪಯೋಗವನ್ನು ಪಡೆದುಕೊಂಡು ಸಬಲೀಕರಣವನ್ನು ಹೊಂದಿದ್ದಾರೆ? ಎಂಬುದನ್ನು ಪರಿಶೀಲಿಸಿದಾಗ ಪ್ರತಿಫಲವನ್ನು ನಿಖರವಾಗಿ ಹೇಳಲು ಸಾಧ್ಯವಾಗುತ್ತಿಲ್ಲ. ಏಕೆಂದರೆ ಈ ಯೋಜನೆಗಳು ಯಾವುವೂ ಗ್ರಾಮೀಣ ಭಾಗದ ಮಹಿಳೆಯರಿಗೆ ಸಂಪೂರ್ಣವಾಗಿ ತಲುಪಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಮೇಲ್ವರ್ಗದ ಮಹಿಳೆಯರು ಸ್ವಲ್ಪ ಪ್ರಮಾಣದಲ್ಲಿ ಅಭಿವೃದ್ಧಿಯನ್ನು ಹೊಂದಿರುತ್ತಾರೆ. ಆದರೆ ಇವರು ಅಭಿವೃದ್ಧಿ ಹೊಂದಿದ್ದಾರೆ ಎಂದರೆ ಸಬಲರಾಗಿರುತ್ತಾರೆ ಎಂದರ್ಥವಲ್ಲ. ಅವರು ಪುರುಷನ ಆಳ್ವಿಕೆಯಲ್ಲಿಯೇ ಅವಳು ಗುಲಾಮಳಾಗಿರುತ್ತಾಳೆ. ಇನ್ನು ಕೆಳವರ್ಗದ ಬಡ ಮಹಿಳೆಯರು ಸರಕಾರದ ಅಭಿವೃದ್ಧಿ ಯೋಜನೆಗಳಿಂದ ಸಂಪೂರ್ಣವಾಗಿ ವಂಚಿತರಾಗಿರುತ್ತಾರೆ. ಏಕೆಂದರೆ ಮೊದಲನೆಯದಾಗಿ ಅವರು ಸಮಾಜದಲ್ಲಿ ತಲೆ ಎತ್ತಿಕೊಂಡು ಜೀವನ ನಡೆಸುವುದೂ ಕಷ್ಟವಾಗಿರುತ್ತದೆ. ಮತ್ತು ಅವರು ಸಂಪೂರ್ಣವಾಗಿ ಅಶಿಕ್ಷಿತರಾಗಿರುತ್ತಾರೆ. ಅಂತಹ ಸಮಯದಲ್ಲಿ ಯೋಜನೆಗಳ ಬಗ್ಗೆ ಮಾಹಿತಿಯೇ ದೊರೆಯುವುದಿಲ್ಲ ಮತ್ತು ಅವುಗಳ ಬಗ್ಗೆ ಪ್ರಶ್ನೆಯನ್ನು ಮಾಡುವುದಂತೂ ತುಂಬ ಕಠಿಣವಾಗಿರುತ್ತದೆ. ರಾಜ್ಯ ಸರಕಾರದ ಯೋಜನೆಗಳು ಇಂದು ಗ್ರಾಮೀಣ ಭಾಗದಲ್ಲಿ ತಮ್ಮ ಪ್ರಭಾವವನ್ನು ಬೀರಿ ಅತ್ಯಂತ ಪರಿಣಾಮಕಾರಿಯಾಗಿ ಜಾರಿಯಲ್ಲಿವೆ. ಅದರಲ್ಲಿ ಪ್ರಮುಖವಾಗಿ ಸ್ತ್ರೀ ಶಕ್ತಿ ಯೋಜನೆಯು ರಾಜ್ಯದ ಪ್ರತಿಯೊಂದು ಹಳ್ಳಿಗಳಲ್ಲಿಯೂ ಕೂಡ ಮಹಿಳೆಯರನ್ನು ಒಂದುಗೂಡಿಸುವಂತಹ ಕೆಲಸವನ್ನು ಮಾಡುತ್ತಿದೆ. ಈ ಯೋಜನೆಯಿಂದ ಮಹಿಳೆ ಕುಟುಂಬದಿಂದ ಹೊರ ಬಂದು ಲೋಕಜ್ಞಾನವನ್ನು ಪಡೆಯುವಂತವಳಾಗಿದ್ದಾಳೆ. ಹಾಗೆಯೇ "ನಮ್ಮ ಮಗಳು ನಮ್ಮ ಶಕ್ತಿ ಯೋಜನೆ" ಎಂಬ ಯೋಜನೆಯು ಸಮರ್ಪಕ ರೀತಿಯಲ್ಲಿ

ಮಹಿಳೆಯರಿಗೆ ತಲುಪುತ್ತಿಲ್ಲ. ಏಕೆಂದರೆ ನಾಡಿನಲ್ಲಿ ಲಿಂಗ ಅಸಮಾನತೆಯನ್ನು ನಿವಾರಿಸುವುದಗ ಸಲುವಾಗಿ ಭ್ರೂಣ ಹತ್ಯೆ ಮಾಡುವುದನ್ನು ತಡೆಯುವುದರ ಸಲುವಾಗಿ ಈ ಯೋಜನೆಯನ್ನು ಜಾರಿಗೆ ತಂದಿತು. ಆದರೆ ಇದು ಸಮರ್ಪಕವಾಗಿ ಜಾರಿಗೆ ಬರದೆ ಮೂಲೆಗುಂಪಾಗಿ ಹೋಯಿತು. ಈ ಯೋಜನೆಯ ಫಲವನ್ನು ಕೆಲವೇ ಕೆಲವು ಉನ್ನತ ವರ್ಗದ ಮಹಿಳೆಯರು ಪಡೆದುಕೊಂಡರು. ಆದರೆ ಕೆಳ ಮತ್ತು ಮಧ್ಯಮವರ್ಗದವರು ಈ ಯೋಜನೆಯ ಉಪಯೋಗವನ್ನು ಪಡೆಯಲಾಗಲಿಲ್ಲ. ಹಾಗೆಯೇ ವಿಧವೆಯರು ಮತ್ತು ದೇವದಾಸಿಯರು ಸಮಾಜದಿಂದ ನಿರ್ಲಕ್ಷ್ಯಕ್ಕೆ ಒಳಗಾದ ಸಮುದಾಯಗಳು. ಇವರು ಸಮಾಜದಲ್ಲಿ ಒಳ್ಳೆಯ ಸ್ಥಾನವನ್ನು ಪಡೆಯಬೇಕು ಅದಕ್ಕೆ ಅವರು ಪುನರ್ ವಿವಾಹವಾಗಬೇಕು ಎಂಬ ಉದ್ದೇಶದಿಂದ "ವಿಧವೆಯರು ಮತ್ತು ದೇವದಾಸಿಯರ ಪುನರ್ ವಿವಾಹ ಯೋಜನೆ"ಯನ್ನು ಜಾರಿಗೆ ತಂದಿತು. ಆದರೆ ಈ ಯೋಜನೆಯಿಂದ ಎಷ್ಟು ಜನ ವಿಧವೆಯರು ಮತ್ತು ದೇವದಾಸಿಯರು ವಿವಾಹವಾದರು ಎಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಪಿತೃ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಇವರು ಸಮಾಜದಿಂದ ದೋಷಣೆಗೆ ಒಳಪಟ್ಟವರು. ಎಂಬುದು ಜನರಲ್ಲಿ ಗಟ್ಟಿಯಾಗಿ ನೆಲೆಯೂರಿರುವುದರಿಂದ ಈ ಯೋಜನೆಯು ಸಾಫಲ್ಯತೆಯನ್ನು ಪಡೆಯುವಲ್ಲಿ ವಿಫಲವಾಯಿತು. ಹೀಗೆ ರಾಜ್ಯಸರಕಾರದ ಯೋಜನೆಗಳು ಕೆಲವು ಸಫಲತೆಯನ್ನು ಕಂಡರೂ ಬಹಳಷ್ಟು ಯೋಜನೆಗಳು ವಿಫಲವಾಗಿರುವುದು ತಿಳಿದುಬರುತ್ತದೆ.

ಅಭಿವೃದ್ಧಿ ಯೋಜನೆಗಳು ಲಿಂಗ ನಿರಪೇಕ್ಷವಾಗಿವೆ ಎಂದು ಹೇಳಲಾಗುತ್ತದೆ. ಆದರೆ ವಾಸ್ತವವಾಗಿ ಅವು ಮಹಿಳೆಯರಿಗೆ ಅಭಿಪಾಶವಾಗಿ ಪರಿಣಮಿಸಿವೆ. ಮಹಿಳೆಯರ ಅಭಿವೃದ್ಧಿಗಾಗಿ ಪಂಚವಾರ್ಷಿಕ ಯೋಜನೆಗಳಲ್ಲಿ ಮತ್ತು ಇತರೆ ಯೋಜನೆಗಳಲ್ಲಿ ಮಧ್ಯಮ ವರ್ಗದ ಮಹಿಳೆಯರ ಹಿತಾಸಕ್ತಿಗಳು ಪ್ರೇರಕ ಶಕ್ತಿಗಳಾಗಿರುವುದು ಕಂಡುಬರುತ್ತದೆ. ಈ ಕಾರಣದಿಂದಾಗಿ ಮಹಿಳೆಯರನ್ನು ಕೇವಲ ಗೃಹಿಣಿಯರೆಂದು ಮಾತ್ರ ಪರಿಗಣಿಸಲಾಗುತ್ತದೆ. ಈ ನೆಲೆಯಿಂದ ಅಭಿವೃದ್ಧಿ ಯೋಜನೆಗಳು ರೂಪುಗೊಂಡಿವೆ.

ಒಟ್ಟಿನಲ್ಲಿ "ಅಭಿವೃದ್ಧಿ ಯೋಜನೆಗಳು ಮತ್ತು ಮಹಿಳೆ" ಎಂಬ ಈ ಸಿದ್ಧಾಂತದಲ್ಲಿ ಯೋಜನೆಗಳು ಎಲ್ಲೆಲ್ಲಿ ವಿಫಲತೆಯನ್ನು ಅನುಭವಿಸುತ್ತಿವೆ. ಮತ್ತು ಈ ಯೋಜನೆಗಳಲ್ಲಿ ಮಹಿಳೆಯರಿಗೆ ಎಷ್ಟು ಪ್ರಾಮುಖ್ಯತೆಯನ್ನು ನೀಡಲಾಗಿದೆ ಎಂಬುದನ್ನು ತಿಳಿದುಕೊಳ್ಳಲಾಗಿದೆ. ಅದೇ ರೀತಿಯಲ್ಲಿ ಗ್ರಾಮೀಣದಲ್ಲಿ ವಾಸಿಸುವ ಜನರು ಶಿಕ್ಷಣವನ್ನು ಪಡೆಯುವುದರ ಮೂಲಕ ಯಾವುದೇ ಯೋಜನೆಗಳು ಜಾರಿಗೆ ಬಂದರೂ ಸಹ ಆ ಯೋಜನೆಗಳ ಬಗ್ಗೆ ತಿಳಿದು ಅವುಗಳನ್ನು ಪ್ರಶ್ನಿಸುವಂತಹ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ಅಂದಾಗ ಮಾತ್ರ ಯೋಜನೆಗಳು ಗ್ರಾಮಗಳಲ್ಲಿ ಸರಿಯಾದ ರೀತಿಯಲ್ಲಿ ಅನುಷ್ಠಾನಕ್ಕೆ ಬಂದು ಗ್ರಾಮದ ಮತ್ತು ಅಲ್ಲಿನ ಜನರೂ ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತದೆ. ಮತ್ತು ಮಹಿಳೆಯರ ಅಭಿವೃದ್ಧಿಯನ್ನು ಉದ್ದೇಶವನ್ನಾಗಿ ಮಾಡಿಕೊಂಡು ಅಭಿವೃದ್ಧಿ ಯೋಜನೆಗಳಲ್ಲಿನ

ಪುರುಷಶಾಹಿ ಧೋರಣೆಯನ್ನು ನಿರ್ಮೂಲನ ಮಾಡುವ ದಿಶೆಯಲ್ಲಿ ಕಾರ್ಯೋನ್ಮುಖವಾಗಬೇಕು. ಪರಂಪರಾಗತವಾಗಿ ಹರಿದುಕೊಂಡು ಬಂದಿರುವ ಪುರುಷಶಾಹಿ ಆಳ್ವಿಕೆಯನ್ನು ಕೊನೆಗೊಳಿಸುವ ದಿಶೆಯಲ್ಲಿ ಕೆಲಸ ಮಾಡಬೇಕು. ಮಧ್ಯಮ ವರ್ಗದವರ ಮಹಿಳೆಯರ ಬದುಕಿಗೆ ನೇರವಾಗಿ ಸಂಬಂಧ ಹೊಂದಿರುವ ಲಿಂಗ ಅಸಮಾನತೆಯನ್ನು ಎದುರಿಸಬೇಕು ಅಂದಾಗ ಮಾತ್ರ ಮಹಿಳಾ ಸಬಲೀಕರಣ ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಮಹಿಳೆಯರು ತಮ್ಮ ಮನಸ್ಸುಗಳನ್ನು ತಯಾರಿ ನಡೆಸುವ ಕಾರ್ಯದಲ್ಲಿ ತೊಡಗಬೇಕು. ಹಾಗೂ ಪಿತೃಪ್ರಧಾನ ಮೌಲ್ಯಗಳಿಗೇ ಅಂಟಿಕೊಂಡಿರುವ ಪುರುಷರನ್ನು ಮತ್ತು ಅವರನ ಮನಸ್ಸುಗಳನ್ನು ಬದಲಾಯಿಸುವ ನಿಟ್ಟಿನಲ್ಲಿ ಮಹಿಳೆಯರು ಕಾರ್ಯೋನ್ಮುಕರಾಗಬೇಕು. ಅಂದಾಗ ಮಾತ್ರ ಅಭಿವೃದ್ಧಿ ಯೋಜನೆಗಳು ಸರಿಯಾಗಿ, ಸಮರ್ಪಕವಾಗಿ ಜಾರಿಯಲ್ಲಿ ಬಂದು ಗ್ರಾಮಗಳು ಮತ್ತು ಗ್ರಾಮದ ಜನರು ಅಭಿವೃದ್ಧಿಯ ಪಥದತ್ತ ಸಾಗುತ್ತಾರೆ.

ಅಧ್ಯಾಯ ೫

# ಉದ್ಯೋಗ ಖಾತರಿ ಯೋಜನೆ ಮತ್ತು ಮಹಿಳೆ

೫.೧. ಉದ್ಯೋಗ ಖಾತರಿ ಯೋಜನೆಯ ಚಾರಿತ್ರಿಕ ಹಿನ್ನೆಲೆ

೫.೨. ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಕಾಯಿದೆ ೨೦೦೬

೫.೩. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿ ಕಾಮಗಾರಿಗಳ ಆಯ್ಕೆ ಮತ್ತು ಅನುಷ್ಠಾನ.

೫.೪. ಜನಾಯೋಜನೆಯ ಮೂಲಕ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯಿದೆ ೨೦೦೫

೫.೫. ಮಾಹಿತಿ ಹಕ್ಕು ಕಾಯಿದೆ ಮತ್ತು ರಾಷ್ಟ್ರೀಯ ಉದ್ಯೋಗ ಖಾತರಿ ಕಾಯಿದೆ ೨೦೦೬

೫.೬. ಉದ್ಯೋಗ ಖಾತರಿ ಯೋಜನೆ : ಮಹಿಳೆ

೫

# ಉದ್ಯೋಗ ಖಾತರಿ ಯೋಜನೆ ಮತ್ತು ಮಹಿಳೆ

ದೇಶದಿಂದ ಬ್ರಿಟೀಷರನ್ನು ಹೊಡೆದೋಡಿಸಿದಾಗ ನಿಜವಾದ ಸ್ವಾತಂತ್ರ್ಯ ದೊರೆತಂತೆ ಆಗಲಿಲ್ಲ. ಗಾಂಧೀಜಿಯವರು ಹೇಳಿದ ಹಾಗೆ ಈ ದೇಶದ ಕಡು ಬಡವರು ಹಸಿವಿನ ಯಾತನೆ ನರಳುವಿಕೆಯಿಂದ ಮುಕ್ತರಾದಾಗ ಮಾತ್ರ ನಾವು ನಿಜವಾದ ಸ್ವಾತಂತ್ರ್ಯವನ್ನು ಪಡೆದಿದ್ದೇವೆ ಎಂದು ಹೇಳಬಹುದು. ಇದನ್ನು ಸಾಧಿಸಬೇಕಿದ್ದರೆ, ನಿರುದ್ಯೋಗದ ಪ್ರಮಾಣವನ್ನು ಕಡಿಮೆ ಮಾಡಬೇಕು. ಅಂದರೆ ದುಡಿಯಲು ಶಕ್ತಿ ಇರುವ ವಯೋಮಿತಿಯ ಜನರಿಗೆ ದುಡಿದು ಸಂಪಾದಿಸಲು ಅವಕಾಶಗಳನ್ನು ಕಲ್ಪಿಸಿ ಕೊಡಬೇಕು. ಈ ನಿಟ್ಟಿನಲ್ಲಿ ಗ್ರಾಮೀಣ ಜನ ಜೀವನ ಮಟ್ಟ ಸುಧಾರಿಸುವುದರ ಸಲುವಾಗಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯನ್ನು ಜಾರಿಗೆ ತಂದಿತು.

## ೫.೧. ಉದ್ಯೋಗ ಖಾತ್ರಿ ಯೋಜನೆಯ ಚಾರಿತ್ರಿಕ ಹಿನ್ನೆಲೆ

ಗ್ರಾಮೀಣ ಜನಸಂಖ್ಯೆಯ ಬಹುತೇಕ ಭಾಗವು ಬಡತನದಿಂದ ತೊಳಲಾಡುತ್ತಿದ್ದು, ಒಂದು ಕುಟುಂಬದ ವಾರ್ಷಿಕ ಆದಾಯ ರೂ.೧೯.೨೬೧ಗಳಿಗಿಂತ ಕಡಿಮೆ ಇದ್ದರೆ ಅವರನ್ನು ಬಡತನದ ರೇಖೆ ಗಿಂತ ಕೆಳಗೆ ಇರುವವರು. ಎಂದು ಗುರುತಿಸಲಾಗುತ್ತದೆ. ಅಲ್ಲದೆ ಒಬ್ಬ ವ್ಯಕ್ತಿ ಸಾಕಷ್ಟು ಪ್ರಮಾಣದಲ್ಲಿ ಪೌಷ್ಠಿಕ ಆಹಾರವನ್ನು ಪಡೆಯಲು ಸಾಧ್ಯವಾಗದಿದ್ದರೆ ಅಂತಹವರನ್ನೂ ಸಹ ಬಡತನ ರೇಖೆಗಿಂತ ಕೆಳಗೆ ಇರುವವರು ಎಂದು ಪರಿಗಣಿಸಲಾಗುತ್ತದೆ. ಈ ಬಡತನಕ್ಕೆ ಪ್ರಮುಖ ಕಾರಣಗಳೆಂದರೆ ಭೂಮಿಯ ಒಡೆತನ ಇಲ್ಲದಿರುವುದು ಅಥವಾ ಕಡಿಮೆ ಭೂಮಿಯನ್ನು ಹೊಂದಿರುವುದು, ಕಡಿಮೆ ಉತ್ಪಾದನೆ, ಕಡಿಮೆ ಆದಾಯ, ಉದ್ಯೋಗ ಇಲ್ಲದೇ ಇರುವುದು, ಪ್ರಾಚೀನ ಕೃಷಿ ತಂತ್ರಜ್ಞಾನ, ನೀರಾವರಿ ವ್ಯವಸ್ಥೆಯ ಕೊರತೆ, ಕೃಷಿಯಲ್ಲಿಯೇ ಅಧಿಕ ಜನರು ಕೇಂದ್ರೀಕೃತವಾಗಿರುವುದು ಇನ್ನೂ ಮುಂತಾದವುಗಳು ಕಂಡುಬರುತ್ತವೆ. ಇವುಗಳು ಬಡತನಕ್ಕೆ ಕಾರಣವೆಂದು ಒಪ್ಪಿಕೊಂಡರೆ, ಬಡತನ ನಿವಾರಣೆಗೆ ನಾವು ಕಾರ್ಯತಂತ್ರಗಳನ್ನು ರೂಪಿಸಬೇಕಾಗುತ್ತದೆ. ಈ ಕಾರ್ಯತಂತ್ರಗಳು ಯೋಜನೆಗಳ ರೂಪದಲ್ಲಿರಬಹುದು ಅಥವಾ ಕಾಯಿದೆಗಳ ರೂಪದಲ್ಲಿರಬಹುದು. ಈ ನಿಟ್ಟಿನಲ್ಲಿ ಗ್ರಾಮೀಣ ಜನರಿಗೆ ಉದ್ಯೋಗವನ್ನು ದೊರಕಿಸಿ ಅವರ ಜೀವನ ಮಟ್ಟ ಸುಧಾರಿಸುವುದರ ಸಲುವಾಗಿ ಅನೇಕ ಯೋಜನೆಗಳು ಜಾರಿಗೆ ಬಂದಿವೆ. ಅವುಗಳು ಈ ಕೆಳಗಿನಂತಿವೆ.

೧. ಉದ್ಯೋಗ ಭರವಸೆ ಯೋಜನೆ (೧೯೬೧) : ನಿರ್ದಿಷ್ಟ ಪ್ರದೇಶಗಳಲ್ಲಿ ಉದ್ಯೋಗದ ಅಗತ್ಯವಿರುವ ಗ್ರಾಮೀಣ ಕೂಲಿಕಾರರಿಗೆ ವರ್ಷದಲ್ಲಿ ೧೦೦ ದಿನಗಳ ದುಡಿಮೆ ಒದಗಿಸುವುದು.

೨. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ (೧೯೭೭, ೧೯೮೯) : ಸಂಗ್ರಹದಲ್ಲಿರುವ ಹೆಚ್ಚುವರಿ ಆಹಾರಧಾನ್ಯ ಬಳಸಿ, ಗ್ರಾಮೀಣ ಮೂಲಭೂತ ಸೌಕರ್ಯ ಸೃಷ್ಟಿಸಿ, ದುಡಿಯುವ ಕೈಗಳಿಗೆ ಕೆಲಸ ಒದಗಿಸುವುದು.

೩. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ (೧೯೮೩, ೧೯೮೯) : ಭೂರಹಿತ, ಕೃಷಿ ಕಾರ್ಮಿಕರಿಗೆ ಉದ್ಯೋಗ ಒದಗಿಸುವುದು.

೪. ಜವಾಹರ್ ರೋಜ್ಗಾರ್ ಯೋಜನೆ(೧೯೮೯-೯೦ ರಿಂದ ೧೯೯೩-೯೪): ಗ್ರಾಮೀಣ ಪ್ರದೇಶದಲ್ಲಿ ಉದ್ಯೋಗ ಸೃಷ್ಟಿಸುವ ಮೂಲಕ ಗ್ರಾಮಗಳಲ್ಲಿ ಬಡಜನರಿಗೆ ಅನುಕೂಲವಾಗುವ ಆಸ್ತಿ ನಿರ್ಮಾಣ ಈ ಯೋಜನೆಯ ಅನುಷ್ಠಾನದ ಜವಾಬ್ದಾರಿ ಗ್ರಾಮ ಪಂಚಾಯಿತಿಗಳಿಗೆ.

೫. ಉದ್ಯೋಗ ಭರವಸೆ ಯೋಜನೆ (೧೯೯೩-೯೪) : ಕೃಷಿ ಕೂಲಿ ಲಭ್ಯವಾಗದ ಅವಧಿಯಲ್ಲಿ ೧೦೦ ದಿನಗಳ ಕೆಲಸ ಒದಗಿಸುವುದು. ಆ ಮೂಲಕ ಗ್ರಾಮೀಣ ಭಾಗದಲ್ಲಿ ಸಮುದಾಯಕ್ಕೆ ಅನುಕೂಲವಾಗುವ ಆಸ್ತಿ ಸೃಷ್ಟಿಗೆ ಹಾಗೂ ಮೂಲ ಸೌಕರ್ಯ ಒದಗಿಸುವುದಕ್ಕೆ ಆದ್ಯತೆ.

೬. ಜವಾಹರ್ ಗ್ರಾಮ ಸಮೃದ್ಧಿ ಯೋಜನೆ (೧೯೯೯, ೨೦೦೨) : ಸುಸ್ಥಿರ ಉದ್ಯೋಗ ಅವಕಾಶ ಪೂರಕ ಉದ್ಯೋಗಗಳ ಸೃಷ್ಟಿಗೆ ಆದ್ಯತೆ.

೭. ಸಂಪೂರ್ಣ ಗ್ರಾಮೀಣ ರೋಜ್ಗಾರ್ ಯೋಜನೆ (೨೦೦೧) : ಗ್ರಾಮೀಣ ಪ್ರದೇಶದ ಬಡವರಿಗೆ ಹೆಚ್ಚುವರಿ ಉದ್ಯೋಗಾವಕಾಶ ಸೃಷ್ಟಿಸುವುದು ಮತ್ತು ಆ ಮೂಲಕ ಅವರಿಗೆ ಆಹಾರ ಭದ್ರತೆ ಒದಗಿಸುವುದು.

೮. ರಾಷ್ಟ್ರೀಯ ಕೂಲಿಗಾಗಿ ಕಾಳು ಯೋಜನೆ (೨೦೦೪) : ಯೋಜನಾ ಆಯೋಗದಿಂದ ಗುರುತಿಸಲ್ಪಟ್ಟ ದೇಶದ ೧೫೦ ಅತಿ ಹಿಂದುಳಿದ ತಾಲೂಕುಗಳಲ್ಲಿ ಹೆಚ್ಚುವರಿ ಉದ್ಯೋಗ ಸೃಷ್ಟಿಗೆ ಪ್ರಯತ್ನ.

ಈ ರೀತಿಯಲ್ಲಿ ಗ್ರಾಮೀಣ ಪ್ರದೇಶದ ಜನರಿಗೆ ಉದ್ಯೋಗಗಳನ್ನು ಒದಗಿಸುವುದರ ಮೂಲಕ ಬಡತನವನ್ನು ನಿವಾರಿಸುವುದು. ಈ ಯೋಜನೆಗಳ ಪ್ರಮುಖ ಉದ್ದೇಶವಾಗಿತ್ತು. ಆದರೆ ಈ ಯೋಜನೆಗಳು ಯಾವುವೂ ಕೂಡ ಸಫಲತೆಯನ್ನು ಕಾಣಲಿಲ್ಲ. ಇದಕ್ಕೆ ಪ್ರಮುಖ ಕಾರಣಗಳೆಂದರೆ

೧. ಜನ ಸಾಮಾನ್ಯರಲ್ಲಿ ಮಾಹಿತಿ ಕೊರತೆಯಿಂದ ಪಾಲ್ಗೊಳ್ಳುವಿಕೆಯ ಕೊರತೆ.

೨. ಕಳಪೆ ಗುಣಮಟ್ಟದ ಆಸ್ತಿಗಳ ನಿರ್ಮಾಣ.

೩. ಉದ್ಯೋಗ ಸೃಷ್ಟಿಗೆ ಆದ್ಯತೆ ನೀಡದೆ ಕಾಮಗಾರಿಗಳಲ್ಲಿ ಯಂತ್ರಗಳ ಬಳಕೆ.

೪. ಮಹಿಳೆ ಹಾಗೂ ಪುರುಷ ಕೂಲಿಕಾರರಿಗೆ ವೇತನ ಅಸಮಾನತೆ ಹಾಗೂ ಕಡಿಮೆ ವೇತನ ಪಾವತಿ.

೫. ದುರ್ಬಲ ಮೇಲ್ವಿಚಾರಣೆ.

೬. ಅನುಷ್ಠಾನ ಸಂಸ್ಥೆಗಳ ಸಾಮರ್ಥ್ಯಾಭಿವೃದ್ಧಿಗೆ ಕ್ರಮ ವಹಿಸದೇ ಇರುವುದು.

೭. ಉತ್ತರ ದಾಹಿತ್ವದ ಕೊರತೆ.

೮. ಪಾರದರ್ಶಕತೆಯ ಕೊರತೆ.

ಇಷ್ಟೆಲ್ಲಾ ದೋಷಗಳನ್ನು ಹೊಂದಿರುವ ಈ ಯೋಜನೆಗಳು ವಿಫಲತೆಯನ್ನು ಅನುಭವಿಸಿದವು. ಮಾತ್ರವಲ್ಲ ಗ್ರಾಮೀಣ ಜನರ ಜೀವನ ಮಟ್ಟ ಸುಧಾರಿಸುವುದರಲ್ಲಿ ಈ ಯೋಜನೆಗಳು ಯಾವುದೇ ಪ್ರಮುಖ ಪಾತ್ರವಹಿಸಲಿಲ್ಲ. ಹಾಗಾಗಿ ಈ ಯೋಜನೆಗಳು ಬೇರೆ ಬೇರೆ ರೀತಿಯ ಯೋಜನೆಗಳು ಹುಟ್ಟಿಕೊಳ್ಳಲು ಕಾರಣವಾದವು. ಹಾಗಾಗಿ ಗ್ರಾಮೀಣ ಭಾಗದ ಜನರು ಉದ್ಯೋಗವನ್ನು ಅರಸಿ ವಲಸೆ ಹೋಗುತ್ತಿರುವುದು ಮತ್ತು ಅವರನ್ನು ಬಡತನವು ತಾಂಡವವಾಡುತ್ತಿರುವುದರಿಂದ ಇವುಗಳನ್ನು ಶಾಶ್ವತವಾಗಿ ಪರಿಹರಿಸಲು ಕೇಂದ್ರಸರಕಾರವು ೭-೯-೨೦೦೫ ರಂದು ಭಾರತದ ರಾಜ್ಯ ಪತ್ರದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಅಧಿನಿಯಮವನ್ನು ಪ್ರಕಟಿಸಿತು. ಪ್ರಾರಂಭದಲ್ಲಿ ೨೦೦ ಜಿಲ್ಲೆಗಳಿಗೆ ಸೀಮಿತಗೊಳಿಸಲಾಯಿತು. ಇದು ೨೦೦೬ರಲ್ಲಿ ಜಾರಿಗೆ ಬಂದು ಕರ್ನಾಟಕದಲ್ಲಿ ಜಾರಿಗೆ ಬಂದಿತು. ೨೦೦೮ರ ಸುಮಾರಿಗೆ ದೇಶದ ಎಲ್ಲಾ ರಾಜ್ಯಗಳಲ್ಲೂ ಜಾರಿಯಲ್ಲಿಗೆ ಬಂದಿತು.

ಒಂದು ಯೋಜನೆ ವಿಫಲತೆಯನ್ನು ಅನುಭವಿಸಿದರೆ ಮತ್ತೊಂದು ಯೋಜನೆ ಜಾರಿಗೆ ಬರುತ್ತದೆ. ಆದರೆ ಆ ಯೋಜನೆಯೂ ಸಹ ವಿಫಲತೆಯನ್ನು ಅನುಭವಿಸಿದರೇ? ಹಾಗಾಗಿ ಯೋಜನೆಗಳು ಕೇವಲ ಯೋಜನೆಗಳಾಗಿರುವುದರಿಂದಲೇ ಇವು ವಿಫಲತೆಯನ್ನು ಅನುಭವಿಸುತ್ತಿವೆ. ಹಾಗೂ ಗ್ರಾಮೀಣ ಪ್ರದೇಶಗಳನ್ನು ಶಾಶ್ವತವಾಗಿ ಸುಧಾರಿಸುವುದು ಸಾಧ್ಯವಿಲ್ಲ. ಹಾಗಾಗಿ ಒಂದು ಯೋಜನೆಯನ್ನು ಒಂದು ಕಾಯಿದೆಯನ್ನಾಗಿ ರೂಪಿಸಿದರೆ ಅದರಿಂದ ಶಾಶ್ವತವಾದ ಸುಧಾರಣೆಗಳು ಸಾಧ್ಯ ಎನ್ನುವ ನಿಟ್ಟಿನಲ್ಲಿ ಈ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯನ್ನು ಜಾರಿಗೆ ತಂದು ಅದನ್ನು ಒಂದು ಕಾಯಿದೆಯನ್ನಾಗಿಸಿತು. ಹಾಗಾಗಿ ಇಂದು ಈ ಯೋಜನೆಗಾಗಿ ಸರಕಾರ ಪ್ರತೀವರ್ಷವೂ ಸಹ ಹಣವನ್ನು ಮೀಸಲಿಡಲಾಗುತ್ತದೆ. ಆದರೆ ಇದೂ ಕೂಡ ವಿಫಲತೆಯನ್ನು ಅನುಭವಿಸುತ್ತಿರುವುದು ಕಂಡುಬರುತ್ತದೆ.

## ೫.೨. ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ-೨೦೦೬

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯಿದೆ ೨೦೦೫ರ ಅನ್ವಯ ಕರ್ನಾಟಕ ರಾಜ್ಯದ ಬೀದರ್, ಗುಲ್ಬರ್ಗ, ರಾಯಚೂರು, ದಾವಣಗೆರೆ ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ಈ ಯೋಜನೆಯನ್ನು ೦೨-೦೨-೨೦೦೬ರಿಂದ ಜಾರಿಗೊಳಿಸಲಾಗಿದೆ.

೧. ಯೋಜನೆಯ ಮುಖ್ಯ ಉದ್ದೇಶ

ಕುಶಲತೆ ಅಗತ್ಯವಿಲ್ಲದ ದೈಹಿಕ ಕೆಲಸವನ್ನು ಸ್ವಇಚ್ಛೆಯಿಂದ ಮಾಡಲು ಬಯಸುವ ಪ್ರತೀ ಗ್ರಾಮೀಣ ಕುಟುಂಬದ ವಯಸ್ಕರಿಗೆ ಒಂದು ಆರ್ಥಿಕ ವರ್ಷದಲ್ಲಿ ೧೦೦ ದಿನಗಳ ಉದ್ಯೋಗವನ್ನು ಒದಗಿಸುವುದು (ಒಂದು ಕುಟುಂಬಕ್ಕೆ ೧೦೦ ದಿನಗಳು) ಈ ರೀತಿಯ ಉದ್ಯೋಗವನ್ನು ಸೃಷ್ಟಿಸುವ ಮೂಲಕ ಗ್ರಾಮೀಣ ಪ್ರದೇಶಗಳ್ಲಲಿ ದೀರ್ಘಕಾಲ ಬಾಳಿಕೆ ಬರುವಂತಹ ಆಸ್ತಿಗಳನ್ನು ನಿರ್ಮಾಣ ಮಾಡುವುದು ಹಾಗೂ ಗ್ರಾಮೀಣ ಬಡತನ ಜೀವನೋಪಾಯ ಸಂಪನ್ಮೂಲ ಆಧಾರಗಳನ್ನು ಬಲಪಡಿಸುವುದು. ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ.

೨. ಯೋಜನೆಯ ಕಾರ್ಯತಂತ್ರ

ಯೋಜನೆಗಳನ್ನು ಗುರುತಿಸಿ ಪ್ರಸ್ತಾವನೆಗಳನ್ನು ತಯಾರಿಸುವ ಪ್ರಕ್ರಿಯೆಯಲ್ಲಿ ವಾರ್ಡ್ ಮತ್ತು ಗ್ರಾಮ ಸಭೆಗಳನ್ನು ತೊಡಗಿಸಿಕೊಳ್ಳುವುದು ಮತ್ತು ಪಂಚಾಯತ್ ರಾಜ್ ಸಂಸ್ಥೆಗಳು ವಿಶೇಷವಾಗಿ ಗ್ರಾಮ ಪಂಚಾಯತಿಗಳ ಮೂಲಕ ಯೋಜನೆಯನ್ನು ಅನುಷ್ಠಾನಗೊಳಿಸುವುದರ ಮೂಲಕ ವ್ಯವಸ್ಥಿತ ನಿಧಿ ನಿರ್ವಹಣೆ ಹಾಗೂ ಜಮಾಬಂದಿಯ ಮೂಲಕ ಯೋಜನೆಯ ಅನುಷ್ಠಾನದಲ್ಲಿ ಪ್ರಾಮಾಣಿಕತೆ, ಉತ್ತರದಾಯಿತ್ವ ಹಾಗೂ ಪಾರದರ್ಶಕತೆಯನ್ನು ಸಾಧಿಸುವುದು.

೩. ಪಂಚಾಯತ್ ರಾಜ್ ಸಂಸ್ಥೆಗಳಿಂದ ಯೋಜನೆಗಳ ಪಟ್ಟಿ ತಯಾರಿಕೆ

- ಪ್ರತಿವರ್ಷ ಜೂನ್ ತಿಂಗಳಿಗೆ ಮೊದಲು ಗ್ರಾಮ ಸಭೆ ಮತ್ತು ವಾರ್ಡ್ ಸಭೆಗಳ ಶಿಫಾರಸ್ಸಿನ ಮೇರೆಗೆ ಗ್ರಾಮ ಪಂಚಾಯಿತಿಯು ಯೋಜನೆಗಳ ಆದ್ಯತಾ ಪಟ್ಟಿಯನ್ನು ತಯಾರಿಸಬೇಕು.
- ತಾಲೂಕು ಪಂಚಾಯಿತಿಯು ಸಾಮಾನ್ಯ ಸ್ಥಾಯೀ ಸಮಿತಿಯ ಶಿಫಾರಸ್ಸಿನ ಮೇರೆಗೆ ಒಂದಕ್ಕಿಂತ ಹೆಚ್ಚು ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ಅನುಷ್ಠಾನಗೊಳಿಸಬಹುದಾದ ಯೋಜನೆಗಳ ಆದ್ಯತಾ ಪಟ್ಟಿಯನ್ನು ತಯಾರಿಸಬೇಕು.
- ಜಿಲ್ಲಾ ಪಂಚಾಯಿತಿಯು ಸಾಮಾನ್ಯ ಸ್ಥಾಯೀ ಸಮಿತಿಯ ಶಿಫಾರಸ್ಸಿನ ಮೇರೆಗೆ ನೀರಾವರಿ, ಪ್ರವಾಹ ನಿಯಂತ್ರಣ ಮತ್ತು ನೀರು ನಿಲ್ಲುವ ಪ್ರದೇಶಗಳಲ್ಲಿ ಚರಂಡಿಗಳ ನಿರ್ಮಾಣವು ಸೇರಿದಂತೆ ರಕ್ಷಣಾ ಕಾಮಗಾರಿಗಳ ಆದ್ಯತಾ ಪಟ್ಟಿಯನ್ನು ತಯಾರಿಸಬೇಕು. ಇದರೊಂದಿಗೆ ಒಂದು ತಾಲೂಕಿಗಿಂತಲೂ ಹೆಚ್ಚಿನ ತಾಲೂಕುಗಳ ವ್ಯಾಪ್ತಿಗೆ ಒಳಪಡುವ ಗ್ರಾಮೀಣ ಪ್ರದೇಶಗಳಲ್ಲಿ ಸಂಪರ್ಕ ರಸ್ತೆಗಳನ್ನು ಒದಗಿಸುವಂತಹ ಯೋಜನೆಗಳ ಆದ್ಯತಾ ಪಟ್ಟಿಯನ್ನು ಸಹ ತಯಾರಿಸಬೇಕು.

## ೪. ಇತರ ಸರ್ಕಾರಿ ಇಲಾಖೆಗಳ ಯೋಜನೆಗಳ ಪಟ್ಟಿ ತಯಾರಿಕೆ

ಪಂಚಾಯತ್ ರಾಜ್ ವ್ಯಾಪ್ತಿಗೆ ಒಳಪಡದಿರುವ ಜಿಲ್ಲೆಯಲ್ಲಿನ ಇತರೆ ಸರ್ಕಾರಿ ಇಲಾಖೆಗಳು (ಉದಾ : ಸಾಮಾಜಿಕ ಅರಣ್ಯ ಹೊರತುಪಡಿಸಿ ಅರಣ್ಯ ಇಲಾಖೆ, ಬೃಹತ್ ನೀರಾವರಿ, ಲೋಕೋಪಯೋಗಿ ಇತ್ಯಾದಿ) ಸಂಬಂಧಪಟ್ಟ ಪಂಚಾಯಿತಿಗಳೊಂದಿಗೆ ಸಮಾಲೋಚಿಸಿ, ಆ ಪಂಚಾಯತ್ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಲು ಯೋಜನೆಗಳನ್ನು ಸಿದ್ಧಪಡಿಸಬೇಕು. ಮತ್ತು ಪಂಚಾಯತ್ ರಾಜ್ ಸಂಸ್ಥೆಗಳಿಗೆ ಅಗತ್ಯವಿರುವ ಆಡಳಿತಾತ್ಮಕ ಹಾಗೂ ತಾಂತ್ರಿಕ ನೆರವನ್ನು ನೀಡಬೇಕು.

## ೫. ಈ ಯೋಜನೆಯ ಫಲಾನುಭವಿಗಳಾಗಲು ಇರಬೇಕಾದ ಅರ್ಹತೆಗಳು

- ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿನ ಸ್ಥಳೀಯರಿಗೆ
- ೧೮ ವರ್ಷ ತುಂಬಿರುವ ವಯಸ್ಕರಿಗೆ
- ಕುಶಲತೆ ಬೇಕಿಲ್ಲದ ದೈಹಿಕ ಕೆಲಸ ಬಯಸುವವರಿಗೆ.
- ಒಂದು ಕುಟುಂಬದ ಒಬ್ಬರಿಗಿಂತಲೂ ಹೆಚ್ಚಿನ ಸದಸ್ಯರಿಗೆ ಕುಟುಂಬಕ್ಕೆ ೧೦೦ ದಿನಗಳ ಮಿತಿಗೊಳಪಟ್ಟು ಉದ್ಯೋಗ ಪಡೆಯಲು ಅವಕಾಶವಿದೆ.

## ೬. ಉದ್ಯೋಗಕ್ಕಾಗಿ ನೋಂದಣಿ ಪ್ರಕ್ರಿಯೆ

ಕುಟುಂಬದ ವಯಸ್ಕ ಸದಸ್ಯರು ನೋಂದಣಿಗಾಗಿ ನಮೂನೆ-೨ಎಯಲ್ಲಿ ಅರ್ಜಿಯನ್ನು ದ್ವಿಪತ್ರಿಯಲ್ಲಿ ಸಲ್ಲಿಸಬೇಕು. ಅರ್ಜಿಯ ಜೊತೆ ಪಾಸ್ ಪೋರ್ಟ್ ಅಳತೆಯ ಮೂರು ಭಾವಚಿತ್ರಗಳು ಹಾಗೂ ವಾಸಸ್ಥಳವನ್ನು ದೃಢೀಕರಿಸುವ ದಾಖಲೆಗಳನ್ನು ಗ್ರಾಮಪಂಚಾಯ್ತಿಗಳಿಗೆ ನೀಡಬೇಕು. ನಂತರ ಸ್ವೀಕರಿಸಿದ ಅರ್ಜಿಗಳನ್ನು ಗ್ರಾಮ ಪಂಚಾಯಿತಿಯ ಉತ್ಪಾದನಾ ಸಮಿತಿ ಅಥವಾ ಸಾಮಾನ್ಯ ಸಭೆಯಲ್ಲಿಟ್ಟು ನೋಂದಾಯಿಸಲು ಕ್ರಮ ಕೈಗೊಳ್ಳಬೇಕು. ಮತ್ತು ಗ್ರಾಮ ಪಂಚಾಯಿತಿಯು ೧೫ ದಿನಗಳೊಳಗೆ ವಿಲೇವಾರಿ ಮಾಡಬೇಕು.

## ೭. ಗ್ರಾಮ ಪಂಚಾಯತಿವತಿಯಿಂದ ಉದ್ಯೋಗ ಕಾರ್ಡ್ ಹಾಗೂ ಪಾಸ್ ಪುಸ್ತಕ ವಿತರಣೆ

ಗ್ರಾಮ ಪಂಚಾಯಿತಿಯು ನೋಂದಾಯಿತ ಕುಟುಂಬಕ್ಕೆ ಸೇರಿದ ಸದಸ್ಯರ ಹೆಸರು, ತಂದೆ ಅಥವಾ ತಾಯಿ, ಪತಿ ಅಥವಾ ಪತ್ನಿ ಹೆಸರು, ಮನೆ ವಿಳಾಸ, ಲಿಂಗ, ಅಂದಾಜು ವಯಸ್ಸು, ಜಾತಿ, ಪ್ರವರ್ಗಗಳಂತಹ ಅಗತ್ಯ ವೈಯಕ್ತಿಕ ವಿವರಗಳನ್ನು ಮತ್ತು ಅವರ ಛಾಯಾಚಿತ್ರಗಳನ್ನು ಒಳಗೊಂಡ ಉದ್ಯೋಗ ಕಾರ್ಡನ್ನು ನಮೂನೆ ೨ ಡಿಯಲ್ಲಿ ನೀಡಬೇಕು. ಹಾಗೂ ನೋಂದಾಯಿಸಿದ ಪ್ರತಿಯೊಬ್ಬ ವ್ಯಕ್ತಿಗೆ ಕಲ್ಪಿಸಲಾದ ಉದ್ಯೋಗದ ವಿವರಗಳನ್ನು ದಾಖಲಿಸುವುದಕ್ಕಾಗಿ ಉದ್ಯೋಗ ಪಾಸ್ ಪುಸ್ತಕವನ್ನು

ನಮೂನೆ ೨ ಎಫ್ ನಲ್ಲಿ ನೀಡಬೇಕು. ನೋಂದಾಯಿಸಿದ ಕುಟುಂಬದ ಯಾವುದೇ ಸದಸ್ಯನು ಕೆಲಸಕ್ಕಾಗಿ ಅರ್ಜಿಯನ್ನು ನಮೂನೆ ೩ ಎ ಯಲ್ಲಿ ನೀಡಬೇಕಾಗುತ್ತದೆ. ಕೆಲಸ ಕೋರಿ ಅರ್ಜಿ ಸಲ್ಲಿಸಿದ ದಿನಾಂಕದಿಂದ ೧೫ ದಿನಗಳೊಳಗಾಗಿ ಅಥವಾ ಕೆಲಸ ಕೇಳಿದ ದಿನಾಂಕದಿಂದ ಯಾವುದು ನಂತರವೋ ಆ ದಿನದಿಂದ ಉದ್ಯೋಗ ನೀಡುವ ಹೊಣೆಗಾರಿಕೆ ಗ್ರಾಮ ಪಂಚಾಯಿತಿಗೆ ಸೇರಿರುತ್ತದೆ.

**ಉದ್ಯೋಗ ನಿರ್ವಹಣೆ**

ಅನುಷ್ಠಾನ ಏಜೆನ್ಸಿಯು ಅರ್ಜಿದಾರನನ್ನು ಉದ್ಯೋಗಕ್ಕೆ ಆಹ್ವಾನಿಸಿ ಪತ್ರ ಕಳುಹಿಸಬೇಕು. ಅರ್ಜಿದಾರನು ಪತ್ರ ತಲುಪಿಸಿದ ೧೫ ದಿನಗಳೊಳಗಾಗಿ ಕೆಲಸಕ್ಕೆ ಹಾಜರಾಗಬೇಕು. ಮತ್ತು ಪೂರ್ವಾನುಮತಿಯಿಲ್ಲದೆ ಗೈರುಹಾಜರಾಗಬಾರದು, ಸತತ ಏಳು ದಿನಗಳ ಅವಧಿಗೆ ಗೈರು ಹಾಜರಾಗಬಾರದು ಹಾಗೂ ಒಂದು ತಿಂಗಳಲ್ಲಿ ಏಳು ದಿನಕ್ಕಿಂತ ಹೆಚ್ಚು ಗೈರು ಹಾಜರಾಗಬಾರದು. ಒಂದು ವೇಳೆ ಗೈರು ಹಾಜರಾದಲ್ಲಿ ಕೆಲಸಕ್ಕೆ ಕುಟುಂಬದ ಬೇರೆ ಸದಸ್ಯರನ್ನು ನಿಯೋಜಿಸಬೇಕು. ಕೆಲಸಗಾರನು ಒಂದು ದಿನಕ್ಕೆ ಏಳು ಗಂಟೆಗಳ ಅವಧಿಯಲ್ಲಿ ನಿರ್ದಿಷ್ಟ ಪ್ರಮಾಣದ ಕೆಲಸ ನಿರ್ವಹಿಸಬೇಕು. ಒಂದು ವಾರದಲ್ಲಿ ಆರು ದಿನ ಕೆಲಸ ಹಾಗೂ ಒಂದು ದಿನ ವಿಶ್ರಾಂತಿಯಿರುತ್ತದೆ. ಒಂದು ಬಾರಿಗೆ ಸತತವಾಗಿ ೧೪ ದಿನಗಳ ಕೆಲಸ ನಿರ್ವಹಿಸಬೇಕಾಗುತ್ತದೆ. ಈ ಉದ್ಯೋಗ ನೀಡಿಕೆಯಲ್ಲಿ ಮಹಿಳೆಯರಿಗೆ ಕನಿಷ್ಟ ೧/೩ ಮೀಸಲಿರಿಸಬೇಕು. ಒಂದು ವೇಳೆ ಪಂಚಾಯತಿ ವ್ಯಾಪ್ತಿಯಲ್ಲಿ ಕೆಲಸ ಮಾಡುವವರ ಕೊರತೆ ಕಂಡುಬಂದಲ್ಲಿ ಪಕ್ಕದ ಗ್ರಾಮ ಪಂಚಾಯಿತಿಗಳಿಂದ ಕರೆಸಿಕೊಳ್ಳಬಹುದಾಗಿದೆ.

**೯. ಕೂಲಿ ಪಾವತಿ**

- ಉದ್ಯೋಗ ಖಾತ್ರಿ ಜಾರಿಗೆ ಬಂದ ಪ್ರಥಮ ವರ್ಷದಲ್ಲಿ ಕನಿಷ್ಟ ದಿನ ಗೂಲಿ ಪುರುಷ ಮತ್ತು ಮಹಿಳೆಯರಿಗೆ ಸಮನಾಗಿ ರೂ.೬೯ ಕೂಲಿಯನ್ನು ನೀಡಲಾಗುತ್ತಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಈ ಕೂಲಿಯು ಒಂದು ಕುಟುಂಬದ ನಿರ್ವಹಣೆಗೆ ಸಾಕಾಗುತ್ತಿಲ್ಲ. ಹಾಗಾಗಿ ೨೦೦೭-೦೮ನೇ ಸಾಲಿನಲ್ಲಿ ಈ ಕೂಲಿಯನ್ನು ೮೨ ರೂ.ಗಳಿಗೆ ಹೆಚ್ಚಿಸಲಾಯಿತು.
- ಮಹಿಳೆಯರು ಹಾಗೂ ಪುರುಷರಿಗೆ ಸಮಾನ ಕೂಲಿ ನೀಡಬೇಕು.
- ಕಾಮಗಾರಿಯ ಸ್ಥಳ ವಾಸಸ್ಥಾನದಿಂದ ಐದು ಕಿ.ಮೀ.ಗಿಂತ ದೂರ ಇದ್ದಲ್ಲಿ ಹೆಚ್ಚುವರಿಯಾಗಿ ಶೇ.೧೦ರಷ್ಟು ದಿನಗೂಲಿ ಪಾವತಿಸಬೇಕು.
- ಪ್ರತಿ ವಾರಾಂತ್ಯ ಕೂಲಿ ಪಾವತಿಸಬೇಕು. ಅನಿವಾರ್ಯವಾದಲ್ಲಿ ೧೫ ದಿನಗಳಿಗೆ ಮೀರದಂತೆ ಕೂಲಿ ಪಾವತಿಸಬೇಕು.

- ಕುಟುಂಬದ ಯಾರೇ ಸದಸ್ಯನು ಗಳಿಸಿದ ಕೂಲಿಯನ್ನು ಅನುಸೂಚಿತ ಬ್ಯಾಂಕು ಅಥವಾ ಅಂಚೆ ಕಛೇರಿ ಅಥವಾ ಸಹಕಾರಿ ಸಂಘ ಅಥವಾ ಸಹಕಾರಿ ಬ್ಯಾಂಕುಗಳಲ್ಲಿ ಆ ಕುಟುಂಬದ ಜಂಟಿ ಖಾತೆಗೆ ಜಮಾ ಮಾಡಬೇಕು.

## ೧೦. ನಿಧಿ ನಿರ್ವಹಣೆ

- ನಿಧಿ ನಿರ್ವಹಣೆಯ ವಿವರ ಈ ಕೆಳಕಂಡಂತಿದೆ.

| ಕ್ರ.ಸಂ. | ವಿವರಣೆ | ಭಾರತ ಸರ್ಕಾರ | ಕರ್ನಾಟಕ ಸರ್ಕಾರ |
|---|---|---|---|
| ೧. | ಅಕುಶಲ ಕೆಲಸದ ವೆಚ್ಚ | ಪೂರ್ತ | - |
| ೨. | ಸಾಮಗ್ರಿ/ ಕುಶಲ/ ಅರೆ ಕುಶಲಕೆಲಸದ ವೆಚ್ಚ | ೭೫ | ೨೫ |
| ೩. | ನಿರುದ್ಯೋಗ ಭತ್ಯೆ | - | ಪೂರ್ತ |

ಕಾಮಗಾರಿ ವೆಚ್ಚ : ಮಜೂರಿ ಕನಿಷ್ಠ ಶೇ.೬೦ರಷ್ಟು

ಸಾಮಗ್ರಿ/ಕುಶಲ, ಅರೆಕುಶಲ ಮಜೂರಿ, ಯಂತ್ರಗಳ ಬಳಕೆ ಹಾಗೂ ಯೋಜನೆ ತಯಾರಿಯ ಸಲಹಾ ವೆಚ್ಚ ಸೇರಿದಂತೆ ಶೇ.೪೦ರಷ್ಟು (ಒಂದು ಗ್ರಾಮ ಪಂಚಾಯಿತಿಯ ಕಾಮಗಾರಿಗಳ ವೆಚ್ಚ ಒಟ್ಟಾರೆಯಾಗಿ ಯಾವುದೇ ಸಂದರ್ಭದಲ್ಲಿ ೬೦:೪೦ ಅನುಪಾತವನ್ನು ಮೀರದಂತೆ ನೋಡಿಕೊಳ್ಳಬೇಕು).

## ಗ್ರಾಮ ಸಭೆಯ ಜವಾಬ್ದಾರಿ

- ವಾರ್ಡ್ ಅಥವಾ ಗ್ರಾಮ ಸಭೆಯಲ್ಲಿ ಯೋಜನೆಗಳನ್ನು ಗುರುತಿಸಿ ಆದ್ಯತೆ ಪಟ್ಟಿ ಮಾಡುವುದು.
- ಗ್ರಾಮ ಸಭೆಯು ಗ್ರಾಮ ಪಂಚಾಯಿತಿಯ ಕಾಮಗಾರಿಗಳ ಅನುಷ್ಠಾನವನ್ನು ಮೇಲ್ವಿಚಾರಣೆ ಮಾಡುವುದು.
- ಗ್ರಾಮ ಪಂಚಾಯಿತಿ ಕೈಗೊಂಡ ಎಲ್ಲಾ ಯೋಜನೆಗಳ ಕ್ರಮಬದ್ಧ ಸಾಮಾಜಿಕ ಲೆಕ್ಕ ಸಂಶೋಧನೆ ನಡೆಸುವುದು. ಇದಕ್ಕೆ ಸಂಬಂಧಿಸಿದಂತೆ ಗ್ರಾಮ ಸಭೆಗೆ ಹಾಜರಿಪಟ್ಟಿ ಬಿಲ್ಲುಗಳು, ವೋಚರ್ ಗಳು, ಅಳತೆ ಪುಸ್ತಕಗಳು, ಮಂಜೂರಾತಿ ಆದೇಶ ಪ್ರತಿಗಳು ಮತ್ತು ಲೆಕ್ಕ ಪತ್ರಗಳಿಗೆ ಸಂಬಂಧಿಸಿದಂತೆ ಇತರೆ ಪುಸ್ತಕಗಳು ಮತ್ತು ಕಾಗದಗಳು ಸೇರಿದಂತೆ ಎಲ್ಲಾ ದಸ್ತಾವೇಜುಗಳನ್ನು ಪರಿಶೀಲಿಸುವ ಹಕ್ಕು ಇರುತ್ತದೆ.

## ೧೨. ಗ್ರಾಮ ಪಂಚಾಯಿತಿಗಳ ಜವಾಬ್ದಾರಿ

- ವಾರ್ಡ್ ಅಥವಾ ಗ್ರಾಮ ಸಭೆಗಳ ಶಿಫಾರಸ್ಸುಗಳ ಅನ್ವಯ ಕಾರ್ಯ ಯೋಜನೆಯಡಿಯಲ್ಲಿ

ಕೈಗೆತ್ತಿಕೊಳ್ಳಬಹುದಾದ ಯೋಜನೆಗಳನ್ನು ಗುರುತಿಸಿ ಅಂತಹ ಯೋಜನೆಗಳನ್ನು ಜಾರಿಗೊಳಿಸುವುದು ಮತ್ತು ಮೇಲ್ವಿಚಾರಣೆ ಮಾಡುವುದು.

- ಯೋಜನೆಗಳನ್ನು ತಯಾರಿಸುವಾಗ ಅಂದಾಜು ಬೇಡಿಕೆಯ ಎರಡು ಪಟ್ಟು ಯೋಜನೆಗಳನ್ನು ತಯಾರಿಸುವುದು.
- ಪ್ರಸ್ತಾವನೆಗಳನ್ನು ಗ್ರಾಮ ಪಂಚಾಯತಿಯ ಉತ್ಪಾದನಾ ಸಮಿತಿ ಪರಿಶೀಲಿಸಬೇಕು ಹಾಗೂ ಈ ಪ್ರಸ್ತಾವನೆಗಳಿಗೆ ಗ್ರಾಮ ಸಭೆ ಮತ್ತು ಗ್ರಾಮ ಪಂಚಾಯಿತಿಯ ಅನುಮೋದನೆ ಪಡೆಯಬೇಕು.
- ವಿವಿಧ ಕಾಮಗಾರಿಗಳ ನಡುವಿನ ಆದ್ಯತಾ ಕ್ರಮವನ್ನು ಒಳಗೊಂಡಂತೆ ಅಭಿವೃದ್ಧಿ ಯೋಜನೆಗಳಿಗಾಗಿ ಪ್ರಸ್ತಾವನೆಗಳನ್ನು ಜಾರಿಗೊಳಿಸುವ ಮುಂಚೆ ಪರಿಷ್ಕರಣೆ ಹಾಗೂ ಪ್ರಾಥಾಮಿಕ ಅನುಮೋದನೆಗಾಗಿ ಕಾರ್ಯಕ್ರಮ ಅಧಿಕಾರಿಗೆ ಒಂದು ತಿಂಗಳೊಳಗಾಗಿ ಕಳುಹಿಸಬೇಕು.
- ಕಾರ್ಯಕ್ರಮ ಅಧಿಕಾರಿಯಿಂದ ಮಂಜುರಾದಂತಹ ಯಾವುದೇ ಯೋಜನೆಯನ್ನು ಗ್ರಾಮ ಪಂಚಾಯತಿ ವ್ಯಾಪ್ತಿಯೊಳಗೆ ಕೈಗೆತ್ತಿಕೊಳ್ಳಬಹುದು.
- ನೋಂದಾಯಿಸಿದ ಅರ್ಜಿದಾರರಿಗೆ ಉದ್ಯೋಗ ಚೀಟಿಗಳನ್ನು ಹಾಗೂ ಪಾಸ್ ಪುಸ್ತಕಗಳನ್ನು ವಿತರಿಸಿ, ಉದ್ಯೋಗಾವಕಾಶಗಳನ್ನು ಕಲ್ಪಿಸುವುದು.
- ಗ್ರಾಮ ಪಂಚಾಯಿತಿಯು ಅರ್ಜಿದಾರರಿಗೆ ಉದ್ಯೋಗಾವಕಾಶಗಳನ್ನು ಹಂಚುವುದು ಹಾಗೂ ಅವರನ್ನು ಕೆಲಸಕ್ಕೆ ಹಾಜರಾಗುವಂತೆ ತಿಳಿಸುವುದು.
- ಈ ಕಾರ್ಯಯೋಜನೆಯಡಿಯಲ್ಲಿ ಕೈಗೊಳ್ಳುವ ಕಾಮಗಾರಿಗಳ ಅಗತ್ಯ ತಾಂತ್ರಿಕ ಮಾನದಂಡಗಳು ಹಾಗೂ ಅಳತೆಯನ್ನು ಪೂರೈಸುವುದು.
- ಅರಣ್ಯ, ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳು ಗ್ರಾಮ ಪಂಚಾಯಿತಿಯೊಂದಿಗೆ ಸಮಾಲೋಚಿಸಿ ಯೋಜನೆಗಳನ್ನು ತಯಾರಿಸಬಹುದು.
- ಯೋಜನೆಗಳನ್ನು ತಯಾರಿಸಲು ಭೂಸೇನೆ, ನಿರ್ಮಿತಿ ಕೇಂದ್ರ ಇಂಜಿನಿಯರಿಂಗ್ ಕಾಲೇಜ್ ಅಥವಾ ಕೃಷಿ ವಿಶ್ವವಿದ್ಯಾಲಯದ ನೇರವನ್ನು ಪಡೆಯಬಹುದು. ಇದಕ್ಕಾಗಿ ಯೋಜನೆಯ ಒಟ್ಟು ವೆಚ್ಚದ ಶೇ.೩ರಷ್ಟು ಸಲಹಾ ವೆಚ್ಚವನ್ನು ಪಾವತಿಸಬಹುದು.

## ೧೩. ತಾಲ್ಲೂಕು ಪಂಚಾಯಿತಿಯ ಜವಾಬ್ದಾರಿ

- ಗ್ರಾಮ ಪಂಚಾಯಿತಿಯಿಂದ ಬಂದ ಪ್ರಸ್ತಾವನೆಗಳನ್ನು ಒಂದು ತಿಂಗಳೊಳಗೆ ಸಾಮಾನ್ಯಸ್ಥಾಯೀ ಸಮಿತಿ ಅಥವಾ ಸಾಮಾನ್ಯ ಸಭೆಯಲ್ಲಿಟ್ಟು ಅನುಮೋದನೆ ಪಡೆಯಬೇಕು.

- ಹೆಚ್ಚುವರಿ ಕಾಮಗಾರಿಗಳ ಅಗತ್ಯವಿದ್ದಲ್ಲಿ ಪ್ರಸ್ತಾವನೆಯನ್ನು ಗ್ರಾಮ ಪಂಚಾಯಿತಿಯಿಂದ ಎರಡು ತಿಂಗಳೊಳಗೆ ಪಡೆಯಬೇಕು. ಇಲ್ಲವೇ ಸಾಮಾನ್ಯ ಸ್ಥಾಯೀ ಸಮಿತಿಯ ಶಿಫಾರಸ್ಸಿನ ಮೇರೆಗೆ ತಾಲ್ಲೂಕು ಪಂಚಾಯಿತಿಯೇ ತಯಾರಿಸಬೇಕು.
- ಸಾಮಾನ್ಯ ಸ್ಥಾಯೀ ಸಮಿತಿಯ ಶಿಫಾರಸ್ಸಿನ ಮೇರೆಗೆ ಒಂದು ಗ್ರಾಮ ಪಂಚಾಯತಿಗಿಂತ ಹೆಚ್ಚು ಗ್ರಾಮ ಪಂಚಾಯತಿಯೊಳಗೆ ಬರುವ ಯೋಜನೆಗಳನ್ನು ತಯಾರಿಸಬೇಕು.
- ಸಾಮಾನ್ಯ ಸ್ಥಾಯೀ ಸಮಿತಿಯು ಕಾಮಗಾರಿಗಳ ಅನುಷ್ಠಾನದ ಮೇಲುಸ್ತುವಾರಿ ಮಾಡಬೇಕು.

## ೧೪. ಜಿಲ್ಲಾ ಪಂಚಾಯಿತಿಯ ಜವಾಬ್ದಾರಿ

- ಸಾಮಾನ್ಯ ಸ್ಥಾಯೀ ಸಮಿತಿ ಶಿಫಾರಸ್ಸಿನ ಮೇರೆಗೆ ಒಂದು ತಾಲ್ಲೂಕಿಗಿಂತ ಹೆಚ್ಚು ತಾಲೂಕುಗಳ ವ್ಯಾಪ್ತಿಯಲ್ಲಿ ಬರುವ ಯೋಜನೆಗಳನ್ನು ತಯಾರಿಸಬೇಕು.
- ಸಾಮಾನ್ಯ ಸ್ಥಾಯೀ ಸಮಿತಿಯು ಕಾಮಗಾರಿಗಳ ಅನುಷ್ಠಾನದ ಮೇಲುಸ್ತುವಾರಿ ಮಾಡಬೇಕು.
- ಕಾರ್ಯಕ್ರಮದಡಿಯಲ್ಲಿ ಕೈಗೊಳ್ಳಲಾಗುವ ಯೋಜನೆಗಳಿಗೆ ಅಂತಿಮ ರೂಪ ನೀಡಿ ಅನುಮೋದಿಸಬೇಕು.

## ೧೫. ಯೋಜನೆಯ ಅನುಷ್ಠಾನದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಪಾತ್ರ

- ಗ್ರಾಮ ಪಂಚಾಯಿತಿಯು ಕನಿಷ್ಠ ಶೇ.೫೦ ರಷ್ಟು ಕಾಮಗಾರಿಗಳನ್ನು (ಅನುದಾನದ ರೂಪದಲ್ಲಿ) ನಿರ್ವಹಿಸುವುದು.
- ಜಿಲ್ಲಾ ಪಂಚಾಯತ್ ವ್ಯಾಪ್ತಿಗೆ ಬರುವ ಇಲಾಖೆಗಳ ಮೂಲಕ ಯೋಜನೆಯನ್ನು ಅನುಷ್ಠಾನಗೊಳಿಸಬೇಕು.
- ಅಗತ್ಯವಿದ್ದಲ್ಲಿ ಇತರೆ ಇಲಾಖೆಗಳು ಮತ್ತು ಸ್ವಸಹಾಯ ಸಂಘಗಳಿಗೆ ಕೆಲಸ ನೀಡಬಹುದು.
- ಗ್ರಾಮ ಪಂಚಾಯಿತಿಯ ಉತ್ಪಾದನಾ ಸಮಿತಿಯು ಕಾಮಗಾರಿಗಳ ಅನುಷ್ಠಾನದ ಮೇಲುಸ್ತುವಾರಿ ಮಾಡಬೇಕು.
- ಗ್ರಾಮ ಪಂಚಾಯಿತಿಯು ಉಪ ಸಮಿತಿಗಳನ್ನು ರಚಿಸಿ ವಹಿಸಬಹುದು.
- ಸಾಮಗ್ರಿಗಳಿಗಾಗಿ ಸಂದಾಯ ಮಾಡುವ ರೂ.೫೦೦ ಗಳಿಗಿಂತ ಹೆಚ್ಚಿನ ಸಂದಾಯಗಳನ್ನು ಅಕೌಂಟ್ ಪೇಯಿ ಚೆಕ್ ಮೂಲಕ ನೀಡತಕ್ಕದ್ದು.
- ಪ್ರತಿಯೊಂದು ಯೋಜನೆ ಅಥವಾ ಕಾಮಗಾರಿಯ ಕನಿಷ್ಠ ಎರಡು ಛಾಯಚಿತ್ರಗಳಿರಬೇಕು.
- ಸ್ವಂತ ಚೆಕ್‌ಗಳ ಮೇಲೆ ಪಡೆಯುವ ಹಣವು ಗರಿಷ್ಟ ರೂ.೫೦೦ ಗಳಿಗೆ ಸೀಮಿತವಾಗಿರತಕ್ಕದ್ದು.

- ಕಂಟ್ರಾಕ್ಟರ್ ಗಳನ್ನು ಬಳಸಲೇಬಾರದು.

- ಯಂತ್ರಗಳ ಬಳಕೆ ಮಾಡುವುದಾದರೂ ಯೋಜನಾ ವೆಚ್ಚದ ಶೇ.೬೦ಕ್ಕೆ (ಅಂದರೆ ಕೂಲಿಯಾಗಿ ನೀಡಬೇಕಾದ ಮೊತ್ತಕ್ಕೆ) ಹೊಂದಾಣಿಕೆ ಮಾಡಿಕೊಳ್ಳತಕ್ಕದಲ್ಲ. ಅನಿವಾರ್ಯ ಸಂದರ್ಭಗಳಲ್ಲಿ ಶೇ.೪೦ರ ಭಾಗದಲ್ಲಿ ಯಂತ್ರಗಳ ಬಳಕೆ ಬಾಬ್ತು ವೆಚ್ಚವನ್ನು ಹೊಂದಾಣಿಕೆ ಮಾಡಿಕೊಳ್ಳಬಹುದು.

- ಹಾಜರಿ ಪಟ್ಟಿಗಳ ನಿರ್ವಹಣೆಗಾಗಿ ಕನಿಷ್ಠ ೫೦ ಕಾರ್ಮಿಕರಿಗೆ ಒಬ್ಬರಂತೆ ಅಕ್ಷರಸ್ಥರನ್ನು ನೇಮಿಸಿಕೊಳ್ಳಬಹುದು.

## ೧೬. ಸಾಮಾಜಿಕ ಲೆಕ್ಕಪರಿಶೋಧನೆ

ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಕೈಗೊಂಡ ಕಾಮಗಾರಿಗಳ ಅರೆ ವಾರ್ಷಿಕ, ವಾರ್ಷಿಕ ವರದಿಯನ್ನು ಜಮಾಬಂದಿಯ ಮೂಲಕ ಗ್ರಾಮ ಸಭೆಯ ಸದಸ್ಯರ ಗಮನಕ್ಕೆ ತರತಕ್ಕದ್ದು. ಹಾಗೂ ಈ ಯೋಜನೆಯಡಿಯಲ್ಲಿ ಕೈಗೊಂಡ ಕಾಮಗಾರಿಗಳ ಅರೆ ವಾರ್ಷಿಕ ಅಥವಾ ವಾರ್ಷಿಕ ವರದಿಯನ್ನು ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಯ ಸರ್ವಸದಸ್ಯರ ಸಾಮಾನ್ಯ ಸಭೆಯಲ್ಲಿ ಮಂಡಿಸತಕ್ಕದ್ದು. ನಂತರ ಎಲ್ಲಾ ಹಂತಗಳಲ್ಲೂ ಕನಿಷ್ಟ ಮೂರು ಇಲಾಖೆಗಳ ಕಾಮಗಾರಿಗಳನ್ನು ಪರಿಶೀಲಿಸುವುದು.

## ೧೭. ಸಾಮಾಜಿಕ ಭದ್ರತೆ

ಈ ಯೋಜನೆಯಡಿ ಕೆಲಸ ನಿರ್ವಹಿಸುವ ಆಕಸ್ಮಿಕವಾಗಿ ಆಪಘಾತಕ್ಕೆ ಒಳಗಾದಾಗ ಉಚಿತ ಚಿಕಿತ್ಸೆ ನೀಡಬೇಕು. ಒಂದು ವೇಳೆ ಗಾಯಗೊಂಡಲ್ಲಿ ದಿನದ ಕೂಲಿಯ ಅರ್ಧದಷ್ಟನ್ನು ಪಾವತಿಸಬೇಕಾಗುತ್ತದೆ. ವ್ಯಕ್ತಿಗಳು ಶಾಶ್ವತ ಅಂಗವಿಕಲರಾದಲ್ಲಿ ಅವರಿಗೆ ಅಥವಾ ಮೃತಪಟ್ಟಲ್ಲಿ ಅವರ ಅವಲಂಬಿತರಿಗೆ ಪರಿಹಾರವಾಗಿ ರೂ.೨೫,೦೦೦ ಹಣ ನೀಡಬೇಕು. ಈ ಕಾಮಗಾರಿಯ ಸ್ಥಳದಲ್ಲಿ ಸುರಕ್ಷಿತ ಕುಡಿಯುವ ನೀರು, ಶಿಶುವಿಹಾರ, ವಿಶ್ರಾಂತಿ ಸ್ಥಳ ಹಾಗೂ ಪ್ರಥಮ ಚಿಕಿತ್ಸೆ ದೌಲಭ್ಯಗಳನ್ನು ಒದಗಿಸಬೇಕಾಗುತ್ತದೆ. ಮಹಿಳೆಯರೊಂದಿಗೆ ಬರುವ ಆರು ವರ್ಷಕ್ಕಿಂತ ಕಡಿಮೆ ವಯಸ್ಸಿನ ಐದಕ್ಕಿಂತ ಹೆಚ್ಚಿನ ಮಕ್ಕಳಿದ್ದಲ್ಲಿ ಒಬ್ಬ ಮಹಿಳೆಯನ್ನು ಶಿಶುಗಳ ಸಂರಕ್ಷಣೆಗಾಗಿ ನೇಮಿಸಿಕೊಳ್ಳಬೇಕು. ಮತ್ತು ಈ ಶಿಶುಗಳ ಪಾಲನೆಗೆ ನೇಮಿಸಿಕೊಂಡ ಮಹಿಳೆಗೆ ದಿನದ ಕನಿಷ್ಠ ಕೂಲಿಯನ್ನು ಪಾವತಿಸಬೇಕು.

## ೧೮. ನಿರುದ್ಯೋಗ ಭತ್ಯೆ

ಬೇಡಿಕೆ ಸಲ್ಲಿಸಿದ ೧೫ ದಿನಗಳೊಳಗೆ ಕೆಲಸ ನೀಡದಿದ್ದಲ್ಲಿ ಅರ್ಜಿದಾರರಿಗೆ ನಿರುದ್ಯೋಗ ಭತ್ಯೆ ನೀಡಬೇಕು. ಹಾಗೂ ಒಂದು ಆರ್ಥಿಕ ವರ್ಷದಲ್ಲಿ ಕೆಲಸ ನೀಡಿದ ಮೊದಲ ೩೦ ದಿನಗಳಿಗೆ ಕನಿಷ್ಟ

ಕೂಲಿಯ ಶೇ.೨೫ ರಷ್ಟು ಮತ್ತು ನಂತರದ ದಿನಗಳಿಗೆ ಶೇ.೫೦ರಷ್ಟು ನಿರುದ್ಯೋಗಭತ್ಯೆ ನೀಡಬೇಕು.(ಗರಿಷ್ಟ ೧೦೦ ದಿನಗಳು)

## ೧೯. ಹಣಕಾಸಿನ ನಿರ್ವಹಣೆ

ಈ ಕೆಳಗಿನವರು ಬೇರೆ ಬೇರೆ ಮಟ್ಟಗಳಲ್ಲಿ ಹಣಕಾಸನ್ನು ನಿರ್ವಹಿಸುತ್ತಾರೆ.

- ರಾಜ್ಯ ಮಟ್ಟದಲ್ಲಿ ರಾಜ್ಯ ಉದ್ಯೋಗ ಖಾತರಿ ಪರಿಷತ್ತು.
- ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಅಂದರೆ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ.
- ತಾಲ್ಲೂಕು ಮಟ್ಟದಲ್ಲಿ ತಾಲೂಕು ಕಾರ್ಯಕ್ರಮ ಸಮನ್ವಯಾಧಿಕಾರಿ ಅಂದರೆ ತಾಲೂಕು ಪಂಚಾಯಿತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ.
- ಗ್ರಾಮೀಣ ಮಟ್ಟದಲ್ಲಿ ಗ್ರಾಮ ಪಂಚಾಯಿತಿ.
- ಕೂಲಿಯನ್ನು ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಮಾತ್ರ ನೀಡಬಹುದು.
- ಸಾಮಾಗ್ರಿ ವೆಚ್ಚವನ್ನು ಸಂಬಂಧಪಟ್ಟಕಾರ್ಯ ನಿರ್ವಾಹಕ ಏಜೆನ್ಸಿ ಮೂಲಕ ನೀಡಲಾಗುವುದು.

## ೨೦. ಸೃಷ್ಟಿಯಾದ ಸ್ವತ್ತುಗಳ ಒಡೆತನ ಮತ್ತು ನಿರ್ವಹಣೆ

ಸೃಷ್ಟಿಯಾದ ಸಮುದಾಯದ ಆಸ್ತಿಯ ಒಡೆತನವು ಸಾಮಾನ್ಯವಾಗಿ ಅನುಷ್ಠಾನಗೊಳಿಸಿದ ಸಂಸ್ಥೆಗೆ ಸೇರಿಸುರುತ್ತದೆ. ಅರಣ್ಯ ಇಲಾಖೆಯ ಜಮೀನಿನಲ್ಲಿ ಅರಣ್ಯ ನಿರ್ಮಾಣ ಮಾಡಿದರೆ ಅದರ ಒಡೆತನ ಸರ್ಕಾರದ್ದಾಗಿರುತ್ತದೆ. ಆದರೆ ಅದರಿಂದ ಬರುವ ಆದಾಯರ ಶೇ.೫೦ರಷ್ಟು ಗ್ರಾಮ ಪಂಚಾಯಿತಿಗೆ ಸಲ್ಲಬೇಕಾಗುತ್ತದೆ. ಗ್ರಾಮದ ಸಾಮಾನ್ಯ ಜಮೀನಿನಲ್ಲಿ ಅರಣ್ಯ ನಿರ್ಮಾಣ ಅಥವಾ ನರ್ಸರಿ ಮಾಡಿದರೆ ಅದರ ಒಡೆತನ ಗ್ರಾಮ ಪಂಚಾಯಿತಿಗೆ ಸೇರುತ್ತದೆ. ಸೃಷ್ಟಿಯಾದ ಸ್ವತ್ತುಗಳ ನಿರ್ವಹಣೆಯ ಹೊಣೆಯು ಒಡೆತನ ಹೊಂದಿದ ಅಂದರೆ ಅನುಷ್ಠಾನ ಸಂಸ್ಥೆಯದ್ದಾಗಿರುತ್ತದೆ.

## ೫.೩. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರೆ ಕಾಯಿದೆಯಲ್ಲಿ ಕಾಮಗಾರಿಗಳ ಆಯ್ಕೆ ಮತ್ತು ಅನುಷ್ಠಾನ

ಈ ಹಿಂದೆ ತಿಳಿದಿರುವಂತೆ ದುಡಿಯುವ ಕೈಗಳಿಗೆ ಉದ್ಯೋಗ ಒದಗಿಸುವ ಮೂಲಕ ಗ್ರಾಮೀಣ ಪ್ರದೇಶಗಳಲ್ಲಿ ಆರ್ಥಿಕ ಮತ್ತು ಸಾಮಾಜಿಕ ಭದ್ರತೆ ಒದಗಿಸುವುದೇ ರಾಷ್ಟ್ರೀಯ ಗ್ರಾಮೀಣ ಉದ್ಯೋಗ

ಖಾತರಿ ಕಾಯಿದೆಯ ಉದ್ದೇಶ. ಈ ಯೋಜನೆಯಲ್ಲಿ ಒಟ್ಟು ಒಂಬತ್ತು ವಲಯಗಳಲ್ಲಿ ಮಾತ್ರ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಬಹುದು. ಏಕೆಂದರೆ ಈ ಯೋಜನೆಯ ಅಡಿಯಲ್ಲಿ ನಿರಂತರವಾಗಿ ಉದ್ಯೋಗ ಒದಗಿಸುವುದು. ಸಾಧ್ಯವಿಲ್ಲ. ಅನುಷ್ಠಾನಗೊಳಿಸುವ ಕಾಮಗಾರಿಗಳು ಸುಸ್ಥಿರ ಅಭಿವೃದ್ಧಿಗೆ ಪೂರಕವಾಗಿದ್ದು, ಅವು ಮುಂದಿನ ದಿನಗಳಲ್ಲಿ ತಾವಾಗಿಯೇ ಉದ್ಯೋಗವನ್ನು ಒದಗಿಸುವ ಶಕ್ತಿ ಹೊಂದಿರಬೇಕು. ಈ ಒಂಬತ್ತು ವಲಯಗಳು ಇಂತಹ ಗುಣಗಳನ್ನು ಹೊಂದಿರುವುದರಿಂದ ಅವುಗಳನ್ನು ಮಾತ್ರ ಈ ಯೋಜನೆಗಾಗಿ ಆಯ್ಕೆ ಮಾಡಲಾಗಿದೆ. ಆ ವಲಯಗಳೆಂದರೆ.

೧. ನೀರು ಸಂರಕ್ಷಣೆ ಮತ್ತು ನೀರಿನ ಕೊಯ್ಲು

ನಮಗೆಲ್ಲರಿಗೂ ತಿಳಿದಿರುವಂತೆ ಅಂತರ್ಜಲದ ಮಟ್ಟದಿನದಿಂದ ದಿನಕ್ಕೆ ಕುಸಿಯುತ್ತದೆ. ಕುಡಿಯಲು ಮತ್ತು ಕೃಷಿ ಚಟುವಟಿಕೆಗೆ ನೀರಿನ ಕೊರತೆ ಭಯಾನಕವಾಗಿ ಎದುರಾಗುತ್ತಿದೆ. ಇದರಿಂದ ಆಹಾರ ಉತ್ಪಾದನೆಯಲ್ಲಿ ಕೊರತೆಯಾಗಿ ಬಡತನ ಬಹಳವಾಗಿ ಹೆಚ್ಚಬಹುದು. ಅದಕ್ಕಾಗಿ ಈ ವಲಯಕ್ಕೆ ಮೊದಲ ಆದ್ಯತೆ ನೀಡಲಾಗಿದೆ. ಈ ವಲಯಗಳಲ್ಲಿ ಕೆಳಗಿನ ಕಾಮಗಾರಿಗಳನ್ನು ಆಯ್ಕೆ ಮಾಡಬಹುದು.

- ನೀರು ತಡೆ ಒಡ್ಡುಗಳ ನಿರ್ಮಾಣ
- ಸಣ್ಣ ಅಣ್ಣೆ ಕಟ್ಟುಗಳು
- ಜಿನುಗು ಕೆರೆಗಳು
- ಕೆರೆಗಳಿಗೆ ನೀರು ಹರಿದು ಬರುವ ಪೂರೈಕೆ ಕಾಲುವೆಗಳ ನಿರ್ಮಾಣ ಮತ್ತು ದುರಸ್ತಿ
- ಗೋಕಟ್ಟೆಗಳ ನಿರ್ಮಾಣ ಮತ್ತು ಪುನಶ್ಚೇತನ
- ಶಾಲೆಗಳಲ್ಲಿ ಮತ್ತು ಅಂಗನವಾಡಿಗಳಲ್ಲಿ ಮಳೆ ನೀರಿನ ಕೊಯ್ಲಿನ ಮೂಲಕ ನೀರು ಸಂಗ್ರಹಣೆಗೆ ವ್ಯವಸ್ಥೆ.
- ಆರ್ಥಿಕವಾಗಿ ಹಿಂದುಳಿದವರು ಅದರಲ್ಲೂ ಮುಖ್ಯವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗದ ಕುಟುಂಬಗಳಿಗೆ ಸೇರಿದ ಮನೆಗಳಲ್ಲಿ ಮಳೆ ನೀರಿನ ಕೊಯ್ಲಿನ ಮೂಲಕ ನೀರು ಸಂಗ್ರಹಣೆಯ ವ್ಯವಸ್ಥೆ.

೨. ಅರಣ್ಯೀಕರಣವು ಸೇರಿದಂತೆ ಬರಗಾಲ ತಡೆಗಟ್ಟುವ ಕಾಮಗಾರಿಗಳು

ಬಯಲು ಸೀಮೆಯ ಹಲವಾರು ಗ್ರಾಮಗಳು ನಿರಂತರವಾಗಿ ಬರದ ಬಾಡೆಗೆ ಸಿಲುಕುತ್ತವೆ. ಇಂತಹ ಪ್ರದೇಶಗಳಲ್ಲಿ ಸಾಮಾಜಿಕ ಅರಣ್ಯಗಳನ್ನು ಬೆಳೆಸಿ ಜಲ ಸಂರಕ್ಷಣೆಯ ಜೊತೆಗೆ ಬರಗಾಲ

ತಡೆಯಲು ಈ ಕೆಳಗಿನ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಬಹುದು. ಸಾಮಾಜಿಕ ಅರಣ್ಯದಿಂದ ಬರುವ ಉತ್ಪನ್ನಗಳನ್ನು ಮುಂದೆ ಊರಿನ ಅಭಿವೃದ್ಧಿಗೆ ಬಳಸಿಕೊಳ್ಳಬಹುದು. ಈ ಕಾಮಗಾರಿಗಳೆಂದರೆ

- ಕೆರೆ ಒಡ್ಡುಗಳು, ಕಾಲುವೆಗಳ ಏರಿಗಳು, ಖಾಲಿ ಇರುವ ಸರ್ಕಾರಿ ಜಾಗಗಳು, ಗೋಮಾಳ ಇತ್ಯಾದಿ ಸ್ಥಳಗಳಲ್ಲಿ ಗಿಡಗಳನ್ನು ನೆಟ್ಟು ಸಾಮಾಜಿಕ ಅರಣ್ಯ ಬೆಳೆಸುವುದು.
- ಈ ಸಾಮಾಜಿಕ ಅರಣ್ಯ ಮತ್ತು ನರ್ಸರಿಗಳಿಗೆ ಬೇಕಾಗುವ ಸಾವಯವ ಗೊಬ್ಬರ ತಯಾರಿಸುವ ಘಟಕಗಳನ್ನು ಸ್ಥಾಪಿಸುವುದು.
- ಗೋಮಾಳ ಮತ್ತು ಸಾಮಾಜಿಕ ಅರಣ್ಯಗಳಿಗೆ ಬೇಲಿಗಳ ನಿರ್ಮಾಣ ಮಾಡುವುದು.

೩. ಸಣ್ಣ ಮತ್ತು ಅತಿ ಸಣ್ಣ ನೀರಾವರಿ ಕಾಮಗಾರಿಗಳೂ ಸೇರಿದಂತೆ ಕೃಷಿ ನೀರಾವರಿ ಕಾಲುವೆಗಳ ನಿರ್ಮಾಣ

ಇದರಿಂದ ಭವಿಷ್ಯದಲ್ಲಿ ಕೃಷಿಯ ಅಭಿವೃದ್ಧಿ ಸಾಧ್ಯವಿದ್ದು ಈ ವಲಯದಲ್ಲಿ ಕೈಗೆತ್ತಿಕೊಳ್ಳಬಹುದಾದ ಕಾಮಗಾರಿಗಳೆಂದರೆ.

- ಹೊಸ ನೀರಾವರಿ ಕಾಲುವೆಗಳು.
- ಪೂರಕ ನಾಲೆಗಳ ನಿರ್ಮಾಣ ಮತ್ತು ದುರಸ್ತಿ.
- ಕ್ಷೇತ್ರ ನಾಲೆಗಳು
- ನೀರು ಪೂರೈಕೆ ಕ್ಷೇತ್ರದ ಅಭಿವೃದ್ಧಿ

೪. ಜಮೀನುಗಳ ಅಭಿವೃದ್ಧಿ

ಈ ವಲಯದಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ ಸೇರಿದ ಜಮೀನಿನ ಸುಧಾರಣೆ ಹಾಗೂ ಇತರ ಕೆಲವು ಫಲಾನುಭವಿಗಳ ಜಮೀನನ್ನು ಅಭಿವೃದ್ಧಿಪಡಿಸಿ ಮುಂದೆ ಅವರು ಆರ್ಥಿಕವಾಗಿ ಬಲಗೊಳ್ಳುವಂತೆ ಮಾಡಲು ಸಾಧ್ಯವಿದೆ.

ಈ ವಲಯದಲ್ಲಿ ಈ ಕೆಳಗಿನ ಕಾಮಗಾರಿಗಳನ್ನು ನಡೆಸಬಹುದು.

- ಪರಿಶಿಷ್ಟ ಜಾತಿ ಮತ್ತು ವರ್ಗದವರ ಒಡೆತನದ ಭೂಮಿಯನ್ನು ಕೃಷಿಗೆ ಯೋಗ್ಯವನ್ನಾಗಿ ಮಾಡುವುದು.
- ಇಂದಿರಾ ಆವಾಸ ಯೋಜನೆಯ ಫಲಾನುಭವಿಗಳ ನಿವೇಶನಗಳ ಅಭಿವೃದ್ಧಿ.
- ನವಗ್ರಾಮ ಯೋಜನೆಯಲ್ಲಿ ನಿರ್ಮಿಸಲಾದ ಬಡಾವಣೆಗಳ ಅಭಿವೃದ್ಧಿ.

- ನಮ್ಮ ಭೂಮಿ ನಮ್ಮ ತೋಟ ಯೋಜನೆಯ ಫಲಾನುಭವಿಗಳ ಜಮೀನಿನ ಅಭಿವೃದ್ಧಿ ಮತ್ತು ನೀರಾವರಿ ಒದಗಿಸುವುದು.

೫. ಸಾಂಪ್ರದಾಯಿಕ ನೀರಿನ ಮೂಲಗಳ ಪುನಶ್ಚೇತನ

ಈಗಾಗಲೇ ಇರುವ ನೀರಿನ ಮೂಲಗಳು ನಶಿಸಿ ಹೋಗುವಂತೆ ಅವುಗಳಿಗೆ ಮರುಜೀವ ನೀಡುವುದು ಭವಿಷ್ಯದ ದೃಷ್ಟಿಯಿಂದ ತುಂಬಾ ಅಗತ್ಯ. ಈ ವಲಯದಲ್ಲಿ ಈ ಕಾಮಗಾರಿಗಳನ್ನು ಮಾಡಬಹುದು.

- ಹಳೆಯ ಕೆರೆಗಳ ಪುನಶ್ಚೇತನ
- ಹೊಸ ಕೆರೆಗಳ ನಿರ್ಮಾಣ
- ಕುಡಿಯುವ ನೀರಿನ ಸಮುದಾಯ ಬಾವಿಗಳ ನಿರ್ಮಾಣ ಮತ್ತು ದುರಸ್ತಿ.
- ಕಲ್ಯಾಣಿ, ಇಂಗು ಗುಂಡಿಗಳು, ಹೊಂಡಗಳು, ಗೋಕಟ್ಟೆ ಇತ್ಯಾದಿ ಸಾಂಪ್ರದಾಯಿಕ ಜಲ ಮರುಪೂರಣ ವ್ಯವಸ್ಥೆಗಳ ನಿರ್ಮಾಣ ಮತ್ತು ಪುನಶ್ಚೇತನ.

೬. ಭೂಮಿ ಅಭಿವೃದ್ಧಿ

ಇದರಿಂದ ಸಾರ್ವಜನಿಕ ಉಪಯೋಗಕ್ಕಾಗಿ ಭೂಮಿಯನ್ನು ಅಭಿವೃದ್ಧಿ ಪಡಿಸಬಹುದು. ಈ ವಲಯದಲ್ಲಿ ಶಾಲಾ ಕಾಲೇಜ್ ಗಳು ಮತ್ತು ಅಂಗನವಾಡಿಗಳಿಗೆ ಆಟದ ಮೈದಾನ ನಿರ್ಮಾಣ ಮತ್ತು ಆಸ್ಪತ್ರೆ, ಸರ್ಕಾರಿ ಕಛೇರಿ ನಿರ್ಮಾಣಕ್ಕೆ ಭೂಮಿಯನ್ನು ಸಮತಟ್ಟು ಮಾಡುವುದು. ಹಾಗೂ ಸಂತೆ, ಮಾರುಕಟ್ಟೆ, ಸ್ಮಶಾನ ಇತ್ಯಾದಿಗಳಿಗಾಗಿ ಭೂಮಿಯನ್ನು ಸಮತಟ್ಟು ಮಾಡುವುದು. ಸರ್ಕಾರ ಅಥವಾ ಪಂಚಾಯಿತಿ ನಡೆಸುವ ತೋಟಗಾರಿಕಾ ಫಾರ್ಮ್‌ಗಳು, ಮೀನುಸಾಕಣಿಕೆ ಕೇಂದ್ರಗಳು, ಮೇವು ಬೆಳೆಯುವ ಕೇಂದ್ರಗಳು, ರೇಷ್ಮೆ ಬೆಳೆಯುವ ಕೇಂದ್ರಗಳಿಗಾಗಿ ಭೂಮಿಯ ಅಭಿವೃದ್ಧಿ.

೭. ನೆರೆ ನಿಯಂತ್ರಣ ಮತ್ತು ತಡೆ

ನೆರೆ ಹಾವಳಿ ಇರುವ ಪ್ರದೇಶಗಳಲ್ಲಿ ಈ ಕೆಳಗಿನ ಕಾಮಗಾರಿಗಳನ್ನು ಕೈಗೊಂಡು ಮುಂದೆ ಆಗ ಬಹುದಾದ ನಾಶ ನಷ್ಟಗಳನ್ನು ತಡೆಯಬಹುದು.

- ತಗ್ಗು ಪ್ರದೇಶಗಳಿಗೆ ನೀರು ನುಗ್ಗದಂತೆ ಸ್ಥಳೀಯ ವಸ್ತುಗಳನ್ನು ಬಳಸಿ ತಡೆಗೋಡೆಗಳ ನಿರ್ಮಾಣ.
- ನೆರೆ ನೀರಿನಿಂದ ಮಣ್ಣಿನ ಕೊರೆತ ಉಂಟಾಗಿ ರೈತರ ಹೊಲಗದ್ದೆಗಳು ಕೊಚ್ಚಿ ಹೋಗದಂತೆ ತಡೆಗಳ ನಿರ್ಮಾಣ.
- ತಗ್ಗು ಪ್ರದೇಶಗಳಿಂದ ನೀರು ಹರಿದು ಹೋಗಲು ಚರಂಡಿಗಳ ನಿರ್ಮಾಣ.

**೮. ಗ್ರಾಮೀಣ ಸಾರಿಗೆ ಸಂಪರ್ಕಕ್ಕಾಗಿ ಸರ್ವಋತು ರಸ್ತೆಗಳು**

ಈ ಯೋಜನೆಯಲ್ಲಿ ರಸ್ತೆ ಹಾಗೂ ಕಟ್ಟಡಗಳಿಗೆ ಕೊನೆಯ ಆದ್ಯತೆ ನೀಡಲಾಗಿದೆ. ಆದರೆ ಕೆಲವು ಪ್ರದೇಶಗಳ ಅಗತ್ಯ ಮನಗಂಡು ಎಲ್ಲಾ ಕಾಲದಲ್ಲೂ ಉಪಯೋಗಕ್ಕೆ ಬರುವ ರಸ್ತೆ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಬಹುದು. ಅವೆಂದರೆ

- ರೈತರ ಜಮೀನುಗಳಿಗೆ ಸಂಪರ್ಕ ಕಲ್ಪಿಸುವ ರಸ್ತೆಗಳು.
- ಗ್ರಾಮದ ವ್ಯಾಪ್ತಿಯೊಳಗಿನ ಶಾಲೆ, ಆಸ್ಪತ್ರೆ, ಮಾರುಕಟ್ಟೆಗಳಿಗೆ ಸಂಪರ್ಕ ಕಲ್ಪಿಸುವ ರಸ್ತೆಗಳು.
- ಮಳೆಗಾಲದಲ್ಲಿ ರಸ್ತೆ ಕೆಡದಂತೆ ಯೋಗ್ಯ ಚರಂಡಿಗಳ ನಿರ್ಮಾಣ.

**೯. ಕೇಂದ್ರ ಸರ್ಕಾರ ಸೂಚಿಸುವ ಕಾಮಗಾರಿಗಳು**

## ೫.೪. ಯೋಜನೆಯ ಮೂಲಕ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯಿದೆ ೨೦೦೫ರ ಅನುಷ್ಠಾನ

ಜನರಿಗಾಗಿ ಜನರೇ ಸಿದ್ಧಪಡಿಸಿ ಕಾರ್ಯರೂಪಕ್ಕೆ ತರುವ ಯೋಜನೆಯೇ ಜನ ಯೋಜನೆ. ಈ ಹಿಂದೆ ಎಲ್ಲಾ ಯೋಜನೆಗಳನ್ನು ಪರಿಣಿತರು ದೂರದಲ್ಲೆಲ್ಲೋ ಕುಳಿತು ರೂಪಿಸುತ್ತಿದ್ದರು. ಈ ಪರಿಣಿತರಿಗೆ ತಾಂತ್ರಿಕ ಜ್ಞಾನ ಸಾಕಷ್ಟು ಇದ್ದರೂ ಜನರ ಅಗತ್ಯಗಳ ಬಗ್ಗೆ ಸಾಕಷ್ಟು ತಿಳುವಳಿಕೆ ಇರಲಿಲ್ಲ. ಪ್ರದೇಶದಿಂದ ಪ್ರದೇಶಕ್ಕೆ ಜನರ ಅಗತ್ಯಗಳು ಬೇರೆ ಬೇರೆ ಇರುವುದರಿಂದ ಒಂದೇ ರೀತಿಯ ಯೋಜನೆ ಎಲ್ಲಾ ಜನರಿಗೆ ಉಪಯೋಗವಾಗುತ್ತಿರಲಿಲ್ಲ. ಜನರೇ ತಮ್ಮ ಅಗತ್ಯಗಳನ್ನು ಗುರುತಿಸಿಕೊಂಡು ಆದ್ಯತೆಯ ಮೇರೆಗೆ ಯೋಜನೆ ರೂಪಿಸಿದರೆ ಜನರಿಗೆ ತುಂಬಾ ಉಪಯೋಗ ಆಗುತ್ತದೆ. ಆದುದರಿಂದ ಜನ ಯೋಜನೆ ಬೇಕು.

**ಜನ ಯೋಜನೆಯ ವಿವಿಧ ಹಂತಗಳು**

**ವಿಧಾನ ೧**

ವಾರ್ಡ್ ಅಥವಾ ವಸತಿ ಸಭೆ ಕರೆಯಲು ವ್ಯವಸ್ಥೆ ಮಾಡುವುದು.

ಪಂಚಾಯತಿ ಸದಸ್ಯರು ಮತ್ತು ಕಾರ್ಯದರ್ಶಿ ಇದರ ಹೊಣೆಯನ್ನು ವಹಿಸಿಕೊಳ್ಳಬೇಕಾಗುತ್ತದೆ. ಸಭೆಯ ದಿನಾಂಕ, ಸ್ಥಳ, ಸಮಯ, ಉದ್ದೇಶ, ಇತ್ಯಾದಿಗಳನ್ನು ಕುರಿತು ನೋಟಿಸು, ಡಂಗೂರು, ಮನೆ ಮನೆ ಭೇಟಿ, ಮನವೊಲಿಕೆ ಇತ್ಯಾದಿ ವಿಧಾನಗಳ ಮೂಲಕ ವ್ಯಾಪಕವಾಗಿ ಪ್ರಚಾರ ಮಾಡುವುದರ ಮೂಲಕ ಸಭೆಯನ್ನು ಕರೆಯಬೇಕಾಗುತ್ತದೆ. ಈ ಸಭೆಯಲ್ಲಿ ೩೦ ರಿಂದ ೪೦ ಗ್ರಾಮಸ್ಥರ ವಾರ್ಡ್ ಅಥವಾ ವಸತಿ ಸಭೆಯಲ್ಲಿ ಜನರು ತಿಳಿಸುವ ಎಲ್ಲಾ ಅಭಿವೃದ್ಧಿ ಕೊರತೆ ಅಥವಾ ಸಮಸ್ಯೆಗಳನ್ನು ಪಟ್ಟಿ

ಮಾಡುವುದು. ಹಾಗೂ ಈ ಸಮಸ್ಯೆಗಳ ನಿವಾರಣೋಪಾಯಗಳನ್ನು ಚರ್ಚಿಸಿ ಆದ್ಯತೆಯ ಮೇರೆಗೆ ಪಟ್ಟಿ ಮಾಡುವುದು. ಈ ಆದ್ಯತಾ ಪಟ್ಟಿಯನ್ನು ಬಹುಮತದ ಆಧಾರದಲ್ಲಿ ತಯಾರಿಸಬೇಕಾಗುತ್ತದೆ. ಸಮಸ್ಯೆ ಅಥವಾ ಭಿನ್ನಾಭಿಪ್ರಾಯಗಳಿದ್ದಲ್ಲಿ. ಕೈ ಎತ್ತುವ ಮೂಲಕ ಆದ್ಯತೆಗೆ ಇರುವ ಬೆಂಬಲವನ್ನು ಸ್ಪಷ್ಟಪಡಿಸಿಕೊಳ್ಳುವುದು. ಕಾರ್ಯತಂಡಕ್ಕೆ ಪ್ರತಿವಾರ್ಡ ಸಭೆಯಿಂದ ವಿಷಯ ಚೆನ್ನಾಗಿ ಅರಿತಿರುವ, ವಿಚಾರಗಳನ್ನು ಚೆನ್ನಾಗಿ ಮಂಡಿಸುವ ಗ್ರಾಮಸ್ಥರನ್ನು ಆಯ್ಕೆ ಮಾಡಿಕೊಳ್ಳುವುದು.

ವಿಧಾನ ೨

ಮೊದಲನೆಯದಾಗಿ ಜನಪ್ರತಿನಿಧಿಗಳು, ಸ್ಥಳೀಯ ಅಧಿಕಾರಿಗಳು ಹಾಗೂ ಸಾಮಾಜಿಕ ಕಾರ್ಯಕರ್ತರಿರುವ ವಲಯವಾರು ಕಾರ್ಯತಂಡಗಳನ್ನು ರಚಿಸಬೇಕು. ಈ ಕೆಳಗಿನಂತೆ ತಂಡಗಳನ್ನು ರಚಿಸಬಹುದು.

- ಪ್ರಾಥಮಿಕ ಮಾಹಿತಿ ಸಂಗ್ರಹ ತಂಡ.
- ಉತ್ಪಾದನಾ ವಲಯ ತಂಡ.
- ಸಾಮಾಜಿಕ ನ್ಯಾಯ ವಲಯ ತಂಡ.
- ಮೂಲಭೂತ ಸೌಕರ್ಯ ವಲಯ ತಂಡ.

ಎರಡನೆಯದಾಗಿ ಕಾರ್ಯತಂಡಗಳು ವಸತಿ ಪ್ರದೇಶಗಳಿಗೆ ಬೇಟಿ ನೀಡಿ ಎಲ್ಲಾ ವಲಯಗಳಿಗೆ ಸಂಬಂಧಿಸಿದ ಮಾಹಿತಿ ಸಂಗ್ರಹಿಸಬೇಕು. ಗ್ರಾಮಿಣ ಜನರ ಭಾಗವಹಿಸುವಿಕೆಯ ಮೂಲಕ ಈಗಿರುವ ಸ್ಥಿತಿಯ ಸಮೀಕ್ಷೆ ಮತ್ತು ಊರಿನ ಅಭಿವೃದ್ಧಿಯಲ್ಲಿ ಏನೇನು ಕೊರತೆಗಳಿವೆ ಎಂಬುದನ್ನು ಗುರುತಿಸುವುದರ ಜೊತೆಗೆ ಊರಿನ ಜನರ ಬೇಡಿಕೆಗಳು ಏನೇನು ಎಂಬುದನ್ನು ಗುರುತಿಸುವುದು.

ಮೂರನೆಯದಾಗಿ ವಸತಿ ಅಥವಾ ವಾರ್ಡ್ ಸಭೆಗಳನ್ನು ಸಂಘಟಿಸಿ ವಾಸ್ತವ ಸ್ಥಿತಿಯ ಸಮೀಕ್ಷೆಯಲ್ಲಿ ಕಂಡುಕೊಂಡ ಅಂಶಗಳನ್ನು ಸಭೆಯ ಮುಂದೆ ಮಂಡಿಸುವುದು. ಈ ಸಭೆಗಳಲ್ಲಿ ಮುಖ್ಯವಾಗಿ ಈ ಕೆಳಗಿನ ಕೆಲಸಗಳು ನಡೆಯಬೇಕು.

- ಗುರುತಿಸಬಲಾದ ಕೊರತೆಗಳು ಮತ್ತು ಬೇಡಿಕೆಗಳ ಕುರಿತು ವಿವರವಾಗಿ ಚರ್ಚಿಸುವುದು.
- ಕೈಗೊಳ್ಳಬೇಕಾದ ಅಭಿವೃದ್ಧಿ ಕ್ರಮಗಳನ್ನು ಆದ್ಯತೆಗಳನ್ನು ಗುರುತಿಸುವುದರ ಮೂಲಕ ಪಟ್ಟಿ ಮಾಡುವುದು.
- ವಾರ್ಡ್ ಸಭೆಗಳಲ್ಲಿ ಗುರುತಿಸಲಾಗಿರುವ ಆದ್ಯತಾ ಪಟ್ಟಿಯಲ್ಲಿ ಉದ್ಯೋಗ ಖಾತರಿ ಯೋಜನೆಯ ಮೂಲಕ ಕೈಗೆತ್ತಿಕೊಳ್ಳಬಹುದಾದ ಯೋಜನೆಗಳು ಯಾವುದು ಎಂಬುದನ್ನು ಗುರುತಿಸುವುದು.

- ಹೀಗೆ ಯೋಜನೆಗಳನ್ನು ಗುರುತಿಸುವಾಗ ಕಾಯಿದೆಯಲ್ಲಿ ಹೇಳಲಾಗಿರುವ ಮೊದಲ ಎಂಟು ವಲಯಗಳಿಗೆ ಮಾತ್ರ ಆದ್ಯತೆ ನೀಡಬೇಕು.
- ವಾರ್ಡ್ ಸಭೆಯ ಆದ್ಯತೆಗಳಿಗಿರುವ ಜನ ಬೆಂಬಲವನ್ನು ಗಮನದಲ್ಲಿರಿಸಬೇಕು.
- ದುಡಿಯುವ ಕೈಗಳಿಗೆ ಹೆಚ್ಚಿನ ಕೆಲಸ ಒದಗಿಸುವ ಕಾಮಗಾರಿಗಳಿಗೆ ಮೊದಲ ಪ್ರಾಶಸ್ತ್ಯ ನೀಡಬೇಕು.
- ಸುಸ್ಥಿರ ಅಭಿವೃದ್ಧಿಗೆ ಒತ್ತು ನೀಡುವ ಕಾಮಗಾರಿಗಳನ್ನು ಮಾತ್ರ ಆಯ್ಕೆ ಮಾಡಬೇಕು.
- ಸಮಸ್ಯೆಗಳ ಪರಿಹಾರಕ್ಕೆ ಇರುವ ಮಾರ್ಗಗಳನ್ನು ಪರಿಶೀಲಿಸಿ ಸೂಕ್ತವಾದುದನ್ನು ಆಯ್ಕೆ ಮಾಡಬೇಕು.
- ಜನಪ್ರತಿನಿಧಿಗಳು ಮತ್ತು ಜನರ ಬೇಡಿಕೆಗಳು ಕಾಯಿದೆಯ ಆಶಯದ ಒಳಗೆ ಇರುವಂತೆ ಸಮನ್ವಯ ಮಾಡಬೇಕು.

### ಗ್ರಾಮ ಸಭೆಯಲ್ಲಿ ನಡೆಯಬೇಕಾದ ಕೆಲಸಗಳು

ಜನಯೋಜನೆಯಲ್ಲಿ ಮುಂದಿನ ಹಂತವೇ ಗ್ರಾಮ ಸಭೆ. ಗ್ರಾಮ ಸಭೆಯನ್ನು ಪಂಚಾಯಿತಿಯ ಮೂಲಕ ಸಂಘಟಿಸಬೇಕು. ಎಲ್ಲಾ ವಾರ್ಡ್‌ಗಳ ಚುನಾಯಿತ ಪ್ರತಿನಿಧಿಗಳು, ಕ್ಷೇತ್ರ ಮಟ್ಟದ ಇಲಾಖಾ ಸಿಬ್ಬಂದಿ ಹಾಗೂ ಜನರು ಭಾಗವಹಿಸುವಂತೆ ಖಾತರಿಪಡಿಸಬೇಕು. ಗ್ರಾಮ ಸಭೆಯಲ್ಲಿ ಈ ಕೆಳಗಿನ ಪ್ರಕ್ರಿಯೆಗಳು ನಡೆಯಬೇಕು.

- ಗ್ರಾಮ ಸಭೆಗೆ ಉದ್ಯೋಗ ಖಾತರಿ ಯೋಜನೆಯ ಅಂಶಗಳೇನು, ಯೋಜನೆಯನ್ನು ಅನುಷ್ಠಾನಗೊಳಿಸುವ ವಿಧಾನ ಏನು ಎಂಬುದರ ಬಗ್ಗೆ ವಿವರವಾಗಿ ತಿಳಿಸಿ ಮನದಟ್ಟು ಮಾಡಬೇಕು.
- ವಸತಿ ಅಥವಾ ವಾರ್ಡ್ ಸಭೆಗಳ ಮೂಲಕ ಗುರುತಿಸಲಾದ ವಾಸ್ತವ ಸ್ಥಿತಿ ಹಾಗೂ ಬೇಡಿಕೆಗಳನ್ನು ಗ್ರಾಮಸಭೆಯ ಮುಂದೆ ಇಡಬೇಕು.
- ಉದ್ಯೋಗ ಖಾತರಿ ಯೋಜನೆಗೆ ಯಾವ ಯಾವ ಕಾಮಗಾರಿಗಳನ್ನು ಆಯ್ಕೆ ಮಾಡಲಾಗಿದೆ. ಆಯ್ಕೆ ಮಾಡುವಾಗ ಯಾವ ಮಾನದಂಡವನ್ನು ಇರಿಸಲಾಗಿದೆ ಎಂದು ಗ್ರಾಮ ಸಭೆಗೆ ವಿವರಿಸಬೇಕು
- ಗ್ರಾಮ ಸಭೆಯಲ್ಲಿ ಈ ವಿಷಯಗಳ ಕುರಿತು ವಿವರವಾಗಿ ಚರ್ಚಿಸಿ ಜನರ ಅಭಿಪ್ರಾಯ ಹಾಗೂ ಸಲಹೆಗಳನ್ನು ಪಡೆದುಕೊಳ್ಳಬೇಕು.
- ನಂತರ ವಲಯವಾರು ಕಾರ್ಯತಂಡಗಳು ಸಿದ್ಧಪಡಿಸಿದ ಕರಡು ಯೋಜನಾ ಪ್ರಸ್ತಾವನೆಗಳನ್ನು ಗ್ರಾಮಸಭೆಯ ಮುಂದೆ ಇಡಬೇಕು.
- ಕರಡು ಯೋಜನೆಯ ಕುರಿತು ಮುಕ್ತವಾದ ಚರ್ಚೆಗೆ ಅವಕಾಶ ಕೊಡಬೇಕು.
- ಜನರು ನೀಡುವ ಸಲಹೆಗಳನ್ನು ಕರಡು ಯೋಜನೆಯಲ್ಲಿ ಸೇರಿಸಲು ಅವಕಾಶ ಕೊಡಬೇಕು.

**ಯೋಜನಾ ಪ್ರಸ್ತಾವನೆಗಳನ್ನು ಅಂತಿಮಗೊಳಿಸುವುದು ಮತ್ತು ಅನುಮೋದಿಸುವುದು**

ಗ್ರಾಮ ಸಭೆಯಲ್ಲಿ ನಡೆದ ಚರ್ಚೆ ಹಾಗೂ ಸಲಹೆಗಳ ಆಧಾರದಲ್ಲಿ ಉದ್ಯೋಗ ಖಾತರಿ ಯೋಜನೆಯಡಿಯಲ್ಲಿ ಕೈಗೊಳ್ಳಬಹುದಾದ ಕಾಮಗಾರಿಗಳ ಯೋಜನಾ ಪ್ರಸ್ತಾವನೆಗಳನ್ನು ವಲಯವಾರು ಕಾರ್ಯತಂಡಗಳು ಅಂತಿಮಗೊಳಿಸಿ ಸಮನ್ವಯ ಮಾಡಬೇಕು. ಕೊನೆಯದಾಗಿ ಸ್ಪಷ್ಟ ರೂಪ ಪಡೆದ ಯೋಜನಾ ಪ್ರಸ್ತಾವನೆಗಳನ್ನು ಗ್ರಾಮ ಪಂಚಾಯಿತಿಯ ಸಾಮಾನ್ಯ ಸಭೆಯಲ್ಲಿ ಅಂಗೀಕರಿಸಬೇಕು. ಅಂಗೀಕಾರಗೊಂಡ ಯೋಜನೆ ಪ್ರಸ್ತಾವನೆಗಳನ್ನು ತಾಲ್ಲೂಕು ಪಂಚಾಯಿತಿಯ ಕಾರ್ಯ ನಿರ್ವಾಹಕ ಅಧಿಕಾರಿಯವರಿಗೆ ಕಳುಹಿಸಿಕೊಡಬೇಕು.

## ೫.೫. ಮಾಹಿತಿ ಹಕ್ಕು ಕಾಯಿದೆ ೨೦೦೫ ಮತ್ತು ರಾಷ್ಟ್ರೀಯ ಉದ್ಯೋಗ ಖಾತರಿ ಕಾಯಿದೆ ೨೦೦೬

ಜನರಿಗೆ ಸರಕಾರದ ಮತ್ತು ಸರ್ಕಾರದಿಂದ ನೆರವು ಪಡೆಯುವ ಸಂಸ್ಥೆಗಳಿಗೆ ಹಾಗೂ ಪ್ರಾಧಿಕಾರಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ಮಾಹಿತಿ ಪಡೆಯುವ ಹಕ್ಕನ್ನು ನೀಡುವ ಕಾನೂನೇ ಮಾಹಿತಿ ಹಕ್ಕು ಕಾಯಿದೆ. ಮಾಹಿತಿ ಹಕ್ಕು ಮಸೂದೆಯು ಮೇ, ೨೦೦೫ರಲ್ಲಿ ಸಂಸತ್ತಿನಲ್ಲಿ ಒಪ್ಪಿಗೆ ಪಡೆದಿದೆ. ಅದಕ್ಕೆ ರಾಷ್ಟ್ರಪತಿಯವರು ಜೂನ್ ೧೫, ೨೦೦೫ರಲ್ಲಿ ಒಪ್ಪಿಗೆ ನೀಡುವುದರ ಮೂಲಕ ಇದು ಆಕ್ಟೋಬರ್ ೧೨, ೨೦೦೫ ರಿಂದ ಇಡೀ ದೇಶದಲ್ಲಿ ಜಾರಿಗೆ ಬಂದಿದೆ. ಈ ಕಾಯಿದೆಯು ಈ ಕೆಳಗಿನ ಹಕ್ಕುಗಳನ್ನು ಜನರಿಗೆ ನೀಡುತ್ತದೆ.

- ಸರಕಾರದ ದಾಖಲೆಗಳನ್ನು ನೋಡಿ ಪರಿಶೀಲಿಸುವುದು.
- ದಾಖಲಾತಿಗಳ ಪ್ರತಿಗಳನ್ನು ಪಡೆಯುವುದು.
- ಸರ್ಕಾರದ ಕಾರ್ಯ ನಿರ್ವಹಣೆಗೆ ಸಂಬಂಧಿಸಿ ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆಯುವುದು.
- ಕಾಮಗಾರಿಗಳನ್ನು ಪರಿಶೀಲಿಸುವುದು ಇತ್ಯಾದಿ.

ಕೇಂದ್ರ ಅಥವಾ ರಾಜ್ಯ ಸರಕಾರಗಳಿಂದ ನೇರವಾಗಿ ಸ್ಥಾಪಿತವಾದ ಅಥವಾ ಮಾಲಿಕತ್ವ ಹೊಂದಿದ ಸಂಸ್ಥೆ ಅಥವಾ ಇಲಾಖೆ ಅಥವಾ ಪ್ರಾಧಿಕಾರಿಗಳಿಂದ (ಇವುಗಳನ್ನು ಸಾರ್ವಜನಿಕ ಪ್ರಾಧಿಕಾರಗಳೆನ್ನಬಹುದು) ಅಥವಾ ಕೇಂದ್ರ ಇಲ್ಲವೆ ರಾಜ್ಯ ಸರಕಾರಗಳಿಂದ ನೇರವಾಗಿ ಅಥವಾ ಪರೋಕ್ಷವಾಗಿ ಹಣಕಾಸು ನೆರವು ಪಡೆಯುತ್ತಿರುವ ಯಾವುದೇ ಸಂಸ್ಥೆಗಳಿಂದ ಮಾಹಿತಿ ಪಡೆಯಬಹುದು. ಈ ಮಾಹಿತಿ ಹಕ್ಕಿನಲ್ಲಿ ರಿಜಿಸ್ಟರ್ ಗಳು, ದಾಖಲೆ ಪತ್ರಗಳು, ಜ್ಞಾಪನಾ ಪತ್ರಗಳು, ಇ-ಮೇಲು ಸಂದೇಶಗಳು, ಪತ್ರಿಕಾ ಪ್ರಕಟಣೆಗಳು,

ಸುತ್ತೋಲೆಗಳು, ಆದೇಶಗಳು, ದಿನಚರಿ ಪುಸ್ತಕಗಳೂ ಒಪ್ಪಂದಗಳು, ವರದಿಗಳು, ಹಾಜರಾತಿ ಪುಸ್ತಕಗಳು, ಕಾಗದಗಳು, ವಿನ್ಯಾಸಗಳು ಅಥವಾ ಮಾದರಿಗಳು, ಅಭಿಪ್ರಾಯಗಳು ಅಥವಾ ಸಲಹೆಗಳು ಅಂದಾಜು ಪಟ್ಟಿಗಳು, ಕಾಮಗಾರಿ ವಿವರಗಳು, ಅಳತೆ ಪುಸ್ತಕಗಳು, ಟಿಪ್ಪಣಿಗಳೂ, ಪ್ಲಾಪಿ, ಟೇಪ್, ಆಡಿಯೋ ಮತ್ತು ವೀಡಿಯೋ ಕ್ಯಾಸೆಟ್ ಇತ್ಯಾದಿಯಾಗಿ ಇಲೆಕ್ಟ್ರಾನಿಕ್ ರೂಪದಲ್ಲಿ ಸಂಗ್ರಹಿಸಿದ ಮಾಹಿತಿ ಗಳನ್ನು ಪಡೆಯಬಹುದು.

**ಮಾಹಿತಿ ಪಡೆಯಲು ಶುಲ್ಕ**

- ಈ ಸೌಲಭ್ಯವನ್ನು ದುರುಪಯೋಗಪಡಿಸಿದಂತೆ ಕನಿಷ್ಟ ಶುಲ್ಕವನ್ನು ನಿಗಧಿ ಮಾಡಲಾಗಿದೆ.
- ಮಾಹಿತಿ ಕೋರಿ ಅರ್ಜಿ ಸಲ್ಲಿಸುವಾಗ ೧೦ ರೂ.ಗಳ ಶುಲ್ಕವನ್ನು ಪಾವತಿಸಬೇಕು.
- ಎ ೪ ಅಳತೆಯ ಪ್ರತಿ ಪುಟಕ್ಕೆ ರೂ.೨ ರಂತೆ ಶುಲ್ಕ ಪಾವತಿಸಬೇಕು.
- ನಕ್ಷೆ, ಯೋಜನೆ, ವರದಿ, ತಾಂತ್ರಿಕ ಮಾಹಿತಿ ಒದಗಿಸಲು ನಿಗಧಿಪಡಿಸಿದ ಶುಲ್ಕ ಪಾವತಿಸಬೇಕು. ಇದು ಆ ವಸ್ತುವಿನ ವಿನ್ಯಾಸದ ಬೆಲೆಯನ್ನು ಅವಲಂಬಿಸಿರುತ್ತದೆ.
- ದಾಖಲೆಗಳ ತಪಾಸಣೆಗೆ ಅರ್ಜಿ ಸಲ್ಲಿಸುವಾಗಲೂ ರೂ.೧೦ರ ಶುಲ್ಕ ಪಾವತಿಸಬೇಕು. ಮೊದಲ ಅರ್ಧ ಗಂಟೆ ಅವಧಿಗೆ ಹೆಚ್ಚುವರಿ ಶುಲ್ಕ ಪಾವತಿಸಬೇಕಾಗಿಲ್ಲ. ನಂತರದ ಪ್ರತಿ ಅರ್ಧ ಗಂಟೆಗೆ ರೂ.೨೦ ರಂತೆ ಹೆಚ್ಚುವರಿ ಶುಲ್ಕ ಪಾವತಿಸಬೇಕು.
- ಕಾಮಗಾರಿಗೆ ಬಳಸಲಾಗುವ ಸಾಮಗ್ರಿಗಳ ಕುರಿತು ಮಾಹಿತಿ ಪಡೆಯಲು ಅರ್ಜಿ ಸಲ್ಲಿಸುವಾಗ ರೂ.೧೦ ರಂತೆ ಶುಲ್ಕ ಪಾವತಿಸಬೇಕು. ಈ ಸಾಮಗ್ರಿಗಳ ಮಾದರಿ(ಸ್ಯಾಂಪಲ್) ಪಡೆಯಲು ವಿಧಿಸಲಾಗುವ ಶುಲ್ಕವು ಆ ವಸ್ತುಗಳ ಮೌಲ್ಯವನ್ನು ಅವಲಂಬಿಸಿರುತ್ತದೆ.
- ಮಾಹಿತಿಯುನ್ನು ಪ್ಲಾಪಿ, ಡಿಸ್ಕ್ (ಸಿಡಿ) ಅಥವಾ ಇನ್ನಾವುದೇ ಇಲೆಕ್ಟ್ರಾನಿಕ್ ಮಾಧ್ಯಮಗಳ ಮೂಲಕ ಪಡೆಯಲು ೫೦ ರೂ.ಗಳನ್ನು ಪಾವತಿಸಬೇಕು.
- ಬಡತನದ ರೇಖೆಗಿಂತ ಕೆಳಗಿರುವ ವ್ಯಕ್ತಿಗಳು ಯಾವುದೇ ಶುಲ್ಕ ಪಾವತಿಸಬೇಕಾಗಿಲ್ಲ.
- ಅವರು ಅರ್ಜಿ ಸಲ್ಲಿಸುವಾಗ ತಾವು ಬಡತನ ರೇಖೆಗಿಂತ ಕೆಳಗಿರುವವರೆಂದು ತೋರಿಸುವ ಕಾನೂನುಬದ್ಧ ದಾಖಲೆಯನ್ನು ಹಾಜರುಪಡಿಸಬೇಕು.

**ಅರ್ಜಿ ಸಲ್ಲಿಸುವ ವಿಧಾನ**

- ಅರ್ಜಿಯನ್ನು ನಮೂನೆ ಎ ಯಲ್ಲಿ ಅಥವಾ ಯಾವುದೇ ನಮೂನೆಯಲ್ಲಿ ಮಾಹಿತಿ ಅಧಿಕಾರಿಗೆ ಸಲ್ಲಿಸಬೇಕು.

- ಅರ್ಜಿಯನ್ನು ಹೆಸರು, ಸಂಪರ್ಕಿಸಲು ಬೇಕಾದ ವಿಳಾಸ, ಕೋರುವ ಮಾಹಿತಿಗಳ ಮಾಹಿತಿಗಳ ವಿವರ ಇದ್ದರೆ ಸಾಕು.
- ಮಾಹಿತಿ ಕೋರಲು ಕಾರಣ ಮತ್ತು ಇತರ ವೈಯಕ್ತಿಕ ವಿವರಗಳನ್ನು ನೀಡಬೇಕಾಗಿಲ್ಲ.
- ಅರ್ಜಿಯ ಜೊತೆಗೆ ನಿಗಧಿತ ಶುಲ್ಕವನ್ನು ಪೋಸ್ಟಲ್ ಆರ್ಡರ್ , ಚೆಕ್ ಅಥವಾ ಪೇ ಆರ್ಡರ್ ಮೂಲಕ ಪಾವತಿಸಬೇಕು.
- ಅರ್ಜಿದಾರ ಅನಕ್ಷರಸ್ಥರಾಗಿದ್ದು ಅಥವಾ ಮೌಖಿಕವಾಗಿ ಕೋರಿದಲ್ಲಿ ಪ್ರಾಧಿಕಾರವೇ ಅರ್ಜಿ ಬರೆಯಬೇಕು.

**ಮಾಹಿತಿ ಒದಗಿಸುವ ವಿಧಾನ**

- ಮಾಹಿತಿಯನ್ನು ಪ್ರಾದೇಶಿಕ ಭಾಷೆಯಲ್ಲಿ ಒದಗಿಸಬೇಕು.
- ಅರ್ಜಿಸ್ವೀಕರಿಸಿದ ೩೦ ದಿನಗಳ ಒಳಗಾಗಿ ಮಾಹಿತಿ ಒದಗಿಸಬೇಕು.
- ತನ್ನ ಬಳಿ ಮಾಹಿತಿ ಇಲ್ಲದಿದ್ದರೆ ಸಾರ್ವಜನಿಕ ಮಾಹಿತಿ ಅಧಿಕಾರಿಯು ಐದು ದಿನಗಳ ಒಳಗಾಗಿ ಸಂಬಂಧಿಸಿದ ಮಾಹಿತಿ ಇರುವ ಮಾಹಿತಿ ಅಧಿಕಾರಿಗೆ ಅರ್ಜಿಯನ್ನು ರವಾನಿಸಬೇಕು ಮತ್ತು ಆ ಕುರಿತು ಅರ್ಜಿದಾರರಿಗೆ ಸೂಚನೆ ನೀಡಬೇಕು.
- ವ್ಯಕ್ತಿಯ ಜೀವ ಅಥವಾ ಸ್ವಾತಂತ್ರ್ಯಕ್ಕೆ ದಕ್ಕೆ ತರಬಹುದಾದ ವಿಷಯಗಳಿಗೆ ಸಂಬಂಧಿಸಿದಂತೆ ೪೮ ಗಂಟೆಗಳ ಒಳಗಾಗಿ ಮಾಹಿತಿ ನೀಡಬೇಕು.
- ಮಾಹಿತಿ ನೀಡಲು ನಿರಾಕರಿಸಿದಲ್ಲಿ ಅದಕ್ಕೆ ಕಾರಣಗಳನ್ನು ನೀಡಬೇಕು ಮತ್ತು ಎಲ್ಲಿ ಮೇಲ್ಮನವಿ ಸಲ್ಲಿಸಬೇಕು ಮತ್ತು ಎಷ್ಟು ದಿನಗಳೊಳಗೆ ಸಲ್ಲಿಸಬೇಕು ಎಂಬುದನ್ನು ಸ್ಪಷ್ಟವಾಗಿ ತಿಳಿಸಬೇಕು.

**ಮೊದಲ ಹಂತದಲ್ಲಿ ಮಾಹಿತಿ ದೊರೆಯದಿದ್ದರೆ ಕೈಗೊಳ್ಳಬೇಕಾದ ಕ್ರಮಗಳು**

- ಸಾರ್ವಜನಿಕ ಮಾಹಿತಿ ಅಧಿಕಾರಿಯು ಅರ್ಜಿ ಸ್ವೀಕರಿಸಲು ನಿರಾಕರಿಸಿದರೆ, ನಿಗಧಿತ ಅವಧಿಯೊಳಗೆ ಮಾಹಿತಿ ನೀಡದಿದ್ದರೆ, ನೀಡಿದ ಮಾಹಿತಿ ತಪ್ಪಾಗಿದ್ದರೆ, ಸಂಪೂರ್ಣವಾಗಿ ಇಲ್ಲದಿದ್ದರೆ ಅರ್ಜಿದಾರರು ಮೇಲ್ಮನವಿ ಸಲ್ಲಿಸಬಹುದು.
- ಅರ್ಜಿದಾರರು ಮಾಹಿತಿ ಪಡೆದ ಅಥವಾ ಮಾಹಿತಿ ನಿರಾಕರಿಸಲಾದ ೩೦ ದಿನಗಲ ಒಳಗಾಗಿ ಮೊದಲನೇ ಮೇಲ್ಮನವಿ ಪ್ರಾಧಿಕಾರಕ್ಕೆ ಮೇಲ್ಮನವಿ ಸಲ್ಲಿಸಬಹುದು.
- ಮೊದಲನೇ ಮೇಲ್ಮನವಿ ಪ್ರಾಧಿಕಾರವು ಇಲಾಖೆಗಳಿಗೆ ಸಂಬಂಧಿಸಿದ್ದು, ನಿಗಧಿತ ಅವಧಿಯೊಳಗೆ (೩೦-೪೫ ದಿನಗಳು) ಮಾಹಿತಿ ನೀಡಬೇಕು. ಇಲ್ಲಿಯೂ ಮಾಹಿತಿ ನೀಡದಿದ್ದರೆ.

ಮೊದಲನೆಯ ಮೇಲ್ಮನವಿ ಪ್ರಾಧಿಕಾರವು ಮಾಹಿತಿ ನಿರಾಕರಿಸಿದರೆ, ನಿಗಧಿತ ಅವಧಿಯೊಳಗೆ ಮಾಹಿತಿ ನೀಡದಿದ್ದರೆ, ನೀಡಿದ ಮಾಹಿತಿ ತಪ್ಪಾಗಿದಲ್ಲಿ ಅಥವಾ ಸಂಪೂರ್ಣವಾಗಿ ಇಲ್ಲದಿದ್ದಲ್ಲಿ ಎರಡನೇ ಮೇಲ್ಮನವಿ ಸಲ್ಲಿಸಬಹುದು. ಕೇಂದ್ರ ಮಾಹಿತಿ ಆಯೋಗ ಮತ್ತು ರಾಜ್ಯ ಮಾಹಿತಿ ಆಯೋಗಗಳು ಎರಡನೇ ಮೇಲ್ಮನವಿ ಪ್ರಾಧಿಕಾರಗಳಾಗಿರುತ್ತದೆ. ಇವು ಚುನಾವಣಾ ಆಯೋಗದಂತೆ ಶಾಸನಾತ್ಮಕ ಸ್ಥಾನಮಾನ ಹೊಂದಿದ್ದು, ವಿಚಾರಣೆ ಹಾಗೂ ದಂಡನೆಯ ಅಧಿಕಾರ ಹೊಂದಿರುತ್ತವೆ. ಅರ್ಜಿದಾರರು ಮೊದಲನೆಯ ಮೇಲ್ಮನವಿ ಪ್ರಾಧಿಕಾರವು ಮಾಹಿತಿ ನಿರಾಕರಿಸಿದ ಅಥವಾ ಅಸಮರ್ಪಕ ಮಾಹಿತಿ ನೀಡಿದ ದಿನದಿಂದ ೯೦ ದಿನಗಳ ಒಳಗಾಗಿ ಎರಡನೇ ಮೇಲ್ಮನವಿ ಪ್ರಾಧಿಕಾರಗಳಾದ ಕೇಂದ್ರ ಅಥವಾ ರಾಜ್ಯ ಮಾಹಿತಿ ಆಯೋಗಗಳಿಗೆ ಸಂದರ್ಭಕ್ಕೆ ಅನುಸಾರವಾಗಿ ಮೇಲ್ಮನವಿ ಸಲ್ಲಿಸಬಹುದು. ಮೇಲ್ಮನವಿ ಸಲ್ಲಿಸಲು ವಿಳಂಬವಾದ ಸಂದರ್ಭದಲ್ಲಿ ಅರ್ಜಿದಾರರು ಅದಕ್ಕೆ ಸೂಕ್ತವಾದ ಕಾರಣಗಳನ್ನು ನೀಡಿದಲ್ಲಿ ಮಾಹಿತಿ ಆಯೋಗವು ಮೇಲ್ಮನವಿಯನ್ನು ಸ್ವೀಕರಿಸಬಹುದು. ಮಾಹಿತಿ ಆಯೋಗವು ೩೦ ದಿನಗಳ ಒಳಗಾಗಿ ಮೇಲ್ಮನವಿಯನ್ನು ಇತ್ಯಾರ್ಥ ಮಾಡಬೇಕು. ಇದನ್ನು ಅನಿವಾರ್ಯ ಸಂದರ್ಭಗಳಲ್ಲಿ ೪೫ ದಿನಗಳಿಗೆ ವಿಸ್ತರಿಸಬಹುದು.

**ಮಾಹಿತಿ ನೀಡದಿದ್ದರೆ ದಂಡ ವಿಧಿಸುವ ಕ್ರಮಗಳು**

- ಮಾಹಿತಿ ನೀಡದಿದ್ದರೆ ತಪ್ಪಿತಸ್ಥ ಅಧಿಕಾರಿಗೆ ದಿನವೊಂದಕ್ಕೆ ರೂ.೨೫೦ ರಂತೆ ದಂಡ ವಿಧಿಸಬಹುದು.
- ಇದು ಗರಿಷ್ಠ ರೂ. ೨೫,೦೦೦ ದವರೆಗೂ ಹೋಗಬಹುದು.
- ದಂಡವನ್ನು ಅಧಿಕಾರಿಯ ಸಂಬಳದಿಂದ ಮುರಿದು ಕೊಳ್ಳುವಂತೆ ಸೂಚಿಸಬಹುದು.
- ಮಾಹಿತಿ ವಿಳಂಬದಿಂದ ಅರ್ಜಿದಾರನಿಗೆ ಆದ ಹಾನಿ ಮತ್ತು ನಷ್ಟಕ್ಕೆ ಪರಿಹಾರ ನೀಡುವಂತೆ ಸೂಚಿಸಬಹುದು.
- ಮಾಹಿತಿ ವಿಳಂಬದಿಂದ ಅರ್ಜಿದಾರನಿಗೆ ಆದ ಹಾನಿ ಮತ್ತು ನಷ್ಟಕ್ಕೆ ಪರಿಹಾರ ನೀಡುವಂತೆ ಸೂಚಿಸಬಹುದು.
- ಸೇವಾ ನಿಯಮದಂತೆ ಸೂಕ್ತ ಶಿಸ್ತು ಕ್ರಮ ಕೈಗೊಳ್ಳುವಂತೆ ಸೂಚಿಸಬಹುದು.

ಈ ಎಲ್ಲಾ ಕ್ರಮಗಳನ್ನು ಸಂದರ್ಭಕ್ಕೆ ತಕ್ಕಂತೆ ಕೇಂದ್ರ ಅಥವಾ ರಾಜ್ಯ ಮಾಹಿತಿ ಆಯೋಗವು ದಂಡ ವಿಧಿಸುತ್ತದೆ. ಅಥವಾ ದಂಡ ವಿಧಿಸುವ ಮೊದಲು ಆಯೋಗವು ಸಂಬಂಧಿಸಿದ ಅಧಿಕಾರಿಯು ಸೂಕ್ತ ಅಹವಾಲನ್ನು ಸಲ್ಲಿಸಲು ಕಾಲಾವಕಾಶ ನೀಡಿ ಪರಿಶೀಲನೆ ನಡೆಸುತ್ತದೆ.

## ಉದ್ಯೋಗ ಖಾತರಿ ಕಾಯಿದೆಯ ಸಂದರ್ಭದಲ್ಲಿ ಮಾಹಿತಿ ಹಕ್ಕು

ಉದ್ಯೋಗ ಖಾತರಿ ಕಾಯಿದೆಯ ಸಂದರ್ಭದಲ್ಲಿ ಮಾಹಿತಿ ಹಕ್ಕು ಕಾಯಿದೆಯನ್ನು ಈ ಕೆಳಗಿನ ಉದ್ದೇಶಗಳಿಗೆ ಬಳಸಿಕೊಳ್ಳುಬಹುದು.

- ಸರ್ಕಾರದ ಕಾರ್ಯಕ್ರಮ ನಿಯಮಕ್ಕೆ ಅನುಸಾರವಾಗಿ ಸಮರ್ಪಕವಾಗಿ ನಡೆಯುವಂತೆ ನೋಡಿಕೊಳ್ಳಲು.
- ಜನರ ಹಣ ಜನರಿಗಾಗಿಯೇ ಖರ್ಚಾಗುವಂತೆ ನೋಡಿಕೊಳ್ಳಲು.
- ಹಣದ ಮತ್ತು ಅಧಿಕಾರದ ದುರುಪಯೋಗ ಆಗದಂತೆ ನೋಡಿಕೊಳ್ಳಲು.
- ಸರ್ಕಾರ ಮತ್ತು ಅನುಷ್ಠಾನ ಸಂಸ್ಥೆಗಳ ಹೊಣೆಗಾರಿಕೆಯನ್ನು ಖಾತರಿಪಡಿಸಲು.
- ಸರ್ಕಾರದ ಕೆಲಸ ಕಾರ್ಯಗಳಲ್ಲಿ ಪಾರದರ್ಶಕತೆ ತರಲು.
- ಸರ್ಕಾರದ ಕಾರ್ಯಕ್ರಮಗಳಲ್ಲಿ ಜನರ ಸಹಭಾಗಿತ್ವವನ್ನು ಖಾತರಿಪಡಿಸಲು.
- ನಮ್ಮ ಹಕ್ಕುಗಳನ್ನು ರಕ್ಷಿಸಿ, ಕರ್ತವ್ಯಗಳನ್ನು ನಿರ್ವಹಿಸಲು.

## ಉದ್ಯೋಗ ಖಾತರಿ ಕಾಯಿದೆಯಲ್ಲಿ ಇದು ಕಡ್ಡಾಯ

ಉದ್ಯೋಗ ಖಾತರಿ ಕಾಯಿದೆಯ ಸಂದರ್ಭದಲ್ಲಿ ಈ ಕೆಳಗಿನ ಮಾಹಿತಿಗಳನ್ನು ಬಹಿರಂಗಪಡಿಸುವುದು ಕಡ್ಡಾಯ.

- ಉದ್ಯೋಗಕ್ಕಾಗಿ ಅರ್ಜಿ ಸಲ್ಲಿಸಿದವರ ಪಟ್ಟಿ.
- ಉದ್ಯೋಗ ಚೀಟಿ ವಿತರಿಸಲಾದವರ ಪಟ್ಟಿ.
- ಉದ್ಯೋಗ ಚೀಟಿ ನಿರಾಕರಿಸಲಾದವರ ಪಟ್ಟಿ.
- ಉದ್ಯೋಗಕ್ಕಾಗಿ ಹೆಸರು ನೊಂದಾಯಿಸಲಾರದವರ ಪಟ್ಟಿ.
- ಯೋಜನಾಧಿಕಾರಿಗಳಿಗೆ ರವಾನಿಸಲಾದ ಉದ್ಯೋಗಾಕಾಂಕ್ಷಿಗಳ ಪಟ್ಟಿ.
- ಕಾಮಗಾರಿ ಆರಂಭವಾದ ದಿನಾಂಕ, ಸ್ಥಳ, ಕೆಲಸ ಮಾಡುತ್ತಿರುವ ಕೂಲಿಗಾರರ ಹೆಸರು.
- ವಿವಿಧ ಅನುಷ್ಠಾನ ಸಂಸ್ಥೆಗಳಿಗೆ(ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ ಹಾಗೂ ಇತರ ಇಲಾಖೆಗಳು) ವಹಿಸಲಾದ ಕಾಮಗಾರಿಗಳ ವಿವರ.
- ವಿವಿಧ ಅನುಷ್ಠಾನ ಸಂಸ್ಥೆಗಳು ನಿರ್ವಹಿಸುತ್ತಿರುವ ಕಾಮಗಾರಿಗಳ ವಿವರ.
- ಗ್ರಾಮ ಸಭೆಯ ದಿನಾಂಕ ಮತ್ತು ವಿವರ.

- ಕೂಲಿದರ ಹಾಗೂ ದರ ನಿಗಧಿ ವಿವರ
- ಕೆಲಸಕ್ಕೆ ಹಾಜರಾಗದ ಕೂಲಿಕಾರರ ಪಟ್ಟಿ
- ನಿರುದ್ಯೋಗ ಭತ್ಯೆಗೆ ಅರ್ಹರಾದ ಕೂಲಿಕಾರರ ಪಟ್ಟಿ
- ನಿರುದ್ಯೋಗ ಭತ್ಯೆ ಪಾವತಿಸಲಾದ ಕೂಲಿಕಾರರ ಪಟ್ಟಿ
- ಸಾಮಾಜಿಕ ತಪಾಸಣೆ ವರದಿಯ ಪ್ರತಿ.
- ಆರ್ಥಿಕ ಮಾಹಿತಿ : ಪಡೆದ ಅನುಧಾನ, ವೆಚ್ಚದ ವಿವರ, ಉಳಿಕೆ ಮೊತ್ತ

(ಮೇಲಿನ ಮಾಹಿತಿಯನ್ನು ಪ್ರತಿ ತಿಂಗಳು ಪರಿಷ್ಕರಿಸಿ ಪ್ರಕಟಿಸಬೇಕು)

**ಹಕ್ಕೋತ್ತಾಯದ ಮೂಲಕ ಪಡೆಯಬಹುದಾದ ಮಾಹಿತಿ**

ಮಾಹಿತಿ ಹಕ್ಕು ಕಾಯಿದೆ ಬಳಸಿ ಹಕ್ಕೊತ್ತಾಯದಿಂದ ಪಡೆಯಬಹುದಾದ ಮಾಹಿತಿಗಳು ಈ ಕೆಳಗಿನಂತಿವೆ.

- ವಾಸ್ತವ ಹಾಜರಾತಿ ಪುಸ್ತಕ ಅಥವಾ ಪಟ್ಟಿಯ ಪ್ರತಿ.
- ಖರೀದಿಗೆ ಸಂಬಂಧಿಸಿದ ರಶೀದಿಗಳು, ಬಿಲ್ಲುಗಳು ಮತ್ತು ಸ್ವೀಕೃತಿಗಳ ಪ್ರತಿಗಳು.
- ಅಳತೆ ಪುಸ್ತಕದ ಪ್ರತಿ.
- ಮಂಜೂರಾತಿ ಆದೇಶದ ಪ್ರತಿ
- ಇಂಜಿನಿಯರಿಂಗ್ ವಿನ್ಯಾಸದ ಪ್ರತಿ
- ಸೃಷ್ಟಿಸಿದ ಆಸ್ತಿ ದಾಖಲೆಗಳ ಪ್ರತಿಗಳು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯು ಈ ಎಲ್ಲಾ ನಿಯಮಾವಳಿಗಳನ್ನು ಹೊಂದಿದೆ. ಈ ಯೋಜನೆಯಲ್ಲಿ ಗ್ರಾಮೀಣ ಪ್ರದೇಶದ ಜನರು ತಮ್ಮ ಜೀವನ ಮಟ್ಟವನ್ನು ಸುಧಾರಿಸಿ ಕೊಳ್ಳುವ ಎಲ್ಲಾ ಅವಕಾಶಗಳನ್ನು ಒದಗಿಸಿಕೊಟ್ಟಿದೆ. ಆದರೆ ಈ ಎಲ್ಲಾ ನಿಯಮಗಳು ಇಂದು ಸರಿಯಾಗಿ ಪಾಲಿತವಾಗುತ್ತಿಲ್ಲ ಎಂಬುದು ಒಂದು ವಿಪರ್ಯಾಸದ ಸಂಗತಿಯಾಗಿದೆ.

## ೫.೬. ಉದ್ಯೋಗ ಖಾತ್ರಿ ಯೋಜನೆ : ಮಹಿಳೆ

ಈ ಯೋಜನೆಯು ಒಂದು ಕಾಯಿದೆಯಾಗಿ ಜಾರಿಗೆ ಬಂದರೂ ಸಹ ಗ್ರಾಮೀಣ ಮಟ್ಟದಲ್ಲಿ ಈ ಯೋಜನೆಯು ಸಮರ್ಪಕವಾಗಿ ಜಾರಿಗೆ ಬರುತ್ತಿಲ್ಲ. ಈ ಯೋಜನೆಯಲ್ಲಿ ಲಿಂಗ ಅಸಮಾನತೆಯ

ಅಂಶಗಳು ಹೆಚ್ಚಾಗಿದ್ದು ಇದರಿಂದ ಮಹಿಳೆಯರಿಗೆ ಅನುಕೂಲಕ್ಕಿಂತ ಅನಾನುಕೂಲಗಳೇ ಹೆಚ್ಚಾಗಿವೆ. ಏಕೆಂದರೆ ಮಹಿಳೆ ಮತ್ತು ಅಭಿವೃದ್ಧಿಯ ನಡುವಿನ ಸಂಬಂಧಗಳು ತುಂಬಾ ಸಂಕೀರ್ಣವಾಗಿದೆ. ಅಭಿವೃದ್ಧಿಯ ಈ ಯೋಜನೆಗಳು ಲಿಂಗ ನಿರಪೇಕ್ಷ ಎಂದು ಹೇಳಲಾಗಿದೆ. ಆದರೆ ಇಂದು ಲಿಂಗ ನಿರ್ದಿಷ್ಟವೂ, ಲಿಂಗ ಸಂವೇದಿಯೂ ಆದ ಅಭಿವೃದ್ಧಿ ಸಿದ್ಧಾಂತಗಳು ರೂಪುಗೊಳ್ಳುತ್ತಿವೆ. ಪುರುಷಶಾಹಿ ಸ್ವರೂಪದಿಂದ ಕೂಡಿರುವ ಸಮಾಜದಲ್ಲಿ ಎಲ್ಲವೂ ಪುರುಷಮಯವಾಗಿರುತ್ತದೆ. ಈ ಯೋಜನೆಯು ಮಹಿಳೆಯರನ್ನು ಕುರಿತಂತೆ ಕಲ್ಯಾಣವಾದಿ ಧೋರಣೆಯನ್ನು ತಾಳಿದೆ. ಏಕೆಂದರೆ ಭಾರತದಲ್ಲಿನ ಈ ಯೋಜನೆಯು ಮಧ್ಯಮ ವರ್ಗದ ಜನಸಮೂಹವನ್ನು ಗಮನದಲ್ಲಿಟ್ಟುಕೊಂಡು ರೂಪುಗೊಂಡಿವೆ. ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರನ್ನು ಕುಟುಂಬದ ನೆಲೆಯಿಂದ ಕೇವಲ ಗೃಹಿಣಿಯಾಗಿ ಗೃಹಲಕ್ಷ್ಮಿಯಾಗಿ ಮಾತ್ರ ಪರಿಭಾವಿಸಿಕೊಂಡಿವೆ. ಹಾಗಾಗಿ ಮಹಿಳೆಯ ಅಭಿವೃದ್ಧಿಗೆ ಇಂದಿನ ಯೋಜನೆಗಳಲ್ಲಿ ಯಾವುದೇ ಒತ್ತು ಕೊಡುವುದು ಕಂಡುಬರುವುದಿಲ್ಲ. ಈ ಯೋಜನೆ ಕಲ್ಯಾಣ ವಾದಿ ಧೋರಣೆ ತಳೆಯಲು ಇನ್ನೊಂದು ಪ್ರಬಲ ಕಾರಣವೆಂದರೆ ಅಭಿವೃದ್ಧಿ ಯೋಜನೆಗಳು ಭಾರತದಲ್ಲಿ ಸುಧಾರಣಾವಾದಿಯಾಗಿ ದ್ದಾವೆಯೇ ವಿನಾಃ ಸಂಘರ್ಷವಾದಿಯಾಗಿಲ್ಲ. "೧೯೫೦ರಲ್ಲಿ ವಿದ್ಯಾರ್ಥಿನಿಯರನ್ನು ಸಂಬೋಧಿಸುತ್ತಾ ನೆಹರೂ ಅವರು ಮಹಿಳೆಯರ ಪ್ರಧಾನ ಜವಾಬ್ದಾರಿಯೆಂದರೆ ಕುಟುಂಬವನ್ನು ಸಮರ್ಥವಾಗಿ ಸಂಭಾಳಿಸಿಕೊಂಡು ಹೋಗುವುದು." ಎಂದು ಕರೆ ನೀಡಿದ್ದರು (ಚಂದ್ರಶೇಖರ್ ಟಿ.ಆರ್., ಪು.೧೮೩) ಹಾಗಾಗಿ ಭಾರತದಲ್ಲಿ ಅಭಿವೃದ್ಧಿ ಕಾಯಕ್ರಮಗಳು ಮಹಿಳೆಯರನ್ನು ಅಭಿವೃದ್ಧಿಯ ನಿಯೋಗಿಗಳೆಂದು ಒಪ್ಪುವುದು ಸಾಧ್ಯವಿರಲಿಲ್ಲ. ಹಾಗೂ ಅವರು ದುಡಿಮೆಗಾರರು ಎಂಬುದನ್ನು ಅವು ಒಪ್ಪಲು ಸಿದ್ದವಿರಲಿಲ್ಲ. ಹಾಗಾಗಿ ಯೋಜನೆಗಳು ಲಿಂಗ ಪಕ್ಷಪಾತವನ್ನು ಅನುಸರಿಸಿಕೊಂಡೇ ಬಂದವು. ಇದಕ್ಕೆ ಮಹಿಳೆಯೇ ಬಲಿಯಾಗಬೇಕಾಯಿತು.

ಈ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯ ಮಹಿಳೆಯರಿಗೆ ಒಂದು ಶಾಪವಾಗಿ ಪರಿಣಮಿಸಿದೆ. ಏಕೆಂದರೆ ಇಂದು ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರು ತುಂಬಾ ಅನಕ್ಷರಸ್ಥರಾಗಿದ್ದು ತುಂಬಾ ಹಿಂದುಳಿದವರಾಗಿದ್ದಾರೆ. ಮತ್ತು ತಮ್ಮ ಕುಟುಂಬದಲ್ಲಿನ ಹಿರಿಯ ಸದಸ್ಯನ ಅಧೀನದಲ್ಲಿಯೇ ಜೀವನವನ್ನು ಸಾಗಿಸುತ್ತಿರುತ್ತಾಳೆ. ಇಲ್ಲಿ ಪುರುಷನು ಏನು ಹೇಳುತ್ತಾನೋ ಅದನ್ನು ಕೇಳಿಕೊಂಡು ಹೋಗಬೇಕು ಅಷ್ಟೇ ಮತ್ತು ಅನೇಕ ರೂಢಿ ಸಂಪ್ರದಾಯಗಳು, ಧರ್ಮದ ಆಚರಣೆಗಳು ಮಹಿಳೆಯನ್ನು ಸಮಾಜಮುಖಿಗೆ ಬರದಂತೆ ತಡೆಗಟ್ಟಿವೆ. ಹಾಗಾಗಿ ಮಹಿಳೆ ಸರಕಾರದಿಂದ ಬಂದಂತಹ ಯಾವುದೇ ಯೋಜನೆಯ ಬಗ್ಗೆಯಾಗಲೀ ತಿಳಿದುಕೊಳ್ಳುವುದು ತುಂಬಾ ಕಷ್ಟಕರ ಸಂಗತಿಯಾಗಿದೆ. ಅಂತಹ ಸಂದರ್ಭದಲ್ಲಿ ಪುರುಷನು ಏನು ಹೇಳುತ್ತಾನೋ ಅದೇ ವೇದ ವಾಕ್ಯವಾಗಿರುತ್ತದೆ. ಹಾಗಾಗಿ ಮಹಿಳೆಯು ಈ ಯೋಜನೆಯಿಂದ ಯಾವುದೇ ಲಾಭವನ್ನು ಪಡೆದಿಲ್ಲ, ಹೆಚ್ಚಾಗಿ ಕಷ್ಟಗಳನ್ನೇ ಅನುಭವಿಸುತ್ತಿದ್ದಾಳೆ

ಎಂದು ಹೇಳಬಹುದು. ಇಲ್ಲಿನ ಸಮಾಜದಲ್ಲಿ ವರ್ಗಗಳು, ಜಾತಿಗಳು ಹೆಚ್ಚು ಹೆಚ್ಚು ಕಂಡುಬರುತ್ತದೆ. ಉನ್ನತ ವರ್ಗದ ಮಹಿಳೆಯರು ಈ ಯೋಜನೆಯ ಲಾಭವನ್ನು ಮನೆಯಲ್ಲಿಯೇ ಕುಳಿತು ಪಡೆಯುತ್ತಾರೆ. ಆದರೆ ಇವರು ಮನೆಯ ಕೆಲಸಗಳಿಂದ ಮುಕ್ತಿ ಎಂಬುದು ಅಥವಾ ಬಿಡುವು ಎಂಬುದು ಇರುವುದಿಲ್ಲ. ಮತ್ತು ಕೆಳವರ್ಗದ ಮಹಿಳೆಯರು ಈ ಯೋಜನೆಯ ಸಂಪೂರ್ಣ ಲಾಭವನ್ನು ಪಡೆಯದೇ ಇದ್ದರೂ ಸಹ ಮನೆಯಿಂದ ಹೊರಬರುವ ಸ್ವಾತಂತ್ರ್ಯವನ್ನು ಹೊಂದಿರುತ್ತಾರೆ. ಆದರೆ ಇವರೂ ಸಹ ದುಡಿಮೆಯಿಂದ ಬಿಡುಗಡೆ ಹೊಂದಿರುವುದಿಲ್ಲ. ಹಾಗಾಗಿ ಮಹಿಳೆಯೂ ಪರಾವಲಂಬಿಯಾಗಿಯೇ ಜೀವನ ಸಾಗಿಸುವಂತಹ ಪರಿಸ್ಥಿತಿಗಳು ಹಳ್ಳಿಗಳಲ್ಲಿರುವುದು ಕಂಡುಬರುತ್ತದೆ. ಇನ್ನು ಹಳ್ಳಿಗಳಲ್ಲಿ ಸ್ತ್ರೀ ಶಕ್ತಿ ಸಂಘಗಳು ಅಥವಾ ಮಹಿಳಾ ಸಂಘಗಳಿದ್ದರೂ ಸಹ ಈ ಯೋಜನೆಯ ಬಗ್ಗೆ ಪ್ರಶ್ನಿಸುವಂತಹ ಕೆಲಸಕ್ಕೆ ಕೈ ಹಾಕುವುದಿಲ್ಲ. ಏಕೆಂದರೆ ಇವುಗಳು ಸಹ ಪುರುಷ ಪ್ರಧಾನ ವ್ಯವಸ್ಥೆಗೆ ಒಳಪಟ್ಟಿರುತ್ತವೆ.

ಒಟ್ಟಿನಲ್ಲಿ ಈ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯು ಸಂಪೂರ್ಣವಾಗಿ ಪುರುಷ ಪ್ರಧಾನ ಧೋರಣೆಗಳನ್ನು ತಳೆದಿದ್ದು ಮಹಿಳೆಯನ್ನು ಉದಾರವಾದಿ ನೆಲೆಯಲ್ಲಿ ನೋಡಿರುವುದು ಕಂಡುಬರುತ್ತದೆ. ಹಾಗಾಗಿ ಈ ಯೋಜನೆಯಿಂದ ಮಹಿಳೆಯರಿಗೆ ಯಾವುದೇ ಹೆಚ್ಚಿನ ಪ್ರಯೋಜನಗಳು ದೊರೆತಿರುವುದಿಲ್ಲ ಎಂಬುದು ಕ್ಷೇತ್ರಕಾರ್ಯದ ಅವಲೋಕನದಿಂದ ತಿಳಿದುಬಂದಿದೆ.

೬

# ಉದ್ಯೋಗ ಖಾತ್ರಿ ಯೋಜನೆಗೆ ಸಂಬಂಧಿದ ಪ್ರಕರಣ ಪರಿಶೀಲನೆ

ಸಂಶೋಧನೆಯಲ್ಲಿ ಪ್ರಕರಣ ಅಧ್ಯಯನ ಬಹಳ ಪ್ರಮುಖ ಪಾತ್ರವಹಿಸುತ್ತದೆ. ಪ್ರಕರಣಗಳನ್ನು ಅಧ್ಯಯನ ಮಾಡುವುದರಿಂದ ನೈಜ ಸಂಗತಿಗಳು ಗೋಚರಿಸುತ್ತವೆ. ಭಾರತ ಸರ್ಕಾರ ಗ್ರಾಮೀಣ ಭಾಗದ ಜನರನ್ನು ಅಭಿವೃದ್ಧಿ ಪಡಿಸಲು ಅನೇಕ ಯೋಜನೆಗಳನ್ನು ಜಾರಿಗೆ ತಂದಿದೆ. ಆದರೆ ಅವುಗಳೆಲ್ಲವೂ ಸಹ ವಿಫಲತೆಯನ್ನು ಅನುಭವಿಸಿವೆ. ಈ ವಿಫಲತೆ ಎಲ್ಲಿ ಹೇಗೆ ಕಂಡುಬರುತ್ತದೆ ಎಂಬುದನ್ನು ತಿಳಿಯಬೇಕಾದುದು ಬಹಳ ಮುಖ್ಯ. ಹಾಗಾಗಿ ಪ್ರಕರಣಗಳನ್ನು ಅಧ್ಯಯನ ಮಾಡುವುದರಿಂದ ಯೋಜನೆಯ ವಾಸ್ತವ ಸ್ಥಿತಿ ತಿಳಿಯುತ್ತದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯಿದೆಯು ಜಾರಿಗೆ ಬಂದು ಹಲವಾರು ವರ್ಷಗಳು ಕಳೆದರೂ ಸಹ ಈ ಯೋಜನೆಯು ಸಮರ್ಪಕ ರೀತಿಯಲ್ಲಿ ನಡೆಯುತ್ತಿಲ್ಲದಿರುವುದು ವಾಸ್ತವ ಸತ್ಯ. ಹಾಗಾಗಿ ನನ್ನ ಅಧ್ಯಯನ ಕ್ಷೇತ್ರವಾದ ಮಾನ್ವಿ ತಾಲೂಕಿನ ಅತ್ತನೂರು ಮತ್ತು ಗುಣದಿನ್ನಿ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಈ ಯೋಜನೆಯ ಕಾಮಗಾರಿಗಳು ಅನುಷ್ಠಾನದಲ್ಲಿದ್ದು, ಅವು ಯಾವುವೂ ಪರಿಪೂರ್ಣತೆಯನ್ನು ಸಾಧಿಸಿಲ್ಲ. ಇದಕ್ಕೆ ಕಾರಣ ಏನು ಎಂಬುದನ್ನು ತಿಳಿಯ ಹೊರಟಾಗ ಜನರು ತಮ್ಮ ತಮ್ಮ ಅನುಭವಗಳನ್ನು ಹೇಳಿಕೊಂಡರು. ಅಂತಹ ಅನುಭವಗಳನ್ನು ಕೆಲವು ಪ್ರಕರಣಗಳ ಮೂಲಕ ಈ ಕೆಳಗಿನಂತೆ ವಿವರಿಸಲಾಗಿದೆ.

### ಪ್ರಕರಣ ೧

ಮಾನ್ವಿ ತಾಲೂಕಿನ ಗುಣದಿನ್ನಿ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಮಾಚನೂರು ಗ್ರಾಮಕ್ಕೆ ಭೇಟಿ ನೀಡಿದಾಗ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿ ಉದ್ಯೋಗ ಕಾರ್ಡ್‌ನ್ನು ಹೊಂದಿದವರಲ್ಲಿ ಮಾರ್ಯಮ್ಮ ಒಬ್ಬರು. ಇವರು ಸುಮಾರು ೩೮ ವರ್ಷದವರಾಗಿದ್ದು, ಅವಿದ್ಯಾವಂತರಾಗಿದ್ದಾರೆ. ಹಾಗೂ ಇವರು ಗ್ರಾಮದ ಅತ್ಯಂತ ಕೆಳವರ್ಗದ ಜಾತಿಯಾದ ಮಾದಿಗ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರ ಕುಟುಂಬದಲ್ಲಿ ಸುಮಾರು ೬ ಜನ ಸದಸ್ಯರಿದ್ದು, ಇಬ್ಬರೂ ಮಾತ್ರ ಈ ಯೋಜನೆಯಲ್ಲಿ ಉದ್ಯೋಗ ಕಾರ್ಡ್‌ನ್ನು ಪಡೆದಿದ್ದಾರೆ. ಈ ಯೋಜನೆಗೆ ಸಂಬಂಧಪಟ್ಟಂತೆ ಇವರನ್ನು ಪ್ರಶ್ನಿಸಿದಾಗ ಇವರಿಗೆ ಯೋಜನೆಯ ಸಂಪೂರ್ಣ ಮಾಹಿತಿ ತಿಳಿದಿರುವುದಿಲ್ಲ ಎಂಬುದು

ಕಂಡುಬಂದಿತು. ಅವರೇ ಹೇಳಿದ ಹಾಗೆ ನನ್ನ ಕುಟುಂಬದಲ್ಲಿ ೬ ಜನ ಇದ್ದೀವಿ ಇವರಲ್ಲಿ ನಾನು ನನ್ನ ಗಂಡ ಮತ್ತು ನಾಲ್ಕು ಜನ ಮಕ್ಕಳು ಈ ನಾಲ್ಕು ಜನ ಮಕ್ಕಳಲ್ಲಿ ಇಬ್ಬರು ಶಾಲೆಗೆ ಹೋಗುತ್ತಾರೆ. ಇನ್ನು ಇಬ್ಬರು ಮನೇಲಿ ಇರ್ತಾರೆ. ದಿನ ಮನೆಯಿಂದ ಹೊರಗೆ ಹೋಗಿ ಹೊಲಗದ್ದೆಗಳಲ್ಲಿ ದುಡಿದುಕೊಂಡು ಬಂದು ಅದರಿಂದ ಬಂದ ಆದಾಯದಿಂದ ಜೀವನ ನಡೆಸಬೇಕು. ಕೆಲವೊಂದು ಸಲ ಆ ಕೆಲ್ಸ ಸಿಗದಿದ್ರೆ ಕೆಲ್ಸ ಹುಡುಕಿಕೊಂಡು ಬೇರೆ ಊರುಗಳಿಗೆ ಹೋಗ್ತಿವಿ. ಆದರೆ ಈಗ ಈ ಯೋಜನೆ ಬಂದಾಗಿನಿಂದ ಗುಳೆ ಹೋಗುದು ಕಡಿಮೆ ಆಗಿದೆ ಎಂದು ಹೇಳಿದರು. ನೀವು ಈ ಯೋಜನೆಯಲ್ಲಿ ಉದ್ಯೋಗ ಕಾರ್ಡ್‌ನ್ನು ಹೇಗೆ ಪಡೆದುಕೊಂಡಿದ್ದೀರಿ ಎಂದು ಪ್ರಶ್ನಿಸಿದಾಗ ನನಗೆ ಈ ಉದ್ಯೋಗ ಕಾರ್ಡ್ ಅಂದ್ರೆ ಏನು ಅಂತ ಗೊತ್ತಿಲ್ಲ. ರೀ ನನ್ನ ಗಂಡ ಎಲ್ಲಿ ಕೆಲ್ಸ ಮಾಡ್ತಾನೋ ನಾನು ಅಲ್ಲಿ ಕೆಲ್ಸ ಮಾಡ್ತೀನಿ ಎಂದು ಹೇಳಿದರು. ಜೊತೆಗೆ ಈ ಯೋಜನೆಯಲ್ಲಿ ಕೊಡುವ ಕೂಲಿ ನಮ್ಮ ಮನೆಗೆ ಸಾಕಾಗುತ್ತಿಲ್ಲ. ಅವರು ಕೊಟ್ಟಂತಹ ಕೂಲಿ ನನ್ನ ಗಂಡ ಸ್ವಂತ ಖರ್ಚಿಗಾಗಿ ಸ್ವಲ್ಪ ರೊಕ್ಕ ಬಳಸಿಕೊಂಡು ಉಳಿದಿದ್ದು ಸ್ವಲ್ಪ ಹಣ ಸಂಸಾರ ನಡೆಸಾಕ ಕೊಡುತ್ತಾನೆ. ಇಲ್ಲಿಯವರೆಗೂ ನಾನು ಮಾಡಿದ ಕೆಲಸಕ್ಕೆ ಎಷ್ಟು ರೊಕ್ಕ ಬಂದೈತಿ ಅಂತ ಗೊತ್ತಿಲ್ಲರೀ ಎಂದು ಹೇಳಿದರು. ಈ ಊರಿನ ಗ್ರಾಮಮಪಂಚಾಯಿತಿ ಬಗ್ಗೆ ಮಾರೈಮ್ಮ ಇವರನ್ನು ಪ್ರಶ್ನಿಸಿದಾಗ ಅವರೇ ಹೇಳಿದಂತೆ ನಮಗೆ ಮನಿ ಕೆಲಸ ಬಿಟ್ರೇ ಬೇರೆ ಕೆಲ್ಸ ಮಾಡಲು ಪುರಸೊತ್ತು ಇರೋದಿಲ್ಲ. ಹಾಗಾಗಿ ಈ ಗ್ರಾಮ ಪಂಚಾಯಿತಿ ಬಗ್ಗೆ ನನಗೆ ಏನು ಗೊತ್ತಿಲ್ಲ. ಅವುಗಳಿಗೆಲ್ಲ ನನ್ನ ಗಂಡ ಇದ್ದಾನೆ. ಇದುವರೆಗೂ ಗ್ರಾಮಪಂಚಾಯಿತಿ ಎಲ್ಲಿದೆ ಅಂತನು ಕೂಡ ನನಗೆ ಗೊತ್ತಿಲ್ಲ. ನಮ್ಮ ಊರಿನ ಬೇರೆ ಹೆಣ್ಣು ಮಕ್ಕಳು ಕೆಲಸಕ್ಕೆ ಹೋದ ಹಾಗೆ ನಾನು ಹೋಗ್ತೀನಿ ಎಂದು ಹೇಳಿದರು.

ಕೆಲಸದ ಸ್ಥಳದಲ್ಲಿ ಮಹಿಳೆಯರಿಗೆ ಇರಬೇಕಾದ ಸೌಲಭ್ಯಗಳು ಕುರಿತು ಪ್ರಶ್ನಿಸಿದಾಗ ನಕಾರಾತ್ಮಕ ಉತ್ತರ ದೊರೆಯಿತು. ಅಂದರೆ ಕಾಮಗಾರಿಗಳು ನಡೆಯುವ ಸ್ಥಳದಲ್ಲಿ ಮಹಿಳೆಯರಿಗೆ ಯಾವುದೇ ಸೌಲಭ್ಯಗಳನ್ನು ಅಥವಾ ಸೌಕರ್ಯಗಳನ್ನು ಕಲ್ಪಿಸಲಾಗಿಲ್ಲ. ಈ ಯೋಜನೆಯಲ್ಲಿ ಕೊಡು ಸಮಾನ ವೇತನವು ಮಾರೈಮ್ಮ ಮತ್ತು ಆಕೆಯ ಗಂಡ ಇವರಿಬ್ಬರಲ್ಲಿ ಸ್ವಲ್ಪ ಇರಿಸು ಮುರಿಸು ಕಂಡುಬರುತ್ತಿರುವುದು ಮಾರೈಮ್ಮನವರ ಮಾತುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ತಿಳಿದುಬರುತ್ತದೆ. ಕೆಲಸ ನಡೆಯುವಂತಹ ಸ್ಥಳದಲ್ಲಿ ಮಹಿಳೆಯರಿಗೆ ಯಾವುದೇ ರೀತಿಯ ತೊಂದರೆಗಳು ಆಗುತ್ತಿಲ್ಲ ಎಂದು ಹೇಳುವುದರ ಮೂಲಕ ತಮ್ಮ ಮಾತನ್ನು ಮುಗಿಸಿದರು.

### ಪ್ರಕರಣ ೨

ನಲವತ್ತು ವರ್ಷದ ಗಂಗಮ್ಮ ಅತ್ತನೂರು ಗ್ರಾಮದಲ್ಲಿ ವಾಸವಾಗಿದ್ದು, ಮಾದಿಗ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರು ಯಾವುದೇ ರೀತಿಯ ಶಿಕ್ಷಣವನ್ನು ಪಡೆದುಕೊಂಡಿಲ್ಲ. ಇವರು ಅನಕ್ಷರಸ್ಥರಾಗಿದ್ದ

ರಿಂದ ಈ ಉದ್ಯೋಗ ಖಾತರಿ ಯೋಜನೆಯ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಪಡೆದುಕೊಂಡಿಲ್ಲ. ಹಾಗೂ ಪಡೆದುಕೊಳ್ಳುವ ಮನಸ್ಸು ಕೂಡ ಇವರಲ್ಲಿ ಇಲ್ಲವಾಗಿದೆ. ಏಕೆಂದರೆ ಕುಟುಂಬದ ಯಜಮಾನನಾಗಿರುವ ಪುರುಷನು ಅವಳ ಸ್ವಾತಂತ್ರ್ಯವನ್ನು ನಿಯಂತ್ರಿಸಿದ್ದಾನೆ. ಹಾಗಾಗಿ ಮನೆಯ ವಿಷಯಗಳನ್ನು ಹೊರತುಪಡಿಸಿ ಬೇರೆ ವಿಷಯಗಳ ಯೋಚನೆಯನ್ನು ಕೂಡ ಮಾಡುವುದಿಲ್ಲ. ಗಂಗಮ್ಮನವರನ್ನು ಈ ಯೋಜನೆ ಕುರಿತು ಪ್ರಶ್ನಿಸಿದಾಗ ಅವರೇ ಹೇಳಿದ ಹಾಗೆ ಈ ಯೋಜನೆ ಅಂದರೆ ಏನು ನಮ್ಮ ಊರಿಗೆ ಯಾವಾಗ ಬಂತು. ಈ ಯೋಜನೆಯಲ್ಲಿ ಏನೇನು ಕೆಲ್ಸಾ ಮಾಡ್ತಾರೆ ಅಂತ ಏನು ಗೊತಿಲ್ಲ ಸಾರ್. ಆದರೆ ಊರಾಗಿನ ಗೌಡ್ರ ಮಾತಿನಂತೆ ನಾವು ಈ ಕೆಲಸಕ್ಕೆ ಸೇರಿದ್ದೀವಿ. ಈ ಕೆಲ್ಸಕ್ಕೆ ಸೇರಿ ಬಹಳ ದಿನ ಆದ್ರೂ ನಮಗೆ ಸಂಬಳಾನೇ ಕೊಟ್ಟಿಲ್ಲ. ನಾವು ಹೇಗೆ ಜೀವನ ನಡೆಸಬೇಕು. ಸರಿಯಾಗಿ ಕೂಲಿ ಕೊಡ್ರಿ ಅಂತ ಕೇಳಾಕ ಆಗುತ್ತಿಲ್ಲ. ಏಕೆಂದರೆ ಊರಿನಲ್ಲಿ ನಮನ್ನು ತುಂಬಾ ಕೀಳಾಗಿ ಕಾಣುತ್ತಾರೆ. ಅಲ್ಲಿ ಯಾವುದೇ ರೀತಿಯ ಸಮಾನತೆ ಅನ್ನೋದು ಇಲ್ಲ ಎಂದು ಹೇಳಿದರು. ಗ್ರಾಮಪಂಚಾಯಿತಿಗಳು ನಡೆಸುವ ಗ್ರಾಮ ಸಭೆಗಳಲ್ಲಿ ನೀವು ಪಾಲ್ಗೊಳ್ಳುತೀರಾ ಎಂದು ಕೇಳಿದಾಗ ನಾವು ಮನೆಯಿಂದ ಹೊರಗೆ ಬರುವುದೇ ತುಂಬಾ ಕಷ್ಟದ ವಿಷಯವಾಗಿರುವಾಗಿದೆ. ಏಕೆಂದರೆ ನಾವು ಕೇವಲ ಹೊಟ್ಟೆಪಾಡಿಗಾಗಿ ದುಡಿಯಲು ಮಾತ್ರ ಹೊರಗಡೆ ಹೋಗುತ್ತೇವೆ. ಆದರೆ ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಮತ್ತು ಇನ್ನು ಗ್ರಾಮ ಸಭೆಗಳಲ್ಲಿ ಭಾಗವಹಿಸುವುದು ದೂರದ ಮಾತು. ಅವುಗಳಲ್ಲಿ ಭಾಗವಹಿಸುವುದೇನಿದ್ದರೂ ನಮ್ಮ ಗಂಡಂದಿರ ಕೆಲಸ. ಒಂದು ವೇಳೆ ಗ್ರಾಮ ಸಭೆ ನಡೆಸಿದರು ಅಲ್ಲಿ ನಮಗೆ ಯಾವುದೇ ಅವಕಾಶಗಳು ಸಿಗುತ್ತಿಲ್ಲ. ಅವಕಾಶ ಸಿಕ್ಕರೂ ನಮ್ಮ ಮಾತುಗಳಿಗೆ ಮಾನ್ಯತೆ ಕೊಡುವುದಿಲ್ಲ. ಅಲ್ಲಿ ಪುರುಷರೇ ಮೇಲುಗೈ ಸಾಧಿಸುತ್ತಾರೆ. ಹಾಗಾಗಿ ನಾವು ಯಾವುದೇ ಗ್ರಾಮ ಸಭೆಯಲ್ಲಿ ಭಾಗವಹಿಸುವುದಿಲ್ಲ. ಇದರಿಂದಾಗಿ ಯೋಜನೆಯ ಬಗ್ಗೆ ಮಾಹಿತಿ ಸಿಕ್ಕಿಲ್ಲ ಎಂದು ಹೇಳಿದರು.

ಕೆಲಸದ ಸ್ಥಳದಲ್ಲಿ ಯೋಜನೆಯ ಸೌಲಭ್ಯಗಳ ಕುರಿತು ಕೇಳಿದಾಗ ನನಗೆ ಈ ಯೋಜನೆಯಿಂದ ಯಾವುದೇ ರೀತಿಯ ವಿಶೇಷ ಸೌಲಭ್ಯಗಳು ದೊರೆತಿಲ್ಲ. ಸೌಲಭ್ಯಗಳು ಇದ್ದರೂ ಕೂಡ ಅವುಗಳು ನಮಗೆ ದೊರೆಯುತ್ತಿಲ್ಲ. ಈ ಸೌಲಭ್ಯಗಳ ಬಗ್ಗೆಯೂ ನಾವು ಪ್ರಶ್ನಿಸುವಂತೆಯು ಇಲ್ಲ. ಏಕೆಂದರೆ ನಮ್ಮ ಮನೆಯವರು ಪ್ರಶ್ನಿಸಲು ಬಿಡದೆ ನಮ್ಮ ಮೇಲೆ ಹಿಡಿತವನ್ನು ಸಾಧಿಸುತ್ತಾರೆ. ನಮಗೆ ಏನಾದರೂ ಆರೋಗ್ಯದ ತೊಂದರೆ ಕಾಣಿಸಿಕೊಂಡರೆ ಆಸ್ಪತ್ರೆಗಳು ಕೂಡ ಇಲ್ಲವಾಗಿವೆ. ಒಟ್ಟನಲ್ಲಿ ಈ ಯೋಜನೆಯಿಂಗ ನಮ್ಮ ಕುಟುಂಬವು ಸ್ವಲ್ಪಮಟ್ಟಿಗಾದರೂ ಸಮಾಜದ ಇತರ ಸಮುದಾಯಗಳೊಂದಿಗೆ ಬೆರೆಯುವಂತಹ ಅವಕಾತವನ್ನು ಪಡೆದುಕೊಂಡಿದೆ. ಇನ್ನು ಕೂಲಿಯ ಬಗ್ಗೆ ಪ್ರಶ್ನಿಸಿದಾಗ ನಮಗೆ ದಿನವೊಂದಕ್ಕೆ ೭೦ ರೂ ಕೂಲಿಯನ್ನು ಕೊಡುತ್ತಾರೆ. ಆದರೆ ಇದು ನಮ್ಮ ಮನೆಯ ಸಂಸಾರಕ್ಕೆ ಸಾಕಾಗುತ್ತಿಲ್ಲ ಮತ್ತು

ವರ್ಷದಲ್ಲಿ ೧೦೦ ದಿನಗಳ ಕೆಲಸ ಮಾಡುವುದು ಕೂಡ ನಮಗೆ ಸಾಕಾಗುತ್ತಿಲ್ಲ ಎಂದು ಹೇಳಿದರು. ಮತ್ತು ಈ ಕೆಲ್ಸ ವರ್ಷ ಪೂರ್ತಿ ಇದ್ದರೆ ತುಂಬಾ ಚನ್ನಾಗಿರುತ್ತದೆ ಎಂದು ಹೇಳಿದರು.

**ಪ್ರಕರಣ ೩**

೨೬ ವರ್ಷದ ಸುಲ್ತಾನ್ ಬೀ ಪಿಂಜಾರು ಸಮುದಾಯಕ್ಕೆ ಸೇರಿದವರಾಗಿದ್ದು ಪಿಯುಸಿವರೆಗೆ ವಿದ್ಯಾಭ್ಯಾಸವನ್ನು ಮಾಡಿದ್ದಾರೆ. ಇವರು ಗಣದಿನ್ನಿ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಮಾಚನೂರು ಗ್ರಾಮದವರಾಗಿದ್ದಾರೆ. ಸುಲ್ತಾನ್ ಬೀ ಮೂಲತಃ ಮಧ್ಯಮ ವರ್ಗದ ಕುಟುಂಬದವರಾಗಿದ್ದಾರೆ. ಇವರ ಕುಟುಂಬದಲ್ಲಿ ೫ ಜನರನ್ನು ಒಳಗೊಂಡಂತೆ ಉದ್ಯೋಗ ಕಾರ್ಡನ್ನು ಹೊಂದಿದ್ದಾರೆ. ಇವರು ವಿದ್ಯಾವಂತರಾಗಿರುವ ಕಾರಣ ಈ ಯೋಜನೆಯ ಬಗ್ಗೆ ಅರಿವು ಅವರಲ್ಲಿದೆ. ಈ ಯೋಜನೆಯಲ್ಲಿ ಯಾವುದೇ ಲೋಪದೋಷಗಳು ಕಂಡುಬಂದರೂ ಅದನ್ನು ಪ್ರಶ್ನಿಸುವ ಮನಸ್ಸನ್ನು ಹೊಂದಿದ್ದಾರೆ. ಹಾಗಾಗಿ ಇವರು ಇತರ ಮಹಿಳೆಯರಿಗೆ ಗ್ರಾಮದಲ್ಲಿ ಮಾದರಿಯಾಗಿದ್ದಾರೆ. ಈ ಯೋಜನೆ ಬಗ್ಗೆ ಅವರನ್ನು ಪ್ರಶ್ನಿಸಿದಾಗ ಈ ಯೋಜನೆಯ ಸಂಪೂರ್ಣ ಮಾಹಿತಿ ಅವರಲ್ಲಿರುವುದು ಕಂಡುಬಂತು. ಇವರ ಪ್ರಕಾರ ಈ ಯೋಜನೆಯು ತುಂಬಾ ಉತ್ತಮವಾಗಿದ್ದು ಗ್ರಾಮೀಣ ಜನರು ಉದ್ಯೋಗವನ್ನರಿಸಿ ವಲಸೆ ಹೋಗುವುದನ್ನು ಮತ್ತು ಗ್ರಾಮೀಣ ಭಾಗದ ಜನರ ಬಡತನವನ್ನು ನಿವಾರಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಆದರೆ ಇದು ಸಾಧ್ಯವಾಗುವುದು ಈ ಯೋಜನೆಯು ಸರಿಯಾದ ರೀತಿಯಲ್ಲಿ ಕಾರ್ಯಾನುಷ್ಠಾನಕ್ಕೆ ಬಂದರೆ ಮಾತ್ರ ಸಾಧ್ಯ. ಇನ್ನು ಮುಂದುವರಿಸಿ ಕೂಲಿಯಲ್ಲಿ ಸಮಾನತೆಯನ್ನು ಕೊಡುವಂತೆ ಉದ್ಯೋಗ ನೀಡುವಲ್ಲಿಯೂ ಕೂಡ ಪುರುಷರಿಗೆ ಸಮಾನವಾಗಿ ನೀಡಿದರೆ ಚನ್ನಾಗಿರುತ್ತಿತ್ತು. ಆದರೆ ಈ ಕಾಮಗಾರಿಯಲ್ಲಿನ ಕೂಲಿಯಲ್ಲಿ ತುಂಬಾ ವ್ಯತ್ಯಾಸವಿರುವುದು ಕಂಡುಬರುತ್ತದೆ. ಏಕೆಂದರೆ ಸರ್ಕಾರವು ನಿಗದಿಪಡಿಸಿರುವ ಕೂಲಿಗಿಂತ ಕಡಿಮೆ ಕೂಲಿಯನ್ನು ಕೊಡುತ್ತಿದ್ದಾರೆ. ಆದರೆ ಇದನ್ನು ಯಾರು ಪ್ರಶ್ನಿಸುತ್ತಿಲ್ಲ. ಕೆಲಸದ ಸ್ಥಳದಲ್ಲಿ ಮಹಿಳೆಯರಿಗೆ ಯಾವುದೇ ಸೌಲಭ್ಯಗಳನ್ನು ಒದಗಿಸುತ್ತಿಲ್ಲ. ಈ ಯೋಜನೆಯ ಕಾಮಗಾರಿಗಳಲ್ಲಿ ಮೊದಲು ನಾವು ಕೃಷಿಹೊಂಡ ನಿರ್ಮಾಣ ಕಾಮಗಾರಿಯ ಕೆಲಸದಲ್ಲಿ ತೊಡಗಿದ್ದೇವು. ಇಲ್ಲಿ ಯಾವುದೇ ರೀತಿಯ ಸೌಕರ್ಯಗಳನ್ನು ಒದಗಿಸದೇ ಮಹಿಳೆಯರನ್ನು ಕೇವಲ ದುಡಿವೆಯ ವಸ್ತುವನ್ನಾಗಿ ಬಳಸಿಕೊಳ್ಳುತ್ತಿದ್ದಾರೆ. ಮಾತನಾಡುವ ಅವಕಾಶವನ್ನು ನಮ್ಮ ಸಂವಿಧಾನ ನಮಗೆ ಕೊಟ್ಟಿದ್ದರೂ ಕೂಡ ಪುರುಷ ಪ್ರದಾನ ಸಮಾಜ ನಮ್ಮಿಂದ ಅದನ್ನು ಕಿತ್ತುಕೊಂಡಿದೆ. ಹಾಗಾಗಿ ಯಾವುದೇ ಸಮಸ್ಯೆಗಳ ವಿರುದ್ಧ ಮಾತೆತ್ತುವುದು ಕಷ್ಟಕರವಾಗಿದೆ. ಈ ಯೋಜನೆಯಲ್ಲಿ ಕಾಮಗಾರಿಗಳನ್ನು ಕೈಗೊಂಡಿದ್ದಾರೆ ನಿಜ. ಆದರೆ ಈ ಕಾಮಗಾರಿಗಳನ್ನು ಆಯ್ಕೆ ಮಾಡಿದವರು ಯಾರು ಎಂದು ತಿಳಿದಿಲ್ಲ. ಅದಕ್ಕೆ ಸಂಬಂಧಿಸಿದಂತೆ ಪ್ರಶ್ನೆ ಹಾಕಿದರೆ ನಿಮಗೆ ಕೆಲಸ ಬೇಕು ಅಷ್ಟೇ ಅದನ್ನು ನಾವು ಕೊಡುತ್ತೇನೆ ಅದರ ಬದಲಾಗಿ ಈ ಯೋಜನೆಯ ನಿಯಮಾವಳಿಗಳ ಬಗ್ಗೆ ತಲೆ ಕೆಡಿಸಿಕೊಳ್ಳುವ ಅಗತ್ಯವಿಲ್ಲ ಎಂದು

ಗ್ರಾಮಪಂಚಾಯಿತಿಗಳಲ್ಲಿ ಹೇಳುತ್ತಾರೆ. ಮೊದಲು ನಮಗೆ ೭೦ ರೂ. ಕೂಲಿಯನ್ನು ಕೊಡುತ್ತಿದ್ದರು. ಆದರೆ ನಿಯಮದಲ್ಲಿರುವಂತೆ ೮೨ ರೂ. ಕೂಲಿಯನ್ನು ಕೊಡಬೇಕು. ಇದರ ಬಗ್ಗೆ ಗ್ರಾಮ ಪಂಚಾಯಿತಿ ಯಲ್ಲಿ ವಿಚಾರಿಸಿದಾಗ ೮೨ ರೂ. ಕೂಲಿಯನ್ನು ಕೊಡುತ್ತೇವೆ ಎಂದು ಹಾರಿಕೆಯ ಉತ್ತರವನ್ನು ಕೊಟ್ಟಿದ್ದಾರೆ. ಹಾಗಾಗಿ ಇಂದಿಗೂ ಕೂಡ ಈ ಯೋಜನೆಯಲ್ಲಿ ೮೨ ರೂ. ಕೂಲಿ ಸಿಕ್ಕಿಲ್ಲ. ಈ ಯೋಜನೆಯ ಸೌಲಭ್ಯಗಳೆಲ್ಲ ಉನ್ನತ ವರ್ಗದವರ ಪಾಲಾಗುತ್ತಿದೆ. ಶ್ರೀಮಂತರು ಮತ್ತು ಗ್ರಾಮಪಂಚಾಯಿತಿ ಸದಸ್ಯರ ಮತ್ತು ಅಧ್ಯಕ್ಷರ ಕುಟುಂಬದವರು ಈ ಯೋಜನೆಯ ಕೆಲಸದಲ್ಲಿ ತೊಡಗಿಕೊಳ್ಳದೆ ಉದ್ಯೋಗ ಕಾರ್ಡನ್ನು ಹೊಂದಿದ್ದು, ಈ ಯೋಜನೆಯ ಸಂಪೂರ್ಣ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿದ್ದಾರೆ ಎಂದು ಹೇಳಿದರು.

## ಪ್ರಕರಣ ೪

ಲಕ್ಷ್ಮೀ ಇವರು ಹೊಕ್ರಾಣಿ ಗ್ರಾಮಕ್ಕೆ ಸೇರಿದವರಾಗಿದ್ದು, ಇವರಿಗೆ ೩೫ ವರ್ಷ ವಯಸ್ಸು ಆಗಿದೆ. ಇವರು ೭ನೇ ತರಗತಿಯವರೆಗೆ ವಿದ್ಯಾಭ್ಯಾಸವನ್ನು ಪಡೆದುಕೊಂಡಿದ್ದಾರೆ. ಹಾಗೂ ಇವರು ಉನ್ನತವರ್ಗದ ಕುಟುಂಬಕ್ಕೆ ಸೇರಿದವರಾಗಿದ್ದಾರೆ. ಈ ಗ್ರಾಮವು ಗಣದಿನ್ನಿ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ಬರುತ್ತಿದ್ದು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಲಕ್ಷ್ಮೀಯವರ ಕುಟುಂಬವು ಈ ಯೋಜನೆಯಲ್ಲಿ ನೊಂದಾಯಿಸಲ್ಪಟ್ಟಿದ್ದು, ಉದ್ಯೋಗ ಕಾರ್ಡನ್ನು ಹೊಂದಿರುವಂತಹ ಕುಟುಂಬವಾಗಿರುತ್ತದೆ. ಇವರು ಸ್ವಲ್ಪ ಮಟ್ಟಿಗೆ ವಿದ್ಯಾವಂತರಾಗಿದ್ದರೂ ಕೂಡ ಈ ಯೋಜನೆಯ ಬಗ್ಗೆ ಯಾವುದೇ ರೀತಿಯ ಮಾಹಿತಿ ತಿಳಿದಿಲ್ಲ. ಏಕೆಂದರೆ ಇವರು ಆರ್ಥಿಕವಾಗಿ ಸ್ಥಿತಿವಂತರಾದ ಕಾರಣ ಮನೆಯಿಂದ ಹೊರಗಡೆ ಬರುವುದೇ ಅಪರೂಪವಾಗಿರುತ್ತದೆ. ಲಕ್ಷ್ಮೀಯವರನ್ನು ಸಂದರ್ಶಿಸಿ ಯೋಜನೆಯ ಬಗ್ಗೆ ಕೇಳಿದಾಗ ಎಲ್ಲಾ ಸಕಾರಾತ್ಮಕ ಉತ್ತರಗಳನ್ನು ನೀಡಿದ್ದಾರೆ. ಈ ಯೋಜನೆ ನಮಗೆ ತುಂಬಾ ಉಪಯುಕ್ತವಾಗಿದೆ. ನಾವು ಮನೆಯಿಂದ ಹೊರಗಡೆ ಬರಲಾರದವರು ಇವತ್ತು ಈ ಯೋಜನೆ ಬಂದಾಗಿನಿಂದ ಮನೆಯಿಂದ ಹೊರಗಡೆ ಬಂದು ದುಡಿತೀವಿ ಮತ್ತಾ ಊರಿನ್ಯಾಗಿನ ಬ್ಯಾರೆ ಬ್ಯಾರೆ ಜಾತಿಯ ಹೆಣ್ಣುಮಕ್ಕಳ ಜತೆ ಬೆರಿತೀವಿ ಎಂದು ಹೇಳಿದರು. ಮತ್ತು ನಮ್ಮ ಊರಿನಲ್ಲಿಯೇ ನಡೆದತಂಹ ಜಗಲ್ ಕಟಿಂಗ್ ಕೆಲಸದಾಗ ಮತ್ತೆ ಕಾಲುವೆ ಕೆಲಸದಾಗ ಮತ್ತೆ ಸುಡುಗಾಡ್ಯಾಗ ಬೇಲಿ ಕಡಿಯುವ ಕೆಲಸದಾಗ ಮತ್ತೆ ಕೆರೆ ತೊಡುವ ಕೆಲಸದಾಗ ತೊಡಗಿಕೊಂಡಿದ್ದೇವೆ ಎಂದು ಹೇಳಿದರು.

ಆದರೆ ಇವರು ವಾಸ್ತವದಲ್ಲಿ ಯಾವುದೇ ಕೆಲಸಗಳಲ್ಲಿ ತೊಡಗಿಕೊಂಡಿರದೆ ಈ ಯೋಜನೆಯ ಸಂಪೂರ್ಣ ಲಾಭವನ್ನು ಪಡೆದುಕೊಂಡಿದ್ದಾರೆ ಎಂಬುದು ಬಲ್ಲ ಮೂಲಗಳಿಂದ ತಿಳಿದುಬಂದಿದೆ. ಇದಕ್ಕೆಲ್ಲ ಮುಖ್ಯ ಕಾರಣ ಇವರು ಉನ್ನತವರ್ಗದವರಾಗಿದ್ದು, ಇವರು ಮೇಲಾಗಿ ಗ್ರಾಮಪಂಚಾಯಿತಿ ಸದಸ್ಯೆನ ಹತ್ತಿರದ ಸಂಬಂಧಿಗಳಾಗಿದ್ದು, ಆರ್ಥಿಕವಾಗಿ ಬಲಿಷ್ಠರಾಗಿರುವ ಈ ಸಮುದಾಯದಲ್ಲಿ

ಮಹಿಳೆಯರನ್ನು ಮನೆಯಿಂದ ಹೊರಗಡೆ ಕಳುಹಿಸುವುದು ತುಂಬಾ ಅಪರೂಪ. ಮತ್ತು ಇವರು ಸಮಾಜದ ರೂಢಿ ಸಂಪ್ರದಾಯ ಹಬ್ಬ ಆಚರಣೆಗಳ ಬಲೆಯಲ್ಲಿ ಸಿಲುಕಿಕೊಂಡಿರುತ್ತಾರೆ. ಹಾಗಾಗಿ ಇವುಗಳಲ್ಲಿ ಭಾಗವಹಿಸುವುದೇ ಸ್ವಾತಂತ್ರ್ಯ ಎಂದು ತಿಳಿದುಕೊಂಡು ಬಿಟ್ಟಿದ್ದಾರೆ. ಒಟ್ಟಿನಲ್ಲಿ ಈ ಪ್ರಕರಣದಿಂದ ತಿಳಿದುಬರುವುದೆನೆಂದರೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಉನ್ನತ ವರ್ಗದವರ ಮತ್ತು ಅಧಿಕಾರವುಳ್ಳವರು ಕೆಲಸಕ್ಕೆ ಹೋಗದೆ ತಮ್ಮ ಮನೆಯವರ ಹೆಸರುಗಳನ್ನು ಕೂಲಿಕಾರರ ಹಾಜರಾತಿ ಪುಸ್ತಕದಲ್ಲಿ ಹಾಜರಿಯನ್ನು ಹಾಕಿಸಿ ವೇತನವನ್ನು ಪಡೆಯುತ್ತಿರುವಂತಹ ಪ್ರಕರಣಗಳು ಬೆಳಕಿಗೆ ಬಂದಿರುವುದು ತಿಳಿದುಬರುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಉನ್ನತ ವರ್ಗದವರ ಮತ್ತು ಅಧಿಕಾರವುಳ್ಳವರ ಸ್ವತ್ತಾಗಿರುವುದು ಕಂಡುಬರುತ್ತದೆ.

**ಪ್ರಕರಣ ೫**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿ ಹೊಕ್ರಾಣೆ ಗ್ರಾಮದಲ್ಲಿ ಉದ್ಯೋಗ ಕಾರ್ಡ್ ಹೊಂದಿದವರಲ್ಲಿ ಪಾರ್ವತಮ್ಮನವರು ಒಬ್ಬರು. ಇವರಿಗೆ ಸುಮಾರು ೩೭ ವರ್ಷಗಳಾಗಿದ್ದು ನಾಯಕ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರು ಅವಿದ್ಯಾವಂತರಾದರು ಕೂಡ ತುಂಬಾ ಕ್ರಿಯಾಶೀಲತೆಯನ್ನು ಹೊಂದಿದವರು. ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ಬಗ್ಗೆ ಪ್ರಶ್ನಿಸಿದಾಗ ಈ ಯೋಜನೆಯು ತುಂಬಾ ಉಪಯುಕ್ತಕರವಾಗಿದೆ. ಆದರೆ ಈ ಯೋಜನೆಯ ಸೌಲಭ್ಯಗಳು ನಮಗೆ ಸಿಗುತ್ತಿಲ್ಲ. ಹೊಕ್ರಾಣೆ ಗ್ರಾಮದಲ್ಲಿ ಕೆಲವು ಕಾಮಗಾರಿಗಳು ಜಾರಿಯಲ್ಲಿವೆ. ಆದರೆ ಈ ಕಾಮಗಾರಿಗಳನ್ನು ಯಾರು ಎಲ್ಲಿ ಯಾವಾಗ ಯೋಜಿಸಿದರು ಮತ್ತು ಅನುಷ್ಠಾನಕ್ಕೆ ತಂದರು ಎಂಬುದು ತಿಳಿದುಬಂದಿಲ್ಲ. ಗ್ರಾಮಪಂಚಾಯಿತಿಗಳು ಯಾವುದೇ ರೀತಿಯ ಗ್ರಾಮ ಸಭೆಗಳನ್ನು ನಡೆಸಿಲ್ಲ. ಹಾಗಾಗಿ ಈ ಯೋಜನೆಯ ಬಗ್ಗೆ ನಮಗೆ ಯಾವುದೇ ಮಾಹಿತಿ ತಿಳಿದುಬಂದಿಲ್ಲ. ಆದರೂ ನಾನೇ ಸ್ವತಃ ಗ್ರಾಮಪಂಚಾಯಿತಿಗೆ ಬೇಟಿ ನೀಡಿ ಉದ್ಯೋಗ ಕಾರ್ಡ್‌ನ್ನು ಪಡೆದುಕೊಂಡಿದ್ದೇನೆ. ಮತ್ತು ನನ್ನ ಕುಟುಂಬದಲ್ಲಿ ಇಬ್ಬರೇ ಇರುವುದು. ನಾನು ಮತ್ತು ನನ್ನ ೧೮ ವರ್ಷದ ಮಗಳು ಮಾತ್ರ. ಈ ಯೋಜನೆಯಲ್ಲಿ ನೀಡುತ್ತಿರುವಂತಹ ಕೂಲಿ ನಮ್ಮ ಮನೆಗೆ ಸಾಕಾಗುತ್ತಿಲ್ಲ ಮತ್ತು ನಾವು ತುಂಬ ತ್ರಾಸಿನಲ್ಲಿ ಜೀವಿಸುತ್ತಿದ್ದೇವೆ. ಏಕೆಂದರೆ ಒಂಟಿ ಹೆಣ್ಣು ಮಗಳು ಸಮಾಜದಲ್ಲಿ ಜೀವನ ನಡೆಸುವುದು ತುಂಬ ತ್ರಾಸ ಆಗ್ಯೆತಿ ಸಾರ್ ಮನ್ಯಾಗ ಇರಲಿ ಅಥವಾ ಕೆಲಸದ ಸ್ಥಳದಲ್ಲಿರಲಿ ನನಗೆ ತುಂಬ ಹಿಂಸೆಯನ್ನು ನೀಡುತ್ತಾರೆ. ಆದರೆ ನಾನು ಅದನ್ನು ಪ್ರತಿಭಟಿಸುತ್ತೇನೆ. ಹಾಗಾಗಿ ಇಲ್ಲಿಯವರೆಗೂ ನಾನು ಬದುಕಿದ್ದೀನಿ, ಜೀವಂತವಾಗಿದ್ದೀನಿ ಸಾರ್ ನಾನು ನನಗೆ ಇಷ್ಟ ವಿಲ್ಲದ ವಿಷಯದ ವಿರುದ್ಧ ಪ್ರತಿಭಟಿಸಿದಾಗ ಜನರು ನನ್ನನ್ನು ಗಂಡುಬೀರಿ, ಗಯ್ಯಾಳಿ ಎಂದು ಕರೆಯುತ್ತಾರೆ. ಈ ಯೋಜನೆಯಲ್ಲಿ ಕೆಲಸ ಮಾಡುವವರಿಗೆ

೮೨ ರೂ. ಕೂಲಿಯನ್ನು ಕೊಡಬೇಕು. ಅದು ನಿಯಮ. ಆದರೆ ಇಲ್ಲಿ ಕೇವಲ ೭೦ರೂ ಕೊಡುತ್ತಾರೆ. ಹಾಗಾಗಿ ಇದನ್ನು ಗ್ರಾಮಪಂಚಾಯಿತಿಗೆ ಹೋಗಿ ನೇರವಾಗಿ ಕಾರ್ಯದರ್ಶಿಯವರನ್ನೇ ಪ್ರಶ್ನಿಸಿದಾಗ ಅವರು ಕೊಡುತ್ತೇವೆ ಎಂದು ಸಮಾಧಾನ ಪಡಿಸಿದರು. ಆಗ ಕೆಲವು ಪುರುಷರು ಇವಳು ಹೆಣ್ಣಾಗಿ ಹುಟ್ಟಬಾರದಿತ್ತು. ಗಂಡಸಿನಂತೆ ಎಲ್ಲಿ ಬೇಕಾದರಲ್ಲಿ ತಿರುಗಾಡುತ್ತಾಳೆ ಎಂದು ಮಾತನಾಡಿಕೊಳ್ಳುತ್ತಾರೆ.

ಈ ಉದ್ಯೋಗ ಖಾತ್ರಿ ಯೋಜನೆಯು ನಮಗೆ ಒಂದು ರೀತಿಯಲ್ಲಿ ಉಪಯೋಗವಾಗಿದ್ದರೂ ಬಹಳಷ್ಟು ತೊಂದರೆಯಾಗುತ್ತಿದೆ. ಏಕೆಂದರೆ ನನ್ನಂತಹ ಎಷ್ಟೋ ಹೆಣ್ಣುಮಕ್ಕಳು ಸಮಾಜದಾಗ ಒಂಟಿಯಾಗಿ ಬದುಕೋದಕ್ಕೆ ಆಗೋದಿಲ್ಲ ಕೆಲಸ ಮಾಡಲು ಹೊರಗೆ ಹೋದರು ಕೂಡ ಅಲ್ಲಿಯೂ ಕಷ್ಟ ಕೊಡುತ್ತಾರೆ. ಒಟ್ಟಿನಲ್ಲಿ ಈ ಯೋಜನೆ ನಮ್ಮನ್ನು ಹೊರಗೆ ಹೋಗಿ ದುಡಿಯುವುದನ್ನು ತಪ್ಪಿಸಿದೆ ಎಂದು ಹೇಳುವುದರ ಮೂಲಕ ತಮ್ಮ ಮಾತನ್ನು ಮುಗಿಸಿದರು.

**ಪ್ರಕರಣ ೬**

೨೮ ವರ್ಷದ ಬಸವರಾಜ ಅತ್ತನೂರು ಗ್ರಾಮಕ್ಕೆ ಸೇರಿದ್ದಾರೆ. ಇವರು ಹರಿಜನ ಸಮುದಾಯಕ್ಕೆ ಸೇರಿದವರಾಗಿದ್ದು, ಎಸ್.ಎಸ್.ಎಲ್.ಸಿ. ಓದಿಕೊಂಡಿದ್ದಾರೆ. ಇವರು ಸಹ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿ ಕಾರ್ಡ್‌ನ್ನು ಹೊಂದಿದ್ದಾರೆ. ಇವರನ್ನು ಈ ಯೋಜನೆಯ ಕುರಿತಾಗಿ ಕೇಳಿದಾಗ ಈ ಯೋಜನೆ ಬಂದು ನಮಗೆ ತುಂಬ ಅನುಕೂಲವಾಗಿದೆ. ಆದರೆ ಇದು ವರ್ಷಪೂರ್ತಿ ಇದ್ದರೆ ಚೆನ್ನಾಗಿರುತ್ತಿತ್ತು. ಮತ್ತು ಈ ಯೋಜನೆಯಲ್ಲಿ ಎಲ್ಲರನ್ನು ಸಮನಾಗಿ ಕಾಣಬೇಕು. ಮತ್ತು ಎಲ್ಲರಿಗೂ ಸಮಾನವಾದ ವೇತನ ನೀಡಬೇಕು ಎಂದು ಈ ಯೋಜನೆ ನಿಯಮ ಇದ್ದರು ಕೂಡ ಗ್ರಾಮಪಂಚಾಯಿತಿಯ ಸದಸ್ಯರು ಮತ್ತು ಗ್ರಾಮದ ಉನ್ನತ ವರ್ಗದವರು ನಮ್ಮನ್ನು ಕೀಳಾಗಿಯೇ ಕಾಣುತ್ತಾರೆ. ಕೆಲಸದ ಸ್ಥಳದಲ್ಲಿ ನಮಗಾಗಿ ಪ್ರತ್ಯೇಕವಾದತಂಹ ಕೆಲಸಗಳನ್ನು ಸೂಚಿಸುತ್ತಾರೆ. ಇದರಿಂದ ನಮಗೆ ತುಂಬಾ ಬೇಸರವಾಗುತ್ತದೆ ಎಂದು ಹೇಳಿದರು. ಈ ಯೋಜನೆಯಲ್ಲಿ ಸ್ತ್ರೀ ಮತ್ತು ಪುರುಷ[illegible] ನೀಡುವಂತಹ ಸಮಾನ ಕೂಲಿಯ ಬಗ್ಗೆ ಪ್ರಶ್ನಿಸಿದಾಗ ಇದು ಇರಬಾರದಿತ್ತು ರೀ ಏಕೆಂದರೆ ನಮಗಿಂತ ಹೆಣ್ಣುಮಕ್ಕಳು ಕಡಿಮೆ ಕೆಲಸ ಮಾಡ್ತಾರೆ ಅವರಿಗ್ಯಾಕ ನಮ್ಮಷ್ಟೇ ಕೂಲಿ ಕೊಡಬೇಕು ಎಂದು ಹೇಳಿದರು. ಮತ್ತೆ ಮುಂದುವರೆಸಿ ನಮಗೆ ಮತ್ತು ಹೆಣ್ಣುಮಕ್ಕಳಿಗೆ ಸಮಾನ ಕೂಲಿ ಕೊಟ್ಟರೆ ನಮ್ಮನ್ಯಾಕ ಕೆಲಸಕ್ಕೆ ಕರಿಬೇಕು ಅವರನ್ನೇ ಕೆಲಸಕ್ಕೆ ತಗೋಬೇಕು. ನನಗಂತು ಇದು ಸರಿಯಲ್ಲಿ ಅಂತ ಅನಿಸ್ತಾದ. ಹೆಣ್ಣು ಮಕ್ಕಳು ಯಾವಾಗಲೂ ನಮ್ಮ ಕೆಳಗೇ ಇರಬೇಕು ಎಂದು ಹೇಳಿದರು. ಗ್ರಾಮಸಭೆಗಳಿಗೆ ನೀವು ಭಾಗಿಯಾಗುತ್ತೀರಾ ಎಂದು ಕೇಳಿದಾಗ ಸಾರ್ ನಾವು ಸಮಾಜದಲ್ಲಿ ತುಂಬ ಕೆಳಗೆ ಇರುವಂತಹ ಜನ ನಮ್ಮ ಪಾಡು ನಾಯಿಪಾಡಿಗಿಂತ ಕಡೆ. ಹಾಗಾಗಿ ಗ್ರಾಮಸಭೆಯಲ್ಲಿ ನಮ್ಮನ್ನು ಕರೆಯುವುದಿಲ್ಲ. ಒಂದು

ವೇಳೆ ಹೋದರು ಸಹ ಅಲ್ಲಿ ನಮ್ಮನ್ನು ದೂರ ಇಟ್ಟು ಮಾತನಾಡುತ್ತಾರೆ. ಮತ್ತು ನಮ್ಮ ಮಾತುಗಳಿಗೆ ಯಾವುದೇ ಬೆಲೆ ಕೊಡುವುದಿಲ್ಲ. ಮುಖ್ಯವಾಗಿ ಈ ಗ್ರಾಮಮಸಭೆ ಅಂದರೆ ಏನು ಮತ್ತು ಎಲ್ಲಿ ನಡೆಸುತ್ತಾರೆ ಎಂಬುದೇ ನಮಗೆ ಗೊತ್ತಾಗುವುದಿಲ್ಲ. ಏಕೆಂದರೆ ನಾನು ಹುಟ್ಟಿದ ಜಾತಿ ನನಗೆ ಪ್ರತಿಯೊಂದಕ್ಕೂ ಮುಳುವಾಗುತ್ತದೆ. ಅಕ್ಷರ ಜ್ಞಾನವಿದ್ದರೂ ವಿಚಾರವಂತನಾದರೂ ಕೂಡ ನಾನು ಏನು ತಿಳಿಯದ ಅಮಾಯಕ, ದಡ್ಡನಾಗಿ ಇರಬೇಕಾದ ಪರಿಸ್ಥಿತಿಗೆ ನನ್ನನ್ನು ತಂದೊಡ್ಡಿದೆ ಎಂದು ಉತ್ತರಿಸಿದರು. ಈ ಯೋಜನೆಯ ಸೌಲಭ್ಯಗಳು ಮತ್ತು ಯೋಜನೆಯ ಕೂಲಿಯು ನಿಮಗೆ ಸರಿಯಾಗಿ ದೊರೆಯುತ್ತಿದೆಯೆ ಎಂದು ಪ್ರಶ್ನಿಸಿದಾಗ ಸಾರ್ ನಾನು ೧೧ನೇ ಕ್ಲಾಸ್‌ವರೆಗೆ ಓದಿದ್ದೇನೆ. ಈ ಯೋಜನೆಯ ಬಗ್ಗೆ ಸಂಪೂರ್ಣವಾಗಿ ಗೊತ್ತಿಲ್ಲದಿದ್ದರೂ ಕೂಡ ಅಲ್ಪಸ್ವಲ್ಪ ಗೊತ್ತಿದೆ. ಆದರೂ ಯೋಜನೆ ಬಗ್ಗೆ ತಿಳಿದುಕೊಳ್ಳಬೇಕು ಅಂತ ತುಂಬಾ ಆಸೆ ಇದೆ. ಆದರೆ ಇದನ್ನು ಯಾರು ತಿಳಿಸುವುದಿಲ್ಲ. ತಿಳಿದುಕೊಂಡರೂ ಅದು ನಮಗೆ ಪ್ರಯೋಜನವಿಲ್ಲ. ಏಕೆಂದರೆ ನಾವು ಯಾವುದನ್ನು ಪ್ರಶ್ನಿಸುವಂತಿಲ್ಲ. ನಮ್ಮ ಊರಿನಲ್ಲಿನ ಹಿರಿಯರು ಹೇಳಿದಂತೆ ಕೇಳಬೇಕು ಅಷ್ಟೇ. ಹಾಗಾಗಿ ಈ ಉದ್ಯೋಗ ಕಾರ್ಡ್ ಪೊಂದಿದ್ದೇವೆ ಎಂಬ ಕಾರಣಕ್ಕಾಗಿ ಹೊರಗಿನ ಕೆಲಸಗಳಿಗೆ ದುಡಿಯಲು ಹೋಗದೆ ಈ ಯೋಜನೆಯ ಕೆಲಸದಲ್ಲಿ ದುಡಿಯುತ್ತಿದ್ದೇವೆ. ಈ ಯೋಜನೆಯಲ್ಲಿ ನೀಡುವಂತಹ ಕೂಲಿ ನಮಗೆ ಸರಿಯಾಗಿ ದೊರೆಯುತ್ತಿಲ್ಲ. ಇದನ್ನು ೧೫ ದಿನಗಳಿಗೊಮ್ಮೆ ನಮಗೆ ನೀಡುತ್ತಿಲ್ಲ ಬದಲಾಗಿ ಹಲವು ತಿಂಗಳುಗಳ ನಂತರ ಪಡೆಯಬೇಕಾಗುತ್ತದೆ. ಆದ್ದರಿಂದ ನಮ್ಮಲ್ಲಿ ಎಷ್ಟೋ ಜನ ಈ ಯೋಜನೆಯ ಕೆಲಸಗಳಿಗೆ ಹೋಗುತ್ತಿಲ್ಲ. ಒಟ್ಟಿನಲ್ಲಿ ಇದು ನಮ್ಮ ಕುಟುಂಬಕ್ಕಂತೂ ಯಾವುದೇ ರೀತಿಯ ಭದ್ರತೆಯನ್ನು ಒದಗಿಸಿಲ್ಲ ಎಂದು ಹೇಳಿದರು.

**ಪ್ರಕರಣ ೭**

ನಾಯಕ ಸಮುದಾಯದ ಕುಬೇರಪ್ಪ ೫೮ ವರ್ಷದವರಾಗಿದ್ದು, ಬೇವಿನೂರು ಗ್ರಾಮಕ್ಕೆ ಸೇರಿದವರಾಗಿದ್ದಾರೆ. ಈ ಗ್ರಾಮವು ಗಣದಿನ್ನಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಗೆ ಒಳಪಡುತ್ತದೆ. ಇವರ ಕುಟುಂಬದಲ್ಲಿ ೫ ಜನ ಸದಸ್ಯರಿದ್ದು, ಇವರಲ್ಲಿ ೩ ಜನರು ಯೋಜನೆಯಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಕುಬೇರಪ್ಪನವರು ೨ನೇ ತರಗತಿಯವರೆಗೆ ಓದಿದ್ದು ಸ್ವಲ್ಪ ಅಕ್ಷರ ಜ್ಞಾನ ಬಲ್ಲವರಾಗಿದ್ದಾರೆ. ಇವರನ್ನು ಸಂದರ್ಶಿಸಿದಾಗ ಈ ಯೋಜನೆ ಬಂದಿದ್ದರಿಂದ ನಮ್ಮ ಊರಿನಲ್ಲಿ ಸ್ವಲ್ಪ ಅಭಿವೃದ್ಧಿ ಕಾರ್ಯಗಳು ನಡೆಯುತ್ತಿವೆ ಎಂದರು. ಉದ್ಯೋಗ ಕಾರ್ಡ್ ಯಾರ ಹೆಸರ ಮೇಲೆ ಇದೆ ಗ್ರಾಮಸಭೆಗಳಲ್ಲಿ ನೀವು ಭಾಗವಹಿಸುತ್ತೀರಾ ಎಂದು ಕೇಳಿದಾಗ ಉದ್ಯೋಗ ಕಾರ್ಡ್ ನನ್ನ ಹೆಸರ ಮೇಲಿದೆ ಎಂದರು. ಇದನ್ನು ನಿಮ್ಮ ಹೆಂಗಸರ ಹೆಸರಿನಲ್ಲಿ ಏಕೆ ಮಾಡಿಸಿಲ್ಲ ಎಂದಾಗ ಸಂಸಾರ ನಡೆಸುವವರು ನಾವು ಮತ್ತು ಮನೆಯ

ಯಜಮಾನನಾದ ನಾನು ಇರುವಾಗ ಹೆಣ್ಣು ಮಕ್ಕಳಿಗೆ ಮನೆಯ ವ್ಯವಹಾರವೆಲ್ಲ ಏನು ಗೊತ್ತಾಗುತ್ತದೆ. ಅವರು ಬ್ಯಾಂಕಿಗೆ ಹೋಗಿ ಬರೋದಕ್ಕೂ ಎದುರುತ್ತಾರೆ. ಹಾಗಾಗಿ ನಾನೇ ನನ್ನ ಹೆಸರ ಮ್ಯಾಲೆ ಕಾರ್ಡ್‌ನ್ನು ಮಾಡಿಸೀನಿ. ಹೆಣ್ಣು ಮಕ್ಕಳು ಮನೆ ಕೆಲಸ ಮಾತ್ರ ನೋಡಿಕೊಳ್ಳಬೇಕು. ಮತ್ತು ನಾವು ಹೇಳಿದ ಹಾಗೆ ಕೇಳಿಕೊಂಡು ಬಿದ್ದಿರಬೇಕು. ಅವರಿಗೆ ಏನಾದರೂ ಅಧಿಕಾರ ಕೊಟ್ಟರೆ ನಮ್ಮ ತಲೆಮ್ಯಾಲೆ ಬಂದು ಕುಂತುಗಂತಾರ ಎಂದು ಮಹಿಳೆಯರ ಮೇಲೆ ಅಸಮಧಾನವನ್ನು ವ್ಯಕ್ತಪಡಿಸಿದರು. ಇನ್ನು ಗ್ರಾಮ ಸಭೆಗಳು ಇಲ್ಲಿ ನಡೆದಿಲ್ಲ. ಈ ಕಾಮಗಾರಿಗಳು ಯಾರು, ಎಲ್ಲಿ, ಯಾವಾಗ ಜಾರಿಗೆ ತಂದರೂ ಅನ್ನೋದು ನಮಗೆ ಗೊತ್ತಾಗಿಲ್ಲ. ನಮ್ಮ ಊರಿನ ಪಂಚಾಯಿತಿಯ ಸದಸ್ಯರು ಸಹ ನಮಗೆ ಯಾವುದೇ ರೀತಿಯ ಸಲಹೆಗಳನ್ನು, ಮಾಹಿತಿಗಳನ್ನು ಕೊಡುವುದಿಲ್ಲ. ಅವರೇ ಓಟಿನ ಕಾರ್ಡಿನ ಪ್ರಕಾರ ಉದ್ಯೋಗ ಚೀಟಿಯನ್ನು ಮನೆಗೆ ಬಂದು ಕೊಟ್ಟಿದ್ದಾರೆ ಎಂದರು. ಈ ಯೋಜನೆಯು ನಿಮಗೆ ನಿಮ್ಮ ಕುಟುಂಬಕ್ಕೆ ಸಹಕಾರಿಯಾಗಿದೆಯೇ ಎಂದು ಕೇಳಿದಾಗ ಮಾಡಿದ ಕೂಲಿ ಪಂಚಾಯಿತಿಯವರು ಟೇಮ್ ಸರಿಯಾಗಿ ಕೊಟ್ಟರೆ ನಮ್ಮ ಬಾಳೇವು ಸ್ವಲ್ಪ ದಿನವಾದರೂ ಚಂದಾಗಿರ್ತೈತಿ. ಆದರೆ ಸರಿಯಾಗಿ ಕೊಡುತ್ತಿಲ್ಲ. ಮತ್ತು ಈ ಯೋಜನೆಯಲ್ಲಿ ಹಲವಾರು ಸೌಲಭ್ಯಗಳು ಇವೆಯಂತ, ಆದರೆ ಅವು ಯಾವುವು ನಮಗೆ ಗೊತ್ತಿಲ್ಲ ಎಂದು ಹೇಳುತ್ತಾರೆ. ಮುಂದುವರೆಸುತ್ತ ಈ ಯೋಜನೆಯಲ್ಲಿ ನೂರು ದಿನಗಳು ಕೆಲಸ ಕೊಡಬೇಕು ಎಂದಿದ್ದರೂ ಕೂಡ ಯಾರು ಸಹ ೧೦೦ ದಿನಗಳ ಕಾಲ ಕೆಲಸ ಕೊಡುತ್ತಿಲ್ಲ. ಸ್ವಲ್ಪ ದಿನ ಮಾಡಿಸಿ ನಮ್ಮನ್ನು ಉದ್ಯೋಗದಿಂದ ಹೊರಗುಳಿಯುವಂತೆ ಮಾಡುತ್ತಿದ್ದಾರೆ ಎಂದು ಹೇಳಿದರು.

ನಿರುದ್ಯೋಗದ ಭತ್ಯೆಯ ಬಗ್ಗೆ ಪ್ರಶ್ನಿಸಿದಾಗ ಅಂಗಂದರೆ ಏನು ಸಾರ್ ಎಂದು ನಮಗೆ ಮರು ಪ್ರಶ್ನೆ ಹಾಕಿದರು. ಅಂದರೆ ಇವರಿಗೆ ಈ ಯೋಜನೆಯ ಸಂಪೂರ್ಣ ಮಾಹಿತಿ ಇಲ್ಲ ಎಂಬುದು ತಿಳಿದುಬಂದಿತು. ಒಟ್ಟಿನಲ್ಲಿ ಇವರ ಪ್ರಕಾರ ಈ ಯೋಜನೆಯಿಂದ ಇವರ ಕುಟುಂಬದ ಆರ್ಥಿಕ ಪರಿಸ್ಥಿತಿ ಸುಧಾರಿಸಿಲ್ಲ ಎಂಬುದು ಕಂಡುಬರುತ್ತದೆ.

### ಪ್ರಕರಣ ೮

ಸಂಗಡದಿನ್ನಿ ಗ್ರಾಮದ ಮಾದೇವಪ್ಪ ೩೦ ವರ್ಷದವರಾಗಿದ್ದು, ಇವರಿಗೆ ಯಾವುದೇ ರೀತಿಯ ಅಕ್ಷರ ಜ್ಞಾನ ಇರುವುದಿಲ್ಲ. ಇವರಿಗೆ ಈ ಯೋಜನೆಯ ಬಗ್ಗೆ ಅಲ್ಪಸ್ವಲ್ಪ ಮಾಹಿತಿ ಇದೆ. ಈ ಗ್ರಾಮ ಗಣದಿನ್ನಿ ಗ್ರಾಮಪಂಚಾಯಿತಿಯ ವ್ಯಾಪ್ತಿಗೆ ಬರುತ್ತದೆ. ಇವರು ತೀರಾ ಕಡುಬಡತನದ ಕುಟುಂಬದಲ್ಲಿ ಜನಿಸಿದವರಾಗಿದ್ದಾರೆ. ಮತ್ತು ಜಾತಿಯಿಂದ ಚಲವಾದಿ ಸಮುದಾಯದವರಾಗಿದ್ದಾರೆ. ಇವರು ಕೂಡ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯುಲ್ಲಿ ಇವರ ಕುಟುಂಬವು ನೊಂದಾಯಿಸಲ್ಪಟ್ಟಿದ್ದು, ಮಾದೇವಪ್ಪನವರ ಹೆಸರಿನ ಮೇಲೆಯೇ ಉದ್ಯೋಗ ಖಾತರಿ ಯೋಜನೆಯ ಜಾಬ್ ಕಾರ್ಡ್‌ನ್ನು ಹೊಂದಿರುತ್ತಾರೆ. ಇವರ ಕುಟುಂಬದಲ್ಲಿ ೮ ಜನ ಸದಸ್ಯರಿದ್ದು ಇವರಲ್ಲಿ ೬ ಜನರು ಈ ಯೋಜನೆಯ

ವ್ಯಾಪ್ತಿಗೆ ಒಳಪಟ್ಟಿದ್ದಾರೆ. ಈ ಯೋಜನೆಯ ಬಗ್ಗೆ ಪ್ರಶ್ನಿಸಿದಾಗ ಈ ಯೋಜನೆಯು ತುಂಬಾ ಚಂದೈತಿರೀ ಅಂದ್ರೂ. ಆದರೆ ಇದು ಕೇವಲ ಊರಿನ ದಣಿಗಳ ಮತ್ತು ಸಾಹುಕಾರರ, ಶ್ರೀಮಂತರ, ಪಂಚಾಯಿತಿಯ ಸದಸ್ಯರ ಪಾಲಗುತ್ತಿದೆ ಎಂದು ಹೇಳಿದರು. ಇದನ್ನು ತಪ್ಪಿಸಬೇಕು. ಮತ್ತು ಪಂಚಾಯಿತಿಯವರು ಪಂಚಾಯುತಿ ಸಭೆಗಳನ್ನು ಸರಿಯಾಗಿ ಕರೆಯುವುದಿಲ್ಲ. ಮತ್ತು ಪಂಚಾಯಿತಿಯಲ್ಲಿ ಬಂದಂತ ಮನೆಗಳನ್ನು ಬಡವರಿಗೆ ಕೊಡದೆ ಶ್ರೀಮತರಿಗೆ ಕೊಡುತ್ತಾರೆ. ಅವರಿಂದ ಎರಡು ಮೂರು ಸಾವಿರ ಲಂಚ ಇಸಗೊಂತಾರ ಕೆಲಸ ಕೂಡ ಪಂಚಾಯಿತಿಯವರು ಸರಿಯಾಗಿ ಮಾಡುತ್ತಿಲ್ಲ. ಮತ್ತೆ ಪಂಚಾಯಿತಿ ಕಾಮಗಾರಿಗಳಲ್ಲಿ ಕೆಲಸ ಕೊಡುತ್ತಾರೆ ನಿಜ. ಆದರೆ ಅದು ಹೆಸರಿಗೆ ಮಾತ್ರ. ಇದುವರೆಗೂ ಈ ಕಾಮಗಾರಿಗಳು ಸರಿಯಾಗಿ ನಡೆಯುವುದೇ ಇಲ್ಲ. ನಾನು ಮತ್ತು ನಮ್ಮ ಕುಟುಂಬದವರು ಈ ಪಂಚಾಯಿತಿ ಹತ್ತಿರ ಹೋಗಿರುವುದು ಬಾಳ ಕಡಿಮಿ. ಹಾಗಾಗಿ ಇದು ನಮಗೆ ವರ್ಷದಲ್ಲಿ ೧೦೦ ದಿನಗಳು ಕೆಲಸವನ್ನು ಕೊಟ್ಟಿಲ್ಲ. ಸ್ವಲ್ಪ ದಿನ ಕೆಲಸ ಮಾಡಿಸಿಕೊಂಡು ಆ ಮೇಲೆ ನಮ್ಮನ್ನು ಕೆಲಸಕ್ಕೆ ಕರೆಯುವುದಿಲ್ಲ. ಮತ್ತೆ ಯಾರು ನಮಗೆ ಉದ್ಯೋಗ ಕಾರ್ಡ್‌ನ್ನು ಕೊಟ್ಟಿಲ್ಲ. ನಾವೇ ಗ್ರಾಮಪಂಚಾಯಿತಿಗೆ ಹೋಗಿ ಉದ್ಯೋಗ ಕಾರ್ಡನ್ನು ಪಡೆದುಕೊಂಡಿದ್ದೇವೆ. ಮತ್ತು ಯೋಜನೆಯಲ್ಲಿನ ಸೌಲಭ್ಯಗಳನ್ನು ಯಾರು ಸರಿಯಾಗಿ ನಮಗೆ ಒದಗಿಸುತ್ತಿಲ್ಲ ಎಂದರು. ಈ ಯೋಜನೆಯಲ್ಲಿ ನೀಡುವಂತಹ ಸಮಾನ ವೇತನವನ್ನು ಕುರಿತು ಪ್ರಶ್ನಿಸಿದಾಗ ಪ್ರಪಂಚದಾಗ ನಾವು ಹೆಂಗೋ ಹೆಣ್ಣು ಮಕ್ಕಳು ಹಂಗೆ ಅವರು ಕೂಡ ನಮ್ಮಂಗೆ ಮನುಷ್ಯರಲ್ಲವಾ ಅವರಿಗೆ ನಮ್ಮಂತೆ ಕೂಲಿ ಕೊಡುತ್ತಿರುವುದು ಸರಿಯಾಗಿದೆ ಎಂದು ಉದಾರವಾದಿ ನೆಲೆಯಲ್ಲಿ ಹೇಳಿದರು. ನೀವು ನಿವ್ಮ ಕುಟುಂಬದ ಹೆಣ್ಣುಮಕ್ಕಳನ್ನು ಗ್ರಾಮಪಂಚಾಯಿತಿಯ ಸಭೆಗಳಿಗೆ ಭಾಗವಹಿಸಲು ಅವಕಾಶ ಮಾಡಿಕೊಡುತೀರ ಎಂದು ಕೇಳಿದಾಗ ಮನೆಯ ಹಿರಿಯರು ಅಂತ ನಾವಿರುವಾಗ ಅವರನ್ನು ಯಾಕೆ ಕಳಿಸಬೇಕು. ಅವರು ಅಂತವುಗಳಿಗೆಲ್ಲಾ ಹೋದರೆ ಮನೆ ಕೆಲಸಗಳನ್ನು ಯಾರು ಮಾಡುತ್ತಾರೆ ಎಂದು ಹೇಳುತ್ತಾರೆ. ಮುಂದುವರಿದಂತೆ ಈ ಯೋಜನೆಯಲ್ಲಿ ಎಲ್ಲರಿಗೂ ಉದ್ಯೋಗ ಕಾರ್ಡ್‌ನ್ನು ಕೊಟ್ಟಿದ್ದಾರೆಯೇ ಎಂದು ಪ್ರಶ್ನಿಸಿದಾಗ ಇಲ್ಲ ಸಾರ್ ಯಾರು ಗ್ರಾಮಪಂಚಾಯಿತಿಗೆ ಹೋಗಿ ಮಗೆ ಕೆಲ್ಸ ಕೊಡಿ ಅಂತ ಕೇಳಿದ್ದಾರೋ ಅವರಿಗೆ ಮಾತ್ರ ಕೊಡುತ್ತಿದ್ದಾರೆ. ಮತ್ತು ಯಾವುದೇ ಗಾಮಸಭೆಗಳು ನಮ್ಮೂರಿನಲ್ಲಿ ನಡೆದಿಲ್ಲ. ಮತ್ತು ನಮ್ಮೂರಿನಲ್ಲಿ ಬಹಳಷ್ಟು ವಿದ್ಯಾವಂತ ಯುವಕರು ಇದ್ದಾರೆ. ಆದರೆ ಅವರು ಸಹ ಯಾವುದೇ ರೀತಿಯಲ್ಲಿ ಪ್ರಶ್ನಿಸುತ್ತಿಲ್ಲ ಎಂದು ಹೇಳಿದರು. ಮತ್ತು ನಮ್ಮ ಊರಿನಲ್ಲಿ ಯಾವ ಸಮಸ್ಯೆಗಳಿವೆ ಎಂಬುದು ಅವರಿಗೇನು ಗೊತ್ತಿರುತ್ತದೆ. ಅವರು ಅಲ್ಲಿಯೇ ಕುಳಿತುಕೊಂಡು ಕಾಮಗಾರಿಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ ಎಂದರು. ಈ ಯೋಜನೆಯಲ್ಲಿ ಕೊಡುವಂತಹ ಕೂಲಿಯು ನಮಗೆ ಸಾಕಾಗುತ್ತಿಲ್ಲ. ನಿರಂತರವಾಗಿ ೧೫ ದಿನಗಳವರೆಗೂ ಸಹ ನಮಗೆ ಕೆಲಸ ದೊರೆಯುತ್ತಿಲ್ಲ. ಹಾಗಾಗಿ ನಾವು ಇದನ್ನೇ ನಂಬಿಕೊಂಡಿದ್ದೇವೆ. ನಮ್ಮ ಹೊಟ್ಟೆಯ ಮೇಲೆ ತಣ್ಣೀರು ಬಟ್ಟೆಯನ್ನು ಹಾಕಿಕೊಳ್ಳಬೇಕಾಗುತ್ತದೆ. ಹಾಗಾಗಿ ಮನೆಯಲ್ಲಿ ಇಬ್ಬರನ್ನು ಈ ಯೋಜನೆಯ

ಕೆಲಸಕ್ಕೆ ಕಳುಹಿಸಿ ಉಳಿದವರು ಬೇರೆ ಬೇರೆ ಕೆಲಸಕ್ಕೆ ಹೋಗುತ್ತಿದ್ದೇವೆ ಎಂದು ತಮ್ಮ ಅಸಮಾಧನವನ್ನು ವ್ಯಕ್ತಪಡಿಸಿದರು. ಇವರ ಪ್ರಕಾರ ಯೋಜನೆಯು ಯಾವುದೇ ರೀತಿಯ ಪ್ರಯೋಜನವನ್ನು ಒದಗಿಸಿಲ್ಲ.

**ಪ್ರಕರಣ ೯**

ಮಾನ್ವಿ ತಾಲೂಕಿನ ಗಣದಿನ್ನಿ ಗ್ರಾಮಕ್ಕೆ ಭೇಟಿ ನೀಡಿದಾಗ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿ ಜಾಬ್ ಕಾರ್ಡ್‌ನ್ನು ಹೊಂದಿದವರಲ್ಲಿ ಯಲ್ಲಮ್ಮ ಎನ್ನುವವರು ಒಬ್ಬರೂ ಇವರು ಸುಮಾರು ೩೬ ವರ್ಷದವರಾಗಿದ್ದು, ಅನಕ್ಷರಸ್ಥರಾಗಿದ್ದಾರೆ. ಹಾಗೂ ಇವರು ಗ್ರಾಮದ ಅತ್ಯಂತ ಕೆಳವರ್ಗದವಾದ ಬೋವಿ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರ ಕುಟುಂಬದಲ್ಲಿ ಸುಮಾರು ೫ ಜನ ಸದಸ್ಯರಿದ್ದು, ಮೂರು ಜನ ಮಾತ್ರ ಈ ಯೋಜನೆಯ ಅರ್ಹ ಫಲಾನುಭವಿಗಳಾಗಿದ್ದಾರೆ. ಮಲ್ಲಮ್ಮ ಎನ್ನುವವರನ್ನು ಈ ಯೋಜನೆಯ ಕುರಿತು ಪ್ರಶ್ನಿಸಿದಾಗ, ಇವರು ತಮ್ಮ ವಿವೇಚನೆಗೆ ತಕ್ಕಂತೆ ಮಾಹಿತಿಯನ್ನು ನೀಡಿದರು. ಆದರೂ ಕೂಡ ಈ ಯೋಜನೆಯ ಸಂಪೂರ್ಣ ಮಾಹಿತಿ ಇಲ್ಲದಿರುವುದು ಇವರಿಂದ ತಿಳಿದು ಬಂದಿತು. ಅವರೇ ಹೇಳಿದ ಹಾಗೆ ನಮ್ಮ ಕುಟುಂಬದಲ್ಲಿ ನಾನು, ನನ್ನ ಗಂಡ ಮತ್ತು ೩ ಜನ ಮಕ್ಕಳು ಇದ್ದೀವಿ ಸಾರ್. ಒಬ್ಬರೂ ಶಾಲೆಗೆ ಹೋಗುತ್ತಾರೆ. ಮತ್ತೆ ಒಬ್ಬನು ಗೌಡರ ಮನೆಯಲ್ಲಿ ಜೀತಕ್ಕೆ ಇಟ್ಟೇವಿ. ಒಬ್ಬನು ಮಾತ್ರ ನಮ್ಮ ಜೊತೆಯಲ್ಲಿ ಈ ಯೋಜನೆಯ ದಗದಕ್ಕೆ ಬರ್ತಾನೆ ಎಂದು ಹೇಳಿದಳು. ಮುಂದುವರೆದು ಇತ್ತೀಚಿಗೆ ನನ್ನ ಗಂಡನಿಗೆ ಆರೋಗ್ಯ ಸರಿಯಿಲ್ಲದ ಕಾರಣ ದಗದಕ್ಕೆ ಬರುವುದು ಆಗುವುದಿಲ್ಲ. ನಾನು ಮತ್ತು ನನ್ನ ದೊಡ್ಡ ಮಗ ದುಡಿಯುತ್ತೇವೆ. ಪ್ರತಿದಿನ ದುಡಿಬೇಕು ತಿನ್ನಬೇಕು. ಈ ಯೋಜನೆ ಕೆಲಸ ಇಲ್ಲದಿದ್ದಾಗ ಹೊರಗಡೆ ಗೌಡರ, ದಣಿಗಳ, ದಗದಕ್ಕ  ಹೋಗುತೀವಿ ಆದರಿಂದ ಬಂದಂತಹ ಆದಾಯದಿಂದ ಜೀವನ ನಡಿಸಬೇಕು. ಮತ್ತು ನನ್ನ ಗಂಡನಿಗೆ ಆಸ್ಪತ್ರೆಗೆ ತೋರಿಸಬೇಕು ಎಂದು ಕಣ್ಣೀರಿಡುತ್ತ ಹೇಳಿದರು. ಈ ಯೋಜನೆ ಬಂದಾಗಿನಿಂದ ನೀವು ಗುಳೆ ಹೋಗುವುದು ತಪ್ಪಿದೇನಾ ಎಂದು ಪ್ರಶ್ನಿಸಿದಾಗ. ಏನು ಕಡಿಮೆ ಆಗಿಲ್ಲ ಸಾರ್ ವರ್ಸಾದಾಗ ನೂರು ದಿನ ಕೆಲಸ ಕೊಡುತಾರ ಪಂಚಾಯತ್ ಕೆಲಸ ಇಲ್ಲದಾಗ ಪೂನ ಬಾಂಬೆ, ಬೆಂಗಳೂರುಗೆ ಹೋಗ್ತಾರೆ ಎಂದು ಹೇಳಿದರು. ಈ ಯೋಜನೆಯಲ್ಲಿ ಪಡೆದಂತಹ ಕೂಲಿಯನ್ನು ನೀನು ನಿನ್ನ ಹತ್ತಿರ ಇಟ್ಟುಕೊಂತಿಯೇನು ಎಂದು ಕೇಳಿದಾಗ ಇಲ್ಲ ರೀ ನನ್ನ ಹೆಸರ ಮ್ಯಾಲೆ ಖಾತೆ ಐತೆ ಆದರೆ ನಾನ್ ರೊಕ್ಕ ತಂದು ನನ್ನ ಗಂಡನ ಕೈಯಲ್ಲಿ ಕೊಡುತೀನಿ ಎಂದಳು. ಈ ಯೋಜನೆಯಲ್ಲಿ ಕೆಲಸದ ಸ್ಥಳದಲ್ಲಿ ಯಾವ ಸೌಲಭ್ಯ ಕೊಟ್ಟಿದ್ದಾರೆ ಎಂದು ಪ್ರಶ್ನಿಸಿದಾಗ, ಇಲ್ಲ ರೀ ಸಾಬ್ರೆ ನಮಗೆ ಯಾವ ವ್ಯವಸ್ಥೆ ಮಾಡಿಲ್ಲ. ಕುಂದ್ರಾಕೆ ನೆಳ್ಳು ಮಾಡಿಲ್ಲ. ಹೆಣ್ಣುಮಕ್ಕಳಿಗೆ ಬಚ್ಚಲು ಮಾಡಿಲ್ಲ. ಕುಡಿಯುವ ನೀರಿನ ವ್ಯವಸ್ಥೆ ಮಾಡಿಲ್ಲ ಮತ್ತು ಕೆಲಸ ಮಾಡುವಾಗ ಏನಾರ ಗಾಯ ಆಯಿತು ಅಂದ್ರ ಯಾರು ನಮಗೆ ಆಸ್ಪತ್ರೆಗೆ ಕರಕೊಂಡು ಹೋಗುದಿಲ್ಲರೀ ಸಾರ್ ಎಂದು ಹೇಳಿದರು. ಈ ಯೋಜನೆಯಲ್ಲಿ ಹೆಣ್ಣು

ಮಕ್ಕಳಿಗೆ ಮತ್ತು ಗಂಡಸರಿಗೆ ಸಮಾನ ಕೂಲಿ ಕೊಡ್ತಾರೇನು ಎಂದು ಪ್ರಶ್ನೆ ಹಾಕಿದಾ ಅದೇನು ಕೇಳಿತೀರಿ ಬಿಡ್ರಿ ಸಾರ್ ನಮ್ಮಂತವರನ್ನು ಯಾರು ಕೇಳುತ್ತಾರ ರೀ ನಮಗೆ ೭೦ ರೂ. ಕೂಲಿ ಕೊಟ್ಟಾರ ಆದ್ರೆ ಅದೇ ಗಂಡಸರಿಗೆ ೮೨ ರೂ.ಕೂಲಿ ಕೊಟ್ಟಾರ ಸಾರ್ ಅದೇ ಸಾಲಿ ಕಲಿತ ಗಂಡಸರು ಇದ್ದ ಮನೆ ಹೆಣ್ಣು ಮಕ್ಕಳಿಗೆ ೮೨ ರೂ. ಕೂಲಿ ಕೊಟ್ಟಾರ ಆದ್ರೆ ನಮ್ಮಂತ ದಡ್ಡನ್ನ ನೋಡಿ ಕಡಿಮೆ ಕೂಲಿ ಕೊಟ್ಟಿದ್ದಾರೆ. ಎಂದು ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದರು. ೮೨ ರೂ.ಕೂಲಿ ನಿಮ್ಮ ಜೀವನ ನಿರ್ವಹಣೆಗೆ ಸಾಕಾಗುತ್ತಿದೆಯೇ ಎಂದು ಕೇಳಿದಾಗ. ಈ ಕಾಲದಾಗ ಯಾವುದು ಅಗತಾರ ಆದ ಸಾರ್ ಅಕ್ಕಿ, ಬೇಳೆ, ಜೋಳ, ತರಕಾರಿ ಪ್ರತಿಯೊಂದು ತುಟ್ಟಿ ಇರಬೇಕಾದ್ರೆ ೮೨ ರೂ.ಕೂಲಿ ಯಂಗ ಸರಿಹೋಗುತ್ತದೆ, ಜಾಸ್ತಿ ಮಾಡಬೇಕು ಮತ್ತು ವರ್ಷ ಪೂರ್ತಿ ಪಂಚಾಯಿತಿಯ ಕೆಲಸ ಕೊಟ್ರೆ ಜೀವನ ಚಂದಾಗಿ ನಡೆಸಬಹುದು ಎಂದು ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದರು.

## ಪ್ರಕರಣ ೧೦

೩೦ ವರ್ಷದ ರಾಧಮ್ಮ ಎನ್ನುವವರು ಜಕ್ಕಲದಿನ್ನಿ ಗ್ರಾಮದವರಾಗಿದ್ದಾರೆ. ಇವರು ಅನಕ್ಷರಸ್ಥರಾಗಿರುತ್ತಾರೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿ ಉದ್ಯೋಗ ಕಾರ್ಡ್ ಹೊಂದಿದ ಕುಟುಂಬಗಳಲ್ಲಿ ಇವರದು ಒಂದು ಕುಟುಂಬವಾಗಿರುತ್ತದೆ. ಇವರು ಮಡಿವಾಳ ಸಮುದಾಯಕ್ಕೆ ಸೇರಿದವರಾಗಿದ್ದು, ಅವಿದ್ಯಾವಂತರಾಗಿದ್ದರೂ ಕೂಡ ತುಂಬ ಕ್ರಿಯಾಶೀಲತೆಯನ್ನು ಹೊಂದಿದವರಲ್ಲಿ ಒಬ್ಬರು ಎಂದು ಹೇಳಬಹುದು. ತೀರಾ ಬಡತನದಿಂದ ಕೂಡಿದ ಕುಟುಂಬವಾಗಿದ್ದು, ದಿನಾಲು ಚಾಚುತಪ್ಪದೆ ದುಡಿದು ಬಂದಂತಹ ಹಣದಿಂದ ಜೀವನ ನಡೆಸುವಂತ ಕುಟುಂಬ ಇವರದಾಗಿರುತ್ತದೆ. ಇವರ ಕುಟುಂಬದಲ್ಲಿ ೮ ಜನ ಸದಸ್ಯರಿದ್ದು, ಇಬ್ಬರೂ ಮಾತ್ರ ಈ ಯೋಜನೆಯಲ್ಲಿ ಉದ್ಯೋಗ ಕಾರ್ಡ್‌ನ್ನು ಪಡೆದಿದ್ದಾರೆ. ಈ ಯೋಜನೆಗೆ ಸಂಬಂಧಪಟ್ಟಂತೆ ಇವರನ್ನು ಪ್ರಶ್ನಿಸಿದಾಗ ಇವರಿಗೆ ಯೋಜನೆಯ ಸಂಪೂರ್ಣ ಮಾಹಿತಿ ಇಲ್ಲದಿರುವುದು ತಿಳಿದುಬಂದಿತು. ಅವರೇ ಹೇಳಿದ ಹಾಗೆ ನನ್ನ ಕುಟುಂಬದಲ್ಲಿ ೮ ಜನ ಇದ್ದೀವಿ ಇವರಲ್ಲಿ ನಾವು ನನ್ನ ಗಂಡ ಮತ್ತು ೬ ಜನ ಮಕ್ಕಳಿದ್ದಾರೆ. ಇವರಲ್ಲಿ ೩ ಮಕ್ಕಳು ಶಾಲೆಗೆ ಹೋಗುತ್ತಾರೆ. ಇನ್ನು ಮೂರು ಮಕ್ಕಳು ಚಿಕ್ಕವು ಇವೆ. ಆದ್ದರಿಂದ ಅವು ಮನೆಯಲ್ಲಿ ಇರ್ತಾವ ಎಂದ ಹೇಳಿದರು. ಹಾಗೆ ಮುಂದುವರೆಯುತ್ತ ನಮ್ಮದು ದೊಡ್ಡ ಕುಟುಂಬ ಮನ್ಯಾಗ ದುಡಿಯೋರು ಯಾರು ಇಲ್ಲ ಕಿತ್ತು ತಿನ್ನವಂತಹ ಬಡತನ ನಮ್ಮದು. ದಿನ ಮನೆಯಿಂದ ಹೊರಗಡೆ ಹೋಗಿ ಪಂಚಾಯಿತಿ ಕೆಲಸಗಳಲ್ಲಿ ಇಲ್ಲಂದ್ರೆ ಹೊಲಗದ್ದೆಗಳಲ್ಲಿ ದುಡಿದುಕೊಂಡು ಬಂದು ಅದರಿಂದ ಬಂದ ರೊಕ್ಕದಿಂದ ಸಂಸಾರ ನಡೆಸುತ್ತೀವಿ. ಒಂದು ವೇಳೆ ಕೆಲ್ಸಾ ಸಿಗಲಿಲ್ಲ ಅಂದ್ರೆ ಕೆಲಸ ಹುಡುಕಿಕೊಂಡು ಬೇರೆ ಊರುಗಳಿಗೆ ಹೋಗಿ ದುಡಿದು ಬರ್ತಿವಿ. ಆದರೆ ಈಗ ಯೋಜನೆ ಬಂದಾಗಿನಿಂದ ಗುಳೆ ಹೋಗುವುದು ಸ್ವಲ್ಪ ತಪ್ಪಾದ ರೀ ಸಾರ್ ಎಂದು ಹೇಳಿದರು. ನೀವು ಉದ್ಯೋಗ ಹೇಗೆ

ಪಡೆದುಕೊಂಡ್ರಿ ಎಂದು ಪ್ರಶ್ನಿಸಿದಾಗ. ನನಗೆ ಉದ್ಯೋಗ ಕಾರ್ಡ್ ಅಂದ್ರೆ ಏನು ಅಂತ ನನಗೆ ಆಗಲಿ ನನ್ನ ಗಂಡನಿಗೆ ಆಗಲಿ ಗೊತ್ತಿರಲಿಲ್ಲ ಸಾರ್. ಆದರೂ ಹೊಟ್ಟೆ ಪಾಡು ಏನು ಮಾಡಬೇಕು ಊರಿನ ಸಾಲಿ ಕಲಿತವರ ಮತ್ತು ತಿಳಿದವರ ಕಾಲು ಕೈ ಹಿಡಿದು ನಮಗೆ ಉದ್ಯೋಗ ಕಾರ್ಡ್‌ನ್ನು ಮಾಡಿಸಿಕೊಡಿ ಎಂದು ಪಂಚಾಯಿತಿಯವರಿಗೆ ರೊಕ್ಕ ಕೊಟ್ಟು ಉದ್ಯೋಗ ಕಾರ್ಡ್‌ನ್ನು ಮಾಡಿಸಿ ಕೊಂಡೀವಿ ಸಾರ್. ನಮ್ಮಂತವರು ಈ ಭೂಮಿ ಮ್ಯಾಲೆ ಬದುಕಬಾರದು ಸಾರ್ ನಾವು ಸಾಯೋದು ಎಷ್ಟೋ ಮೇಲು ಆದರೂ ಮಕ್ಕಳಿಗಾಗಿಯಾದರು ನಾವು ಬದುಕಬೇಕಲ್ಲ ಇದೇನಿದ್ದರು ಬಂಡಜೀವ ರೀ ಎಂದು ಕಣ್ಣೀರುಡತ್ತ ತನ್ನ ಮನದಾಳದ ಮಾತನ್ನು ಹೊರಹಾಕಿದಳು. ಈ ಯೋಜನೆ ಬಂದಾಗಿನಿಂದ ನಿಮ್ಮ ಆರ್ಥಿಕ ಪರಿಸ್ಥಿತಿ ಯಾವ ರೀತಿ ಇದೆ ಎಂದು ಪ್ರಶ್ನಿಸಿದಾಗ. ಸಾರ್ ದಿನ ಬೆಳಿಗ್ಗೆ ಎದ್ದರೆ ತಲೆಮ್ಯಾಲೆ ಬುತ್ತಿ ಇಟ್ಟುಕೊಂಡು ಹೋಗೋದು ಅಂತೂ ಯಾರು ತಪ್ಪಿಸೋಕೆ ಆಗಲ್ಲ. ಪ್ರತಿನಿತ್ಯನು ನಮ್ಮದು ಇದ್ದದೆ ನಾಯಿ ಬದುಕು. ಈ ಯೋಜನೆಯಲ್ಲಿ ವರ್ಷದಲ್ಲಿ ನೂರು ದಿನ ಮಾತ್ರ ಕೆಲ್ಸಾ ಕೊಡುತ್ತಾರೆ. ಆದರೆ ವರ್ಷಪೂರ್ತಿ ಕೆಲಸ ಕೊಟ್ರೇ ಮಾತ್ರ ನಮ್ಮಂತವರು ಚಂದ ಇರಾಕ ಆಗುತೈತಿ ಸಾರ್ ಎಂದು ಹೇಳಿದಳು. ೮೨ ರೂ. ಕೂಲಿ ನಿಮ್ಮ ಜೀವನಕ್ಕೆ ಸಾಕಾಗುತ್ತದೆಯೇ ಎಂದು ಕೇಳಿದಾಗ ಅಯ್ಯೋ ಸಾರ್ ಈ ಕಾಲದಾಗ ಯಾವುದು ಅಗತಾರ ಆದ ಬೇಳೆ, ಅಕ್ಕಿ, ಜೋಳ, ತರಕಾರಿ, ಎಣ್ಣೆ, ಪ್ರತಿಯೊಂದು ಮನೆ ಬಳಕೆ ಸಾಮಾನು ತುಟ್ಟಿ ಆಗ್ಯಾವ ಹಂಗಾಗಿ ಕೂಲಿ ಜಾಸ್ತಿ ಮಾಡಬೇಕು ಸಾರ್ ಎಂದು ಹೇಳಿದರು. ನಿಮ್ಮ ಊರಲ್ಲಿ ಉದ್ಯೋಗ ಖಾತರಿ ಯೋಜನೆಯಾಗ ಯಾರನ್ನ ಮೇಸ್ತ್ರಿನ ಮಾಡ್ಯಾರ ಎಂದು ಕೇಳಿದಾಗ ಸಾರ್ ದೇವರಾಜ ಅಂತ ಹೇಳಿ ಇದ್ದಾನೆ ಬಹಳ ಬೆರಕಿ ಇದ್ದಾನೆ ಹೆಣ್ಣು ಮಕ್ಕಳನ್ನು ಕಂಡ್ರೆ ಸಾಕು ತಿನ್ನುವಾಂಗೆ ನೋಡುತ್ತಾನೆ ಸಾರ್ ಅವ ಮನುಷ್ಯ ಸರಿ ಇಲ್ಲ ಸಾರ್ ಎಂದು ಹೇಳಿದರು. ಹೆಣ್ಣುಮಕ್ಕಳನ್ನು ಏಕೆ ಮೇಸ್ತ್ರಿ ಕೆಲಸಕ್ಕೆ ತಗೊಂಡಿಲ್ಲ ಓದಿದವರು ಯಾರು ಇಲ್ಲ ಏನಮ್ಮ ಎಂದು ಪ್ರಶ್ನಿಸಿದಾಗ. ಸಾರ್ ಬಹಳ ಹೆಣ್ಣು ಮಕ್ಕಳು ಸಾಲಿ ಕಲಿತೋರು ಇದ್ದಾರೆ. ಆದರೆ ಹೆಣ್ಣು ಮಕ್ಕಳನ್ನು ಯಾರು ಕೇಳುತಾರ ಸಾರ್ ಎಲ್ಲ ಗಂಡಸರದೇ ಅಧಿಕಾರ ಎಂದು ಪ್ರತಿಯೊಂದಕ್ಕೂ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತ ತನ್ನ ಮಾತನ್ನು ಮುಗಿಸಿದಳು.

ಮೇಲಿನ ಎಲ್ಲಾ ಪ್ರಕರಣಗಳನ್ನು ಗಮನಿಸಿದಾಗ ಉದ್ಯೋಗ ಖಾತರಿ ಯೋಜನೆಯು ಸಮರ್ಪಕವಾಗಿ ಜಾರಿಗೆ ಬಂದಿಲ್ಲ ಮತ್ತು ಜನರಿಗೆ ಈ ಯೋಜನೆಯ ಲಾಭ ದೊರೆತಿಲ್ಲ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಮಹಿಳೆಯರ ಅನುಭವಗಳನ್ನು ಮತ್ತು ಪುರುಷರ ಅನುಭವಗಳನ್ನು ಪರಿಶೀಲಿಸಿದಾಗ ಮಹಿಳೆಯರು ಈ ಯೋಜನೆಯಿಂದ ಹಲವಾರು ತೊಂದರೆಗಳನ್ನು ಅನುಭವಿಸಿದ್ದಾರೆ. ಮತ್ತು ಪುರುಷರು ಯಾವುದೇ ರೀತಿಯ ಕಷ್ಟಗಳನ್ನು ಅನುಭವಿಸದೇ ಸ್ತ್ರೀಯರ ಮೇಲೆ ಅನೇಕ ರೀತಿಯ ಒತ್ತಡಗಳನ್ನು ಹೇರುತ್ತಿದ್ದಾರೆ. ಕುಟುಂಬದಿಂದ ಹಿಡಿದು ಹೊರಗೆ ಹೋಗಿ ದುಡಿಯುವವರೆಗೂ ಮಹಿಳೆಯು ಅನೇಕ

ಒತ್ತಡಗಳಿಂದ ನರಳುತ್ತಿದ್ದಾಳೆ. ಕುಟುಂಬ ಹಾಗೂ ಕೌಟುಂಬಿಕ ವ್ಯವಸ್ಥೆಯು ಮಹಿಳೆಯರ ಮೇಲೆ ಅನೇಕ ಬಗೆಯ ನಿಯಂತ್ರಣಗಳನ್ನು ವಿಧಿಸುತ್ತಿದೆ. ಪುರುಷರಿಗೆ ಇಲ್ಲದಿರುವ ನಿಯಂತ್ರಣ ಮಹಿಳೆಯರ ಮೇಲೆ ವಿಧಿಸಲಾಗುತ್ತಿದೆ. ಮತ್ತು ಈ ಯೋಜನೆಯಲ್ಲಿ ಉದ್ಯೋಗ ಕಾರ್ಡ್‌ನ್ನು ಹೊಂದಿದವರು ಹೆಚ್ಚಾಗಿ ದಲಿತ ಮಹಿಳೆಯರು. ಇವರು ಕುಟುಂಬದಿಂದ ಹೊರಬಂದು ದುಡಿದರೂ ಸಹ ಪುರುಷನ ನಿಯಂತ್ರಣದಿಂದ ಮುಕ್ತಿಯನ್ನು ಹೊಂದಿಲ್ಲ. ಇನ್ನು ಪುರುಷಶಾಹಿ ಚಿಂತನೆಗಳು ಮಹಿಳೆಯನ್ನು ಎರಡನೇ ದರ್ಜೆಯವಳೆಂದೇ ನೋಡುವುದರ ಮೂಲಕ ಅವಳ ದುಡಿಮೆಯನ್ನು ದುಡಿಮೆ ಎಂದು ಪರಿಗಣಿಸಿಲ್ಲ. ಅವಳನ್ನು ಕೇವಲ ಅನುಭೋಗಿಯ ನೆಲೆಯಲ್ಲಿಯೇ ನೋಡಲಾಗುತ್ತದೆ. ಸಮಾಜದಲ್ಲಿರುವ ರೂಢಿ ಸಂಪ್ರದಾಯಗಳೂ ಸಹ ಅವರನ್ನು ಕಟ್ಟಿ ಹಾಕಿವೆ.

ಕೆಲವು ಪ್ರಕರಣಗಳಲ್ಲಿ ಮಹಿಳೆಯರು ಸಮಾಜದ ವ್ಯವಸ್ಥೆಯನ್ನು ಪ್ರಶ್ನಿಸುವ ಧೈರ್ಯವನ್ನು ಮಾಡಿದ್ದಾರೆ. ಆದರೆ ಅವರು ಬೇರೆ ರೀತಿಯಲ್ಲಿ ಅನುಮಾನಕ್ಕೆ ಒಳಗಾಗಿದ್ದಾರೆ(ಗಯ್ಯಾಳಿ, ಗಂಡುಬೀರಿ). ಹಾಗಾಗಿ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರು ಸ್ವತಂತ್ರವಾಗಿ ಬದುಕುವುದು ಕನಸಿನ ಮಾತಾಗಿದೆ. ಇನ್ನು ಯೋಜನೆಯ ಸೌಲಭ್ಯಗಳೆಲ್ಲವೂ ಕೂಡ ಉನ್ನತವರ್ಗದವರ ಪಾಲುಗುತ್ತಿರುವುದು ಕಂಡುಬರುತ್ತದೆ. ಈ ಯೋಜನೆಯಲ್ಲಿ ತೊಡಗಿಕೊಂಡಿರುವ ಮಹಿಳೆಗೆ ಗೃಹವಾರ್ತೆಯಿಂದ ಬಿಡುಗಡೆಯೇನೂ ದೊರೆತಿಲ್ಲ. ಇದರಿಂದಾಗಿ ಮಹಿಳೆಯರು ಎರಡು ಬಗೆಯ ಹೊಣೆಯನ್ನು ನಿಭಾಯಿಸಬೇಕಾಗುತ್ತದೆ. ಉದ್ಯೋಗವೆಂಬುದು ಇಂತಹ ಸಂದರ್ಭದಲ್ಲಿ ಬಿಡುಗಡೆಯ ಸಾಧನವಾಗುವುದಕ್ಕೆ ಬದಲಾಗಿ ಸಂಕೋಲೆಯಾಗಿಬಿಟ್ಟಿದೆ. ಇನ್ನು ಪುರುಷರನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಅವರಲ್ಲಿ ಸಂಪೂರ್ಣವಾಗಿ ಪುರುಷಶಾಹಿ ಚಿಂತನೆಗಳು ಕಂಡುಬರುತ್ತವೆ. ಈ ಯೋಜನೆಯಲ್ಲಿನ ಸಮಾನ ವೇತನವು ಪುರುಷರನ್ನು ಗೊಂದಲಕ್ಕೀಡು ಮಾಡಿವೆ. ಅವರ ದೃಷ್ಟಿಯಲ್ಲಿ ಪುರುಷ ಮತ್ತು ಮಹಿಳೆಯರಿಗೆ ವೇತನದಲ್ಲಿ ಸಮಾನತೆ ಇರಬಾರದು. ಏಕೆಂದರೆ ಮಹಿಳೆಯರು ಪುರುಷರ ಮೇಲು ಎಂದು ಭಾವಿಸುವ ಅಪಾಯಕರ ವಾತಾವರಣ ನಿರ್ಮಾಣಗೊಂಡಿದೆ. ಕೆಲವು ಪ್ರಕರಣಗಳು ಮಹಿಳೆಯರನ್ನು ಉದಾರವಾದಿ ನೆಲೆಯಲ್ಲಿ ಕಂಡಿವೆ. ಅದರ ಹಿಂದೆ ಅಸಮಾಧನ ಇದ್ದೇ ಇರುತ್ತದೆ.

ಒಟ್ಟಿನಲ್ಲಿ ಈ ಪ್ರಕರಣ ಅಧ್ಯಯನಗಳೆಲ್ಲವನ್ನು ಕೂಡ ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿಯೇ ವಿವರಿಸಲಾಗಿದೆ. ಹಾಗಾಗಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಎಲ್ಲಿ ವಿಫಲತೆಯನ್ನು ಅನುಭವಿಸಿದೆ ಎಂಬುದು ಮತ್ತು ಮಹಿಳೆಯರ ಮೇಲೆ ಇದು ಯಾವ ರೀತಿ ಪರಿಣಾಮ ಬೀರಿದೆ ಎಂಬುದನ್ನು ಈ ಪ್ರಕರಣ ಅಧ್ಯಯನದಿಂದ ತಿಳಿಯಬಹುದಾಗಿದೆ.

## ಅಧ್ಯಾಯ ೭

# ಉದ್ಯೋಗ ಖಾತ್ರಿ ಯೋಜನೆ-ಒಂದು ಲಿಂಗ ಸಂಬಂಧಿ ಅಧ್ಯಯನ

೭.೧. ಯೋಜನೆಯ ಪೂರ್ವದಲ್ಲಿನ ಮಹಿಳೆಯರ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗತಿಗಳು.

೭.೨. ಯೋಜನೆಯಲ್ಲಿನ ಲಿಂಗತಾರತಮ್ಯದ ನೆಲೆಗಳು ಮತ್ತು ಮಹಿಳೆಯ ಪಾಲ್ಗೊಳ್ಳುವಿಕೆ.

೭.೩. ಯೋಜನೆಯ ಪ್ರತಿಫಲಗಳು.

೭

# ಉದ್ಯೋಗ ಖಾತ್ರಿ ಯೋಜನೆ-ಒಂದು ಲಿಂಗ ಸಂಬಂಧಿ ಅಧ್ಯಯನ

ಒಂದು ದೇಶದ ಅಭಿವೃದ್ಧಿ ಆ ದೇಶದ ಮಾನವ ಅಭಿವೃದ್ಧಿಯನ್ನು ಅವಲಂಬಿಸಿರುತ್ತದೆ. ಇಲ್ಲಿ ಮಾನವ ಅಭಿವೃದ್ಧಿ ಎಂಬುದು ಸ್ತ್ರೀ ಪುರುಷರಿಬ್ಬರನ್ನು ಒಳಗೊಳ್ಳುತ್ತದೆ. ಭಾರತದಲ್ಲಿ ಈ ಮಾನವ ಅಭಿವೃದ್ಧಿಯು ತುಂಬಾ ನಿಧಾನಗತಿಯಲ್ಲಿ ನಡೆದಿರುವುದು ಕಂಡುಬರುತ್ತದೆ. ಹಾಗಾಗಿ ಭಾರತವು ಇನ್ನು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಸಾಲಿನಲ್ಲಿಯೇ ಮುಂದುವರೆದಿದೆ. ಭಾರತವು ಹಳ್ಳಿಗಳ ತವರೂರಾಗಿದೆ. ಈ ಹಳ್ಳಿಗಳಲ್ಲಿ ವಾಸಿಸುವ ಜನರು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಹಾಗಾಗಿ ಮೊದಲು ಈ ಹಳ್ಳಿಗಳನ್ನು ಅಭಿವೃದ್ಧಿ ಪಡಿಸುವ ಸಲುವಾಗಿ ಮತ್ತು ಇಲ್ಲಿ ವಾಸಿಸುತ್ತಿರುವ ಜನರ ಜೀವನ ಮಟ್ಟವನ್ನು ಸುಧಾರಿಸುವುದರ ಸಲುವಾಗಿ ಭಾರತ ಸರ್ಕಾರ ಹಲವಾರು ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತರುತ್ತಲೇ ಬಂದಿದೆ. ಆದರೆ ಇವುಗಳು ಯಾವುವು ಪರಿಪೂರ್ಣತೆಯನ್ನು ಪಡೆದುಕೊಂಡಿಲ್ಲ. ಹಾಗಾಗಿ ಹಳ್ಳಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಬಡತನ ನಿರುದ್ಯೋಗ ಮುಂತಾದ ಸಮಸ್ಯೆಗಳನ್ನು ನಿವಾರಿಸಿಕೊಳ್ಳುವುದರ ಸಲುವಾಗಿ ಜನರು ಉದ್ಯೋಗಗಳನ್ನರಸಿ ಊರೂರು ಅಲೆಯಬೇಕಾಗುವಂತಹ ಪರಿಸ್ಥಿತಿ ತಲೆದೋರಿದೆ. ಹಾಗಾಗಿ ಈ ಪರಿಸ್ಥಿತಿಯನ್ನು ಶಾಶ್ವತವಾಗಿ ಪರಿಹರಿಸುವ ನಿಟ್ಟಿನಲ್ಲಿ ಕಳೆದ ನಾಲ್ಕು ವರ್ಷಗಳ ಹಿಂದೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯನ್ನು ಜಾರಿಗೆ ತಂದಿತು. ಗ್ರಾಮೀಣ ಭಾಗದ ಜನರಿಗೆ ವರ್ಷದಲ್ಲಿ ಪ್ರತಿ ಕುಟುಂಬಕ್ಕೆ ೧೦೦ ದಿನಗಳು ತಮ್ಮ ಊರಿನಲ್ಲಿಯೇ ಉದ್ಯೋಗವನ್ನು ಒದಗಿಸುವುದು ಮತ್ತು ಉದ್ಯೋಗವನ್ನು ಒದಗಿಸದೇ ಇದ್ದಲ್ಲಿ ನಿರುದ್ಯೋಗ ಭತ್ಯೆಯನ್ನು ನೀಡುವುದು. ಈ ಮೂಲಕ ಗ್ರಾಮೀಣ ಭಾಗದ ಜನರ ಜೀವನ ಮಟ್ಟವನ್ನು ಸುಧಾರಿಸುವುದು ಇದರ ಮುಖ್ಯ ಉದ್ದೇಶವಾಗಿದೆ. ಇದು ಒಂದು ಪ್ರಗತಿಪರ ಚಿಂತನೆಯಾಗಿದ್ದರೂ ಕೂಡ ಈ ಯೋಜನೆಯಲ್ಲಿ ಲಿಂಗ ಅಸಮಾನತೆಯ ಅಂಶಗಳಿರುವುದು ಕಂಡುಬರುತ್ತದೆ. ಏಕೆಂದರೆ ಈ ಯೋಜನೆಯಲ್ಲಿ ಸ್ತ್ರೀ ಪುರುಷರ ನಡುವೆ ವೇತನದಲ್ಲಿನ ಸಮಾನತೆಯೊಂದನ್ನು ಬಿಟ್ಟರೆ ಉಳಿದೆಲ್ಲಾ ಅಂಶಗಳಲ್ಲಿ ಮಹಿಳೆಯನ್ನು ಕಡೆಗಾಣಿಸಲಾಗಿದೆ ಇದರ ಜೊತೆಗೆ ಕೆಲಸದ ಸ್ಥಳಗಳಲ್ಲಿ ಕೆಲವು ಸೌಲಭ್ಯಗಳನ್ನು ಮಹಿಳೆಯರಿಗೆ ಒದಗಿಸಿಕೊಡಬೇಕು. ಆದರೆ

ಇವುಗಳು ಯಾವುವು ಕೂಡ ಮಹಿಳೆಗೆ ದೊರೆಯದಂತೆ ಈ ಪಿತೃ ಪ್ರಧಾನ ಸಮಾಜ ನೋಡಿಕೊಂಡಿದೆ. ಪಿತೃ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಎಲ್ಲವೂ ಪುರುಷಮಯವಾಗಿರುತ್ತದೆ. ಹಾಗಾಗಿ ಯೋಜನೆಯನ್ನು ರೂಪಿಸುವವರ ಪುರುಷರೇ ಆಗಿರುವುದರಿಂದ ಅವರ ಅನುಕೂಲಕ್ಕೆ ತಕ್ಕಂತೆ ಯೋಜನೆಯ ನಿಯಮಾವಳಿಗಳನ್ನು ತಯಾರಿಸಿದ್ದಾರೆ. ಮತ್ತು ಮಹಿಳೆಯನ್ನು ಉದಾರವಾದಿ ನೆಲೆಯಲ್ಲಿ ನೋಡಿರುವುದು ಕಂಡುಬರುತ್ತದೆ. ಆದರೆ ಅಭಿವೃದ್ಧಿ ಎಂಬುದು ಕೇವಲ ಪುರುಷರಿಂದ ಮಾತ್ರ ಸಾಧ್ಯವಿಲ್ಲ. ಜೊತೆಗೆ ಸಮಾನವಾಗಿರುವ ಮಹಿಳೆ ಕೂಡ ಅಭಿವೃದ್ಧಿ ಕಾರ್ಯಗಳಲ್ಲಿ ಪಾಲ್ಗೊಳ್ಳಬೇಕಾಗುತ್ತದೆ. ಆದರೆ ಇದನ್ನು ಅರಿಯದ ಪುರುಷ ಮಹಿಳೆಯನ್ನು ತನ್ನ ಅಧೀನದಲ್ಲಿಯೇ ಇರುವಂತೆ ನೋಡಿಕೊಳ್ಳುತ್ತಿದ್ದಾನೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯು ಪ್ರಥಮ ಬಾರಿಗೆ ಜಾರಿಗೊಂಡ ಮೊದಲು ೨೦೦ ಜಿಲ್ಲೆಗಳಲ್ಲಿ ಕರ್ನಾಟಕದ ರಾಯಚೂರು ಜಿಲ್ಲೆಯೂ ಒಂದಾಗಿದೆ. ಈ ಜಿಲ್ಲೆಯ ಮಾನ್ವಿ ತಾಲೂಕಿನ ಗಣದಿನ್ನಿ ಮತ್ತು ಅತ್ತನೂರು ಗ್ರಾಮ ಪಂಚಾಯಿತಿಗಳು ನನ್ನ ಅಧ್ಯಯನ ಕ್ಷೇತ್ರಗಳಾಗಿದ್ದು. ಈ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿನ ಜನರ ಜೀವನ ಮಟ್ಟ ಹೇಗಿದೆ? ಯೋಜನೆಯು ಬಂದ ನಂತರ ಜನರ ಜೀವನ ಮಟ್ಟ ಸುಧಾರಿಸಿದೆಯೇ? ಯೋಜನೆಯ ಪೂರ್ವದಲ್ಲಿ ಇದ್ದಂತಹ ಜನರ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗತಿಗಳು ಏನು? ನಂತರ ಆದ ಬದಲಾವಣೆಗಳೇನು? ಮಹಿಳೆಯರಿಗೆ ಈ ಯೋಜನೆ ಎಷ್ಟೊಂದು ಅನುಕೂಲ ಮತ್ತು ಅನಾನುಕೂಲಗಳನ್ನು ಸೃಷ್ಟಿಸಿದೆ ಎಂಬುದನ್ನು ತಿಳಿಯಬೇಕಾಗಿದೆ. ಇದಕ್ಕೂ ಮೊದಲು ಈ ಗ್ರಾಮಪಂಚಾಯ್ತಿಗಳ ವ್ಯಾಪ್ತಿಯಲ್ಲಿ ಬರುವ ಮಹಿಳೆಯರ ಜೀವನ ಸ್ಥಿತಿಗತಿಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ.

## ೭.೧. ಯೋಜನೆಯ ಪೂರ್ವದಲ್ಲಿನ ಮಹಿಳೆಯರ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗತಿಗಳು

ಭಾರತೀಯ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯನ್ನು ಎರಡನೇ ದರ್ಜೆಯವಳನ್ನಾಗಿ ಕಂಡಿರುವುದು ನಮಗೆಲ್ಲ ತಿಳಿದಿರುವ ವಿಷಯ. ಇದು ಹೆಚ್ಚಾಗಿ ಗ್ರಾಮೀಣ ಭಾಗದಲ್ಲಿ ಕಂಡುಬರುತ್ತದೆ. ಏಕೆಂದರೆ ನಗರ ಪ್ರದೇಶಗಳಿಗಿಂತ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ಹಬ್ಬ ಆಚರಣೆಗಳು, ರೂಢಿ ಸಂಪ್ರದಾಯಗಳು, ಧಾರ್ಮಿಕ ವಿಧಿ-ವಿಧಾನಗಳು ಕಂಡುಬರುತ್ತವೆ. ಹಾಗಾಗಿ ಮಹಿಳೆ ತನ್ನ ಸ್ವಾತಂತ್ರ್ಯವನ್ನು ಇವುಗಳಲ್ಲಿ ಭಾಗವಹಿಸುವುದರ ಮೂಲಕ ಕಳೆದುಕೊಳ್ಳುತ್ತಿದ್ದಾಳೆ. ಇಪ್ಪತ್ತೊಂದನೆಯ ಶತಮಾನದ ಇಂದಿನ ದಿನಗಳಲ್ಲಿ ಮಹಿಳೆಯು ಪುರುಷನ ಸರಿಸಮನಾಗಿ ಎಲ್ಲಾ ವಲಯಗಳಲ್ಲಿಯೂ ಕಾಲಿಡುತ್ತಿದ್ದಾಳೆ. ಆದರೆ ಪುರುಷನ ಕಪಿಮುಷ್ಟಿಯಿಂದ ಬಿಡಿಸಿಕೊಳ್ಳಲಾಗುತ್ತಿಲ್ಲ. ಗ್ರಾಮೀಣ ಭಾಗದಲ್ಲಿ ಜನರ ಜೀವನ ಸ್ಥಿತಿಗತಿಗಳು ತುಂಬಾ ಚಿಂತಾಜನಕವಾಗಿರುತ್ತವೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

## ಮಹಿಳೆಯರ ಆರ್ಥಿಕ ಸ್ಥಿತಿಗತಿಗಳು

ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಯು ಪ್ರಮುಖ ಉದ್ಯೋಗದ ಮೂಲವಾಗಿದೆ. ಈ ಕೃಷಿಯನ್ನು ಹೊರತುಪಡಿಸಿದರೆ ಜನರು ಕಟ್ಟಡ ನಿರ್ಮಾಣದಲ್ಲಿ ಗೃಹ ಕಾರ್ಯಗಳಲ್ಲಿ ತೊಡಗಿಕೊಳ್ಳುವುದನ್ನು ಕಾಣಲಾಗುತ್ತದೆ. ಹೆಚ್ಚಿನದಾಗಿ ಕೃಷಿ ಕಾರ್ಯಗಳಲ್ಲಿಯೇ ತೊಡಗಿಕೊಂಡಿರುತ್ತಾರೆ. ಹಾಗಾಗಿ ಕೃಷಿಯಿಂದ ಬಂದಂತಹ ಆದಾಯ ಅವರ ಜೀವನ ನಿರ್ವಹಣೆಗೆ ಸಾಕಾಗದೇ ಇರುವ ಸಂದರ್ಭಗಳು ಹೆಚ್ಚಾಗಿ ಕಂಡುಬರುತ್ತವೆ. ಮತ್ತು ಜಮೀನುದಾರರ ಕೈ ಕೆಳಗೆ ಜೀತದಾಳುಗಳಾಗಿ ದುಡಿಯುವುದನ್ನು ಸಹ ಕಾಣಲಾಗುತ್ತದೆ. ಆದರೆ ಇದರಿಂದ ಅವರ ಆರ್ಥಿಕ ಪರಿಸ್ಥಿತಿ ಸುಧಾರಿಸುವುದು ತುಂಬಾ ಕಠಿಣವಾಗಿರುತ್ತದೆ. ಅತ್ತನೂರು ಮತ್ತು ಗಣದಿನ್ನಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ಬರುವ ಜನರ ಉದ್ಯೋಗದ ಮೂಲ ಕೃಷಿಯಾಗಿದೆ. ಕೃಷಿಯಲ್ಲಿ ಕೆಲಸಗಳು ದೊರೆಯದೇ ಇದ್ದ ಸಂದರ್ಭದಲ್ಲಿ ಊರಿನ ಜನರು ಮಹಾರಾಷ್ಟ್ರ, ಗೋವಾ, ಮಂಗಳೂರು, ಬೆಂಗಳೂರು, ಪೂನಾ, ಮೈಸೂರುಗಳಂತಹ ನಗರಗಳಿಗೆ ವಲಸೆ ಹೋಗುವುದು ಕಂಡುಬರುತ್ತದೆ. ಇಲ್ಲಿ ಮುಖ್ಯವಾಗಿ ಕುಟುಂಬದ ಆರ್ಥಿಕ ವ್ಯವಸ್ಥೆಯನ್ನು ಸುಧಾರಿಸುವುದರಲ್ಲಿ ಮಹಿಳೆಯ ಪಾತ್ರ ಮುಖ್ಯವಾಗಿದೆ. ಆದರೆ ಇದು ಕಣ್ಣಿಗೆ ಕಾಣದಂತಹ ಸ್ಥಿತಿಯಲ್ಲಿದೆ. ಏಕೆಂದರೆ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯ ಪರಿಶ್ರಮ ಕಂಡುಬರುವುದಿಲ್ಲ. ಹಾಗೂ ಹಿಂದಿನಿಂದಲೂ ಕೂಡ ಮಹಿಳೆಯನ್ನು ಅನುಭೋಗಿಯ ನೆಲೆಯಲ್ಲಿಯೇ ನೋಡುತ್ತಿರುವುದು. ಗ್ರಾಮೀಣ ಪ್ರದೇಶಗಳಲ್ಲಿನ ಕುಟುಂಬಗಳಲ್ಲಿ ಮಹಿಳೆಯನ್ನು ಆದರ್ಶದ ನೆಲೆಯಲ್ಲಿಯೇ ಚಿತ್ರಿಸಲಾಗುತ್ತಿದೆ. ಭಾರತೀಯ ಮಹಿಳೆಯು ಅನ್ಯ ಸಮಾಜಗಳಂತೆಯೇ ಮೊದಲಿನಿಂದಲೂ ಆರ್ಥಿಕ ವ್ಯವಸ್ಥೆಯಲ್ಲಿ ಭಾಗವಹಿಸುತ್ತಾ ಬಂದಿದ್ದಾಳೆ. ಸಾವಿರಾರು ವರ್ಷಗಳ ಹಿಂದಿನಿಂದಲೂ ಮಹಿಳೆ ಕೃಷಿ ಕ್ಷೇತ್ರದ ಜೊತೆಗೆ ಮನೆಕೆಲಸವನ್ನು ನಿಬಾಯಿಸಿಕೊಂಡು ಬರುತ್ತಿದ್ದಾಳೆ. ಇದರಿಂದಾಗಿ ಸಮಾಜದಲ್ಲಿ ಮಹಿಳೆಯ ಮಾನವೀಯ ಸಂಬಂಧಗಳು ಹತ್ತಿರವಾದವು. ಇಂತಹ ಚಾರಿತ್ರಿಕ ಸಂದರ್ಭದಲ್ಲಿ ಮಹಿಳೆಯ ಉತ್ಪಾದನಾ ಚಟುವಟಿಕೆ. ಕುಟುಂಬದ ಸಾಹಸ ಕ್ರಿಯೆಯಾಗಿ ಮಾರ್ಪಟ್ಟಿತು. ಇಂತಹ ಸಂದರ್ಭದಲ್ಲಿ ಮಹಿಳೆ ಉತ್ಪಾದನಾ ಘಟಕಗಳಲ್ಲಿ ಕೆಲಸ ಮಾಡುತ್ತಲೇ ಹೆಂಡತಿಯಾಗಿ, ತಾಯಿಯಾಗಿ, ಸೊಸೆಯಾಗಿ, ಸಾಮಾಜಿಕ ಕಾರ್ಯಗಳಲ್ಲಿ ತನ್ನ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸುತ್ತಿದ್ದಾಳೆ. ಇದನ್ನರಿತ ಪುರುಷ ಮಹಿಳೆಯನ್ನು ತಾನಿರುವ ಸ್ಥಾನದಲ್ಲಿಯೇ ನೆಲೆನಿಲ್ಲುವಂತೆ ಮಾಡಿದ್ದಾನೆ.

ಗ್ರಾಮೀಣ ಪ್ರದೇಶಗಳಲ್ಲಿ ಕೆಳವರ್ಗದ ಕುಟುಂಬಗಳಲ್ಲಿ ಇಡೀ ಮನೆಯ ಜವಾಬ್ದಾರಿ ದುಡಿಯುವ ಮಹಿಳೆಯ ಹೆಗಲ ಮೇಲೆ ಬಿದ್ದಿರುತ್ತದೆ. ಇದಕ್ಕಾಗಿ ಮಹಿಳೆ ಬಹುಮುಖ್ಯವಾಗಿ ಕೃಷಿ, ಮನೆಗೆಲಸ, ತೋಟಗಳಲ್ಲಿ ಕೂಲಿ ಹೀಗೆ ಕೆಲವು ಸಾಂಪ್ರದಾಯಿಕ ಕೆಲಸಗಳಲ್ಲಿ ತೊಡಗುವುದು ಕಂಡು ಬರುತ್ತದೆ. ಇಲ್ಲಿ ಪುರುಷನಿಗಿಂತಲೂ ಹೆಚ್ಚಿನ ಸಮಯದ ಕೆಲಸವನ್ನು ಮಹಿಳೆಯೇ ಮಾಡುತ್ತಾಳೆ. ಆದರೆ

ಅವಳ ಈ ದುಡಿಮೆಯನ್ನು ದುಡಿಮೆ ಎಂದು ಪರಿಗಣಿಸದೇ ಇರುವುದು ಒಂದು ವಿಪರ್ಯಾಸವೇ ಸರಿ. ಮಹಿಳೆಯರನ್ನು ಕೇವಲ ಅನುಭೋಗಿ ಎಂದು ಅವಳು ಉತ್ಪಾದಕಳಲ್ಲ ಎಂಬುದಾಗಿಯೂ ಚಿತ್ರಿಸಲಾಗಿದೆ. ಹಾಗಾಗಿ ಮಹಿಳೆ ಪುರುಷನ ಕೈಗೊಂಬೆಯಾಗಿಯೇ ಉಳಿದುಬಿಟ್ಟಿದ್ದಾಳೆ. ಹಾಗೂ ಕೆಲವು ಸಂದರ್ಭದಲ್ಲಿ ಕುಟುಂಬದ ಹಿರಿಯ ವ್ಯಕ್ತಿ ಮಹಿಳೆಯಾಗಿದ್ದರೂ ಸಹ ಅವಳು ಕೆಲಸದ ಸ್ಥಳದಲ್ಲಿ ನಡೆಯುವ ದೈಹಿಕ ಮಾನಸಿಕ ಹಿಂಸೆಗಳಿಂದ ಮುಕ್ತಳಾಗಿಲ್ಲ. ಭಾರತೀಯ ಸಮಾಜ ವ್ಯವಸ್ಥೆಯಲ್ಲಿ ಒಂಟಿ ಹೆಣ್ಣೊಂದು ಧೈರ್ಯವಾಗಿ ತನ್ನ ಅಸ್ತಿತ್ವವನ್ನು ಸ್ಥಾಪಿಸುತ್ತಿದ್ದಾಳೆ. ಎಂದರೆ ಅವಳನ್ನು ಆ ಸಮಾಜ ಮುಂದುವರಿಯಲು ಬಿಡುವುದಿಲ್ಲ. ಅವಳನ್ನು ಹಲವಾರು ವಿಧದಲ್ಲಿ ಹಿಂಸಿಸುವುದನ್ನು ನಾವು ಹೆಚ್ಚಾಗಿ ಗ್ರಾಮೀಣ ಪ್ರದೇಶದಲ್ಲಿ ಕಾಣುತ್ತೇವೆ. ಜಾತಿ ಪದ್ಧತಿಯು ಭಾರತೀಯ ಸಮಾಜದಲ್ಲಿ ತಾವು ಮಾಡುವ ಉದ್ಯೋಗದೊಂದಿಗೆ ತಳುಕು ಹಾಕಿಕೊಂಡಿದೆ. ಜಾತಿ ಮತ್ತು ಉದ್ಯೋಗದ ನಡುವೆ ಒಂದಲ್ಲ ಒಂದು ರೀತಿಯ ಸಂಬಂಧ ಅಳವಡಿಸಿಕೊಂಡಿದೆ. ಇದು ಜಾತಿ ಆಧಾರಿತ ಉದ್ಯೋಗದಲ್ಲಿ ಸಡಿಲತೆ ಕಂಡುಬಂದಿದೆ. ನಗರ ಪ್ರದೇಶಗಳಲ್ಲಿ ಇದು ಕಡಿಮೆ! ಆದರೆ ಗ್ರಾಮಾಂತರ ಪ್ರದೇಶಗಳ್ಳಲಿ ಮಾತ್ರ ಇಂದಿಗೂ ಇದರ ಪ್ರಭಾವ ಹೆಚ್ಚಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಕೃಷಿ ಕೆಲಸಗಳು ಜಾತಿ ಆಧಾರದ ಮೇಲೆ ಅವಲಂಬಿತವಾಗಿದ್ದು, ಕೆಳಸ್ತರದಲ್ಲಿರುವ ಜಾತಿಗಳಲ್ಲಿ ಇದರ ಪ್ರಭಾವ ಎದ್ದು ಕಾಣುತ್ತದೆ. ಜಾತಿಯ ಆಧಾರಿತವಾಗಿಯೇ ಇದು ಶ್ರಮಿಕ ವರ್ಣಗಳಲ್ಲಿ ಉದ್ಯೋಗ ವಿತರಣ ನಡೆಯುತ್ತದೆ. ಹಾಗಾಗಿ ಕೆಳವರ್ಗದ ಜನರ ಆರ್ಥಿಕ ಪರಿಸ್ಥಿತಿ ಇಂದಿಗೂ ಸುಧಾರಿಸದೇ ಇರುವುದು ಕಂಡುಬರುತ್ತದೆ. ಅತ್ತನೂರು ಮತ್ತು ಗಣದಿನ್ನಿ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ಬರುವಂತಹ ಕುಟುಂಬಗಳಲ್ಲಿನ ಮಹಿಳೆಯರ ಪರಿಸ್ಥಿತಿಗಳು ತುಂಬಾ ಚಿಂತಾಜನಕವಾಗಿದೆ. ಕುಟುಂಬಕ್ಕೆ ಮಹಿಳೆಯು ಹೆಚ್ಚಿನ ರೀತಿಯಲ್ಲಿ ಕೊಡುಗೆಯನ್ನು ನೀಡುತ್ತಿದ್ದಾಗಲೂ ಅವಳನ್ನು ಆರ್ಥಿಕ ಸ್ವಾತಂತ್ರ್ಯದಿಂದ ದೂರ ಇಟ್ಟಿರುವುದು ಕಂಡುಬರುತ್ತದೆ. ಇಲ್ಲಿನ ಜನರ ಆರ್ಥಿಕ ಪರಿಸ್ಥಿತಿಯಲ್ಲಿ ಮಹಿಳೆಯ ಪಾಲು ಗಣನೀಯವಾಗಿದೆ. ಕೆಲವು ಸಂದರ್ಭದಲ್ಲಿ ಗುಳೇ ಹೋಗುವ ಸಂದರ್ಭಗಳು ಕಂಡುಬರುತ್ತವೆ. ಅಂತಹ ಸಂದರ್ಭದಲ್ಲಿ ಹೆಚ್ಚಿನ ಜವಾಬ್ದಾರಿಗಳು ಮಹಿಳೆಯ ಮೇಲೆಯೇ ಬಿದ್ದಿರುತ್ತದೆ. ಈ ಪ್ರದೇಶಗಳಲ್ಲಿ ಹೆಚ್ಚಾಗಿ ಬಡ ಕುಟುಂಬಗಳು ಕಂಡುಬರುತ್ತಿದ್ದು ಇವುಗಳು ತಮ್ಮ ಆರ್ಥಿಕ ವ್ಯವಸ್ಥೆಯನ್ನು ಸುಧಾರಿಸಿಕೊಳ್ಳುವುದರಲ್ಲಿ ಅಭಿವೃದ್ಧಿ ಕಾರ್ಯಗಳತ್ತ ತೊಡಗಿಕೊಂಡಿರುವುದು ಅತೀ ವಿರಳ. ಒಂದು ಕುಟುಂಬದಲ್ಲಿ ಮಹಿಳೆಯ ದುಡಿಮೆಯೇ ಪ್ರಧಾನವಾಗಿದ್ದರೂ ನಿರ್ವಹಣೆಯ ಸಂದರ್ಭದಲ್ಲಿ ಪುರುಷನು ತನ್ನ ಸ್ಥಾನವನ್ನು ಬಿಟ್ಟುಕೊಟ್ಟಿಲ್ಲ. ಈ ಪ್ರದೇಶಗಳಲ್ಲಿನ ಜನರು ಕೃಷಿ ಚಟುವಟಿಕೆಯಲ್ಲಿ ಹೆಚ್ಚಾಗಿ ತೊಡಗಿಕೊಳ್ಳುತ್ತಾರೆ. ಈ ಕೃಷಿ ಕೆಲಸಗಳೂ ಕೂಡ ಋತುಮಾನಕ್ಕೆ ತಕ್ಕಂತೆ ಇರುತ್ತವೆ. ಮತ್ತು ಕೂಲಿಯಲ್ಲಿಯೂ ಕೂಡ ಅಸಮಾನತೆಯನ್ನು ಕಾಣಲಾಗುತ್ತದೆ. ಹಾಗಾಗಿ ಪುರುಷನ ವೇತನ ಹೆಚ್ಚಾಗಿದ್ದು ಮಹಿಳೆಯ ವೇತನ ಕಡಿಮೆಯಿರುವುದರಿಂದ ಮಹಿಳೆಯನ್ನು

ಶೋಷಿಸಲು ಇದೊಂದು ಮಾರ್ಗವಾಗಿ ಮಾರ್ಪಟ್ಟಿದೆ. ಹಾಗಾಗಿ ಮಹಿಳೆಯು ಇಂದು ಕುಟುಂಬದಲ್ಲಿ ಹಲವಾರು ಸಮಸ್ಯೆಗಳ ನಡುವೆ ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ. ಉತ್ಪಾದನೆಯ ಎಲ್ಲಾ ಹಂತಗಳಲ್ಲೂ ದುಡಿಯುತ್ತಲೇ ಇರುವ ಮಹಿಳೆಯನ್ನು ದುಡಿಮೆಯು ಉತ್ಪಾದನೆಯ ಕೊನೆಯ ಹಂತವಾಗಿ ಸಂಪಾದನೆಯ ರೂಪ ತಳೆಯುವ ಹಂತದಲ್ಲಿ. ದೂರಕ್ಕೆ ಓಡಿಸಿ ಆಕ್ರಮಣವನ್ನೆ ಮಾಡಲಾಗುತ್ತದೆ. ಸಂತಾನೋತ್ಪತ್ತಿ, ಪಶುಸಂಗೋಪನೆ, ಕೃಷಿ ಹಾಗೂ ಕುಲಕಸಬುಗಳ ದುಡಿಮೆಗಳನ್ನು ಸುಲಭವಾಗಿ ಭಾವಸಂಬಂಧಗಳ ಒತ್ತಡದಲ್ಲಿ ಸಿಲುಕಿಸಲಾಗುತ್ತಿದೆ. ಇತ್ತೀಚಿನ ದಿನಗಳಲ್ಲಿ ಬೆಂಬಿಡದೆ ಕಾಡುತ್ತಿರುವ ಬರಗಾಲದಿಂದಾಗಿ ಗ್ರಾಮೀಣ ಜನರ ಆರ್ಥಿಕ ಪರಿಸ್ಥಿತಿ ಇನ್ನಷ್ಟು ಹದಗೆಟ್ಟಿದೆ. ಕೃಷಿ ರಂಗದಲ್ಲಿ ರಾಶಿ ಮಾಡಲು, ಬೀಜ ಬಿತ್ತಲು ಹೀಗೆ ಎಲ್ಲಾ ಕೆಲಸಗಳಿಗೆ ಯಂತ್ರಗಳು ಬಂದಿರುವುದರಿಂದ ಯಾಂತ್ರೀಕರಣದ ಪರಿಣಾಮವಾಗಿ ಇವೇ ಕೆಲಸಗಳನ್ನು ಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ ಮಹಿಳೆಯರು ಇಂದು ಬೀದಿ ಪಾಲಾಗಿದ್ದಾರೆ. ಇತ್ತೀಚಿನ ಆರ್ಥಿಕ ಸಮೀಕ್ಷೆಯೊಂದರ ಪ್ರಕಾರ ಹಳ್ಳಿಗಾಡಿನಲ್ಲಿ ನಿರುದ್ಯೋಗದ ಪ್ರಮಾಣ ಶೇ.೭೦ರಷ್ಟು ಹೆಚ್ಚಾಗಿದೆ. ಹೀಗಾಗಿ ಹಳ್ಳಿಗಳಲ್ಲಿ ಉದ್ಯೋಗವಿಲ್ಲದೆ ಮಹಿಳೆಯರು ತಮ್ಮ ಕುಟುಂಬಗಳನ್ನು ಕಟ್ಟಿಕೊಂಡು ಪಕ್ಕದ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿದ್ದಾರೆ. ಈ ಕಡಿಮೆ ಕೂಲಿ, ವಿಪರೀತ ದುಡಿಮೆಯಿಂದಾಗಿ ಮಹಿಳೆಯರ ಆರೋಗ್ಯದ ಮೇಲೆ ತೀವ್ರ ಸ್ವರೂಪದ ದುಷ್ಪರಿಣಾಮ ಉಂಟಾಗುತ್ತದೆ. ಹೀಗಾಗಿ ಮಹಿಳೆಯರಲ್ಲಿ ದುಡಿಯುವ, ಓಡಾಡುವ, ಮಾತನಾಡುವ ಚೈತನ್ಯವೇ ಕುಗ್ಗಿ ಹೋಗುತ್ತಿದೆ. ಅಗ್ಗದ ದುಡಿಮೆ, ಕಡಿಮೆ ಕೂಲಿಯ ಜೊತೆಗೆ ಕಾಂಟ್ರಾಕ್ಟರುಗಳ, ಮೇಸ್ತ್ರಿಗಳು, ಜಮೀನ್ದಾರರ ಲೈಂಗಿಕ ಕಿರುಕುಳಕ್ಕೂ ಇಲ್ಲಿನ ಬಡ ಮಹಿಳೆ ಬಲಿಯಾಗುತ್ತಿದ್ದಾಳೆ. ಈ ಪ್ರದೇಶಗಳಲ್ಲಿ ಕೃಷಿಯಲ್ಲಿ ದುಡಿಯುವ ಮಹಿಳೆಯರಿಗೆ ದಿನಕ್ಕೆ ೪೦ ರಿಂದ ೫೦ ರೂಪಾಯಿಗಳು ದೊರೆಯುತ್ತದೆ. ಆದರೆ ಪುರುಷರಿಗೆ ೧೦೦ ರಿಂದ ೧೫೦ ರೂಪಾಯಿಗಳು ದೊರೆಯುತ್ತದೆ. ಹಾಗಾಗಿ ಮನೆಯ ನಿರ್ವಹಣೆಯ ಜವಾಬ್ದಾರಿ ಪುರುಷರಲ್ಲಿಯೇ ಕೇಂದ್ರಿಕೃತಗೊಂಡಿರುವುದು ಕಂಡುಬರುತ್ತದೆ. ಮತ್ತು ಮಹಿಳೆ ದುಡಿದ ಆದಾಯವು ಸಹ ಅವರ ಕೈಗೆ ಸೇರದೇ ಇರುವಂತಹ ಪರಿಸ್ಥಿತಿಯುಂಟಾಗಿದೆ. ಹಾಗಾಗಿ ಅವಳನ್ನು ಕೇವಳ ಅನುಭೋಗಿಯ ನೆಲೆಯಲ್ಲಿಯೇ ನೋಡುತ್ತಿರುವುದು ವಾಸ್ತವ ಸತ್ಯ. ಸ್ವಾತಂತ್ರ್ಯ ಬಂದು ೬೩ ವರ್ಷಗಳು ಕಳೆದರೂ ಕೂಡ ಎರಡು ಹೊತ್ತಿನ ಕೂಳಿಗಾಗಿ ಮಹಿಳೆ ತನ್ನ ಆತ್ಮ ಗೌರವವನ್ನೇ ಒತ್ತೆ ಇಡಬೇಕಾದ ಪರಿಸ್ಥಿತಿ ಉಂಟಾಗಿದೆ. ಮುಖ್ಯವಾಗಿ ಗ್ರಾಮೀಣ ಪ್ರದೇಶದ ಮಹಿಳೆಯರು ಅನುಭವಿಸುತ್ತಿರುವ ಯಾತನೆ ಅಸಹನೀಯವಾದುದು. "೧೯೮೧ರ ಶ್ರಮ ಶಕ್ತಿ ವರದಿಯ ಪ್ರಕಾರ ಗ್ರಾಮೀಣ ಭಾರತದಲ್ಲಿ ಶೇ.೩೫ರಷ್ಟು ಮನೆಗಳ ಉಸ್ತುವಾರಿ ಮಹಿಳೆಯರದೇ ಆಗಿದೆ. ಮಕ್ಕಳ ಊಟ, ಶಾಲೆ, ಇಡೀ ಕುಟುಂಬಕ್ಕೆ ಬೇಕಾಗುವ ಆಹಾರ ಸಾಮಗ್ರಿ ಹೀಗೆ ಎಲ್ಲವನ್ನು ಹೆಚ್ಚು ಮಕ್ಕಳೇ ನಿಭಾಯಿಸಬೇಕಾಗುತ್ತದೆ."(ನೇಮಿಚಂದ್ರ(ಸಂ), ಮಹಿಳಾ ಲೋಕ, ಪು.೧೬.೭)

ಒಟ್ಟಾರೆಯಾಗಿ ಅತ್ತನೂರು ಮತ್ತು ಗಣದಿನ್ನಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ಬರುವ ಕುಟುಂಬಗಳ ಆರ್ಥಿಕ ಪರಿಸ್ಥಿತಿ ತುಂಬಾ ಚಿಂತಾಜನಕವಾಗಿರುವುದು ಕಂಡುಬರುತ್ತಿದೆ. ಮಹಿಳೆ ಇಂದು ಹಲವಾರು ವಲಯಗಳಲ್ಲಿ ದುಡಿಯುತ್ತಿದ್ದರೂ ಸಹ ಅವಳಿಗೆ ಸರಿಯಾದ ಸ್ಥಾನಮಾನವನ್ನು ಸಮಾಜದಲ್ಲಿ ಕಲ್ಪಿಸಲಾಗುತ್ತಿಲ್ಲ. ಹಾಗಾಗಿ ಮಹಿಳೆಯ ಅಸ್ತಿತ್ವ ಸಮಾಜದಲ್ಲಿ ಇಲ್ಲವಾಗಿದೆ. ಈ ಪ್ರದೇಶದಲ್ಲಿನ ಮಹಿಳೆಯರು ಶೇ.೯೦ರಷ್ಟು ಮಂದಿ ಕೃಷಿ ಕಾರ್ಮಿಕರು, ಮನೆಗೆಲಸದವರಾಗಿದ್ದಾರೆ. ಪ್ರಮುಖ ಆರ್ಥಿಕ ಸಂಸ್ಥೆಯಲ್ಲಿ ಲಿಂಗತಾರತಮ್ಯವಿರುವ ಕಾರಣ ಮಹಿಳೆಯರು ಸೂಕ್ತ ಉತ್ತೇಜನ, ಪ್ರಯೋಜನ ಪಡೆಯುವಲ್ಲಿ ವಿಫಲರಾಗಿದ್ದಾರೆ. ಹೀಗಾಗಿ ಇಲ್ಲಿನ ಜನರು ಅಸಂಘಟಿತ ವಲಯಗಳಲ್ಲಿ ಕೆಲಸ ನಿರ್ವಹಿಸುತ್ತಿರುವುದರಿಂದ ಅವರಿಗೆ ಯಾವುದೇ ರೀತಿಯ ಸೌಲಭ್ಯಗಳು ದೊರೆಯದಾಗಿದೆ. ಹಾಗಾಗಿ ಈ ಪ್ರದೇಶಗಳಲ್ಲಿನ ಜನರ ಆರ್ಥಿಕ ಪರಿಸ್ಥಿತಿ ತುಂಬಾ ಶೋಚನೀಯವಾಗಿದೆ ಎಂದು ಹೇಳಬಹುದು.

## ಮಹಿಳೆಯರ ಸಾಮಾಜಿಕ ಸ್ಥಿತಿಗತಿಗಳು

ಭಾರತ ದೇಶವು ವೈವಿಧ್ಯತೆಗೆ ಹೆಸರಾಗಿದೆ. ಇಲ್ಲಿ ಹಲವಾರು ಧರ್ಮ, ಜಾತಿ, ಜನಾಂಗ, ವರ್ಗದವರು ವಾಸಿಸುತ್ತಿದ್ದಾರೆ. ಸಮಾಜ ವ್ಯವಸ್ಥೆಯು ಹಲವಾರು ಆದರ್ಶ, ಉದ್ದೇಶ, ಅವುಗಳನ್ನು ಈಡೇರಿಸಿಕೊಳ್ಳುವ ಕ್ರಮ ಹಾಗೂ ನಿರೀಕ್ಷಿಸುವ ಪರಿಣಾಮ ಅಥವಾ ಫಲಿತಾಂಶಗಳೆಲ್ಲವನ್ನು ಒಳಗೊಂಡಿರುತ್ತದೆ. ವಿವಿಧ ಸಾಮಾಜಿಕ ಅಂಗರಚನೆಗಳು ಸಂಸ್ಥೆಗಳನ್ನು ಹುಟ್ಟು ಹಾಕಿವೆ. ಈ ಎಲ್ಲಾ ನೆಲೆಗಳಲ್ಲಿ ಸ್ತ್ರೀ ಪುರುಷರಿಬ್ಬರಿಗೂ ಎಲ್ಲಾ ನಿಯಮಾವಳಿಗಳನ್ನು ಸಮಾನವಾಗಿ ಮತ್ತು ನ್ಯಾಯಯುತವಾಗಿ ಅನ್ವಯಿಸಲೆಂದೇ ರೂಪಿಸಲಾಗಿದೆ ಎಂದು ಸಾರುತ್ತಾ ಬರಲಾಗಿದೆ. ಆದರೂ ಸಮಾಜ ವ್ಯವಸ್ಥೆಯಲ್ಲಿನ ಸಾಮಾಜಿಕ ಸಂಸ್ಥೆಗಳಲ್ಲಿ ಆಯ್ಕೆ ಒತ್ತಡಗಳು ಉಂಟಾಗುತ್ತಿವೆ. ಆದರೆ ಈ ಸಂಸ್ಥೆಗಳಲ್ಲಿ ಆಯ್ಕೆ ಬಹುಮಟ್ಟಿಗೆ ಪುರುಷನ ಪರವಾಗಿ ಸ್ತ್ರೀಯರ ವಿರೋಧಿಯಾಗಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಇಂತಹ ಸಾಮಾಜಿಕ ಸಂಸ್ಥೆಗಳಲ್ಲಿ ಕುಟುಂಬ, ವಿವಾಹ, ಧರ್ಮ, ಶಿಕ್ಷಣ ಪ್ರಮುಖವಾದವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಜಮೀನ್ದಾರಿ ಪದ್ಧತಿ ಜಾರಿಯಲ್ಲಿರುವುದು ಕಂಡುಬರುತ್ತದೆ. ಈ ವ್ಯವಸ್ಥೆಯಲ್ಲಿ ಕೆಳವರ್ಗದ ಜನರು ತುಂಬಾ ತುಳಿತಕ್ಕೆ ಒಳಗಾಗಿರುತ್ತಾರೆ. ಸ್ತ್ರೀ ಪುರುಷರನ್ನಗೊಂಡಂತೆ ಎಲ್ಲರೂ ದೌರ್ಜನ್ಯಕ್ಕೆ ಒಳಗಾಗುತ್ತಿರುತ್ತಾರೆ. ಆದರೆ ಹೆಚ್ಚಿನ ಸಂದರ್ಭಗಳಲ್ಲಿ ಮಹಿಳೆಯರೇ ಹೆಚ್ಚಾಗಿ ಶೋಷಣೆಯನ್ನು ಅನುಭವಿಸುತ್ತಿರುತ್ತಾರೆ.

ಅಧ್ಯಯನ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಜನರ ಸಾಮಾಜಿಕ ಸ್ಥಿತಿಗತಿಗಳು ಸಾಧಾರಣವಾಗಿರುವುದು ಕಂಡುಬರುತ್ತದೆ. ಸಮಾಜದಲ್ಲಿನ ಪಿತೃ ಪ್ರಧಾನ ಮೌಲ್ಯಗಳು ಮಹಿಳೆಯರನ್ನು ನಿಯಂತ್ರಿಸುತ್ತಿರುವುದು ಕಂಡುಬರುತ್ತದೆ. ಹಾಗೆಯೇ ಮಹಿಳೆಯರು ಈ ಪಿತೃ ಪ್ರಧಾನ ಮೌಲ್ಯಗಳನ್ನೇ ನಂಬಿಕೊಂಡು ಬದುಕುತ್ತಿರುವುದು ವಾಸ್ತವ ಸತ್ಯವಾಗಿದೆ. ಕುಟುಂಬದಲ್ಲಿ ಪುರುಷನದೇ ಮೇಲುಗೈ. ಮಹಿಳೆಯು

ಕುಟುಂಬದಿಂದ ಹೊರ ಹೋಗಿ ದುಡಿದು ಬಂದ ಆದಾಯವನ್ನು ತನ್ನ ಗಂಡನ ಕೈಗೆ ಕೊಡಬೇಕು. ಮತ್ತು ತನ್ನ ಆದಾಯವನ್ನು ತನ್ನ ಸ್ವಂತ ಖರ್ಚಿಗಾಗಿ ಬಳಸುವಂತಿಲ್ಲ. ಈ ತರಹದ ಪರಿಸ್ಥಿತಿಗಳು ಕಂಡುಬರುತ್ತವೆ. ಮುಖ್ಯವಾಗಿ ಬಾಲ್ಯವಿವಾಹಗಳು ನಡೆಯುವುದು ರೂಢಿಯಲ್ಲಿದೆ. ಏಕೆಂದರೆ ಕುಟುಂಬ ಬಡತನದಿಂದ ನರಳಾಗುತ್ತಿದ್ದರೆ ಅಂತಹ ಕುಟುಂಬದಲ್ಲಿ ಜನಿಸಿದ ಹೆಣ್ಣು ಮಕ್ಕಳು ಸಹ ನಾನಾ ಯಾತನೆಗಳನ್ನು ಅನುಭವಿಸುತ್ತಿರುತ್ತಾರೆ. ಮತ್ತು ಅವಿವಾಹಿತ ಹೆಣ್ಣು ಮನೆಯಲ್ಲಿ ಇದ್ದಷ್ಟು ದಿನಗಳು ಕುಟುಂಬಕ್ಕೆ ಆಪತ್ತು ಜಾಸ್ತಿ ಎಂಬ ಕಾರಣದಿಂದಾಗಿ ಮದುವೆಯ ಸಂದರ್ಭದಲ್ಲಿನ ಖರ್ಚು ವೆಚ್ಚಗಳನ್ನು ಕಡಿಮೆ ಮಾಡಿಕೊಳ್ಳುವ ಸಲುವಾಗಿ ಬಾಲ್ಯ ವಿವಾಹವನ್ನು ಮಾಡುವುದರ ಮೂಲಕ ಮಹಿಳೆಯನ್ನು ಕಷ್ಟದ ಮಡುವಿನಲ್ಲಿ ತಂದು ಬಿಡಲಾಗುತ್ತದೆ. ಇನ್ನೊಂದು ವಿಷಯವೆಂದರೆ ಕುಟುಂಬದಲ್ಲಿ ಗಂಡು ಮಗು ಹುಟ್ಟಿದರೆ ಹರುಷ ಪಡುವ ಮತ್ತು ಹೆಣ್ಣು ಮಗು ಹುಟ್ಟಿದರೆ ಚಿಂತಿಸುವ ಸಂಗತಿಗಳು ಕಂಡುಬರುತ್ತವೆ. ಒಟ್ಟಾರೆ ಸಮಾಜದಲ್ಲಿ ಹೆಣ್ಣು ಪುರುಷನ ಕೈಗೊಂಬೆಯಂತಾಗಿರುವುದು ಕಂಡುಬರುತ್ತದೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳಾ ಶೋಷಣೆ ಎಂಬುದು ಇತ್ತೀಚಿನದಲ್ಲ ಪ್ರಾಚೀನ ಕಾಲದಿಂದಲೂ ಇಂದಿನವರೆಗೆ ನಡೆದುಕೊಂಡೇ ಬಂದಿದೆ. ಮುಂದುವರಿದ ಜನಾಂಗದ ಸ್ತ್ರೀಯರಿಂದ ಹಿಡಿದು ಕೆಳ ಸಮುದಾಯದ ಸ್ತ್ರೀಯರವರೆಗೆ ಅನೇಕ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿರುವುದು ಕಂಡುಬರುತ್ತದೆ. ಕುಟುಂಬದಲ್ಲಿ ಮಹಿಳೆಯರೇ ಬಹಳಷ್ಟು ಕಷ್ಟಪಡುತ್ತಿರುವ ವ್ಯಕ್ತಿಗಳು. ಇದಕ್ಕೆ ಕಾರಣ ಕುಟುಂಬದಲ್ಲಿನ ಆರ್ಥಿಕ ಒತ್ತಡ ಅಥವಾ ಕುಟುಂಬದ ತೊಂದರೆ ಇವುಗಳೇ ಮಹಿಳೆಯರ ಅಂತಿಮ ಒತ್ತಡಗಳು. ಕುಟುಂಬದ ಪಾಲನೆಯಲ್ಲಿ ಹಾಗೂ ಮನೆಯನ್ನು ಸಜ್ಜುಗೊಳಿಸುವ ಕಾರ್ಯದಲ್ಲಿ ಪ್ರಮುಖ ಪಾತ್ರಧಾರಿಗಳಾಗಿದ್ದರೂ ಇದರಿಂದ ಅವರು ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ. ಹಾಗಾಗಿ ಮಹಿಳೆಯರ ಸ್ಥಾನ ಮೊದಲು ಕುಟುಂಬದಲ್ಲಿ ಭದ್ರವಾಗಬೇಕು. ಮಹಿಳೆಯರು ತಮ್ಮ ಬಗ್ಗೆ ಅನಾಸಕ್ತಿ ಧೋರಣೆಯನ್ನು ತಾಳಿರುವುದಕ್ಕೆ ಪ್ರಮುಖ ಕಾರಣ ಸಾಮಾಜೀಕರಣ. ಹೆಣ್ಣು ಮಗುವೊಂದು ತಾಯಿಯಾಗಿ ರೂಪಗೊಳ್ಳಲು ಅಗತ್ಯವಾಗಿ ಸಾಮಾಜೀಕರಣ ಪ್ರಕ್ರಿಯೆಯನ್ನು ಸಮಾಜವು ರೂಪಿಸಿಬಿಟ್ಟಿರುತ್ತದೆ. ಹಾಗಾಗಿ ಮಹಿಳೆ ಹೆಂಡತಿಯಾಗಿ, ಸೊಸೆಯಾಗಿ, ತಾಯಿಯಾಗಿ ಪುರುಷನ ಆಶ್ರಯದಲ್ಲಿಯೇ ಬದುಕುವ ಅನಿವಾರ್ಯ ಪರಿಸ್ಥಿತಿ ಬಂದೊದಗಿದೆ. ನಮ್ಮ ಭಾರತೀಯ ಸಮಾಜವ್ಯವಸ್ಥೆಯಲ್ಲಿ ಲಿಂಗ ಸಂಬಂಧಿ ತಾರತಮ್ಯ ದೋರಣೆಯು ತೀವ್ರವಾಗಿರು ವುದರಿಂದ ಮಹಿಳೆಯರ ದುಡಿಮೆಯ ಸಹಭಾಗಿತ್ವ ಕಡಿಮೆಯಾಗಿರುವುದು ಕಂಡುಬರುತ್ತದೆ. ಸಮಾಜದಲ್ಲಿ ಧರ್ಮವು ಸಹ ತನ್ನ ಛಾಪನ್ನು ಜನರ ಮನಸ್ಸಿನ ಮೇಲೆ ಮೂಡಿಸಿದೆ. ವಿವಾಹವಾಗಿರುವ ಸ್ತ್ರೀಯರಿಗೆ ಪತಿಯೇ ಪರದೈವ ಎಂಬಂಥ ಸತೀಧರ್ಮ, ಪತಿವ್ರತಾ ಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸಲು ವಿಧಿಸಲಾಗಿದೆ. ಪುರುಷ ಪ್ರಧಾನ ಚಿಂತನೆಗಳು ತಮಗಿಷ್ಟ ಬಂದಂತೆ ನ್ಯಾಯ, ನೀತಿ ನಿಯಮಗಳನ್ನು ವಿಶ್ಲೇಷಿಸಿದ್ದಾರೆ. ಹಾಗಾಗಿ ಮಹಿಳೆಯು ಪುರುಷನು ಹೇಳಿದಂತೆ ಕೇಳಿಕೊಂಡು ಇರಬೇಕಾದ ಪರಿಸ್ಥಿತಿ ತಲೆದೋರಿದೆ. "ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೇ ತತ್ರ ದೇವತಾಃ" ಎಂದು ಒಂದು ಕಡೆಯಾದರೆ

ಇನ್ನೊಂದು ಕಡೆ "ನಾ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬ ಮಾತುಗಳ ದ್ವಂದ್ವ ನೀತಿಯಿಂದಾಗಿ ಮಹಿಳೆಯರ ಸ್ಥಾನವನ್ನು ರೂಪಿಸಲಾಗಿದೆ. ಎ.ಎಲ್.ಅಲ್ಟೇಕರವರು ಅಭಿಪ್ರಾಯ ಪಟ್ಟಿರುವಂತೆ "ತಂದೆ ತಾಯಿಯರ ಮಮತೆಯಲ್ಲಿ ಬೆಳೆದಿದ್ದರೂ, ಪತಿಯಿಂದ ಪ್ರೀತಿಸಲ್ಪಟ್ಟರೂ ಮತ್ತು ಅವಳ ಮಕ್ಕಳಿಂದ ಗೌರವಿಸಲ್ಪಟ್ಟಿದ್ದರೂ ಸಹ ಸುಮಾರು ಕ್ರಿ.ಪೂ.೨೦ ರಿಂದ ೧೮೦೦ರ ವರೆಗೆ ಸುಮಾರು ಎರಡು ಸಾವಿರ ವರ್ಷಗಳ ಕಾಲ ಭಾರತೀಯ ಸ್ತ್ರೀಯರ ಸ್ಥಾನಮಾನವು ನಿರಂತರವಾಗಿ ಅವನತಿಗೊಳ್ಳುತ್ತಲೇ ಹೋಯಿತು. ಸತೀ ಪದ್ಧತಿ ಆಚರಣೆಯ ಪುನರುಜ್ಜೀವನಗೊಳಿಸುವಿಕೆ, ಪುನರ್ ವಿವಾಹದ ಮೇಲಿನ ನಿಷೇಧ, ಪರದಾ ಪದ್ಧತಿಯ ವ್ಯಾಪಕತೆ ಮತ್ತು ಬಹುಪತ್ನಿತ್ವದ ಆಚರಣೆ ಇವು ಆಕೆಯ ಸ್ಥಾನಮಾನಗಳನ್ನು ಮತ್ತಷ್ಟು ಹಾಳುಗೆಡವಿದವು." (ಪ್ರೊ.ಕೆ.ಭೈರಪ್ಪ, ಭಾರತೀಯ ಸಮಾಜ ಪರಿಚಯ, ಪು.೧೪) ಹಾಗೆಯೇ "ಸಮಾಜ ಪ್ರಾರಂಭವಾದಾಗಿನಿಂದಲೂ ಮಹಿಳೆಯು ಪುರುಷನ ಗುಲಾಮಳು ಎಂಬ ಭಾವನೆ ಬೆಳೆದದ್ದು ಅತ್ಯಂತ ಬುದ್ಧಿಗೇಡಿತನ" ಎಂದು ಫೆಡ್ರಿಕ್ ಎಂಗೆಲ್ಸ್ ಹೇಳುತ್ತಾನೆ. ಆದ್ದರಿಂದ ಸ್ತ್ರೀ ಪುರುಷ ನಡುವಿನ ಅಸಮಾನತೆ ಆದಿ ಸಮಾಜದ್ದಲ್ಲ. ಆದರೆ ನಾಗರಿಕತೆ ಬೆಳೆದಂತೆ ಹೆಣ್ಣು ಪುರುಷನ ಗುಲಾಮಗಳಾಗಿದ್ದು ಚಾರಿತ್ರಿಕ ಸತ್ಯ ಎಂದಿದ್ದಾನೆ(ಹಾಲತೀ ಸೋಮಶೇಖರ್, ಮಹಿಳಾ ಚಳುವಳಿ ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆ, ಪು.೩೧) ಹೀಗೆ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯು ಎರಡನೇ ಸ್ಥಾನದಲ್ಲಿರುವುದು ಕಂಡುಬರುತ್ತದೆ.

ಬದಲಾದ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಗೆ ಸ್ವಲ್ಪ ಭದ್ರತೆಯನ್ನು ನೀಡಲಾಗಿದೆ. ಆದರೆ ಇದುವೇ ಸ್ವಾತಂತ್ರ್ಯ ಎಂದು ಕೊಳ್ಳಲಾಗುವುದಿಲ್ಲ. ಹಾಗಾಗಿ ಮಹಿಳೆಗೆ ಸಂಪೂರ್ಣ ಸ್ವಾತಂತ್ರ್ಯವು ಗಗನ ಕುಸುಮವಾಗಿದೆ. ನನ್ನ ಅಧ್ಯಯನ ಕ್ಷೇತ್ರದಲ್ಲಿನ ಮಹಿಳೆಯರ ಸಾಮಾಜಿಕ ಸ್ಥಿತಿಗತಿಗಳು ಇದಕ್ಕೆ ಹೊರತಾಗಿಲ್ಲ. ಇಲ್ಲಿಯೂ ಸಹ ಮಹಿಳೆ ಅನೇಕ ನಿರ್ಬಂಧಗಳಿಂದ ಬಂಧಿಸಲ್ಪಟ್ಟಿರುವುದನ್ನು ಕಾಣ ಬಹುದಾಗಿದೆ. ಒಟ್ಟಿನಲ್ಲಿ ಮಹಿಳೆಯರ ಸಾಮಾಜಿಕ ಸ್ಥಿತಿಗತಿಗಳು ತುಂಬ ಶೋಚನೀಯ ಸ್ಥಿತಿಯನ್ನು ತಲುಪಿರುವುದು ಕಂಡುಬರುತ್ತದೆ.

## ಮಹಿಳೆಯರ ರಾಜಕೀಯ ಸ್ಥಿತಿಗತಿಗಳು

ಇಂದು ಮಹಿಳೆಯರು ಬದಲಾವಣೆಯ ಹಾದಿಯಲ್ಲಿ ಚಲಿಸತೊಡಗಿದ್ದಾರೆ. ಹಾಗೂ ಹೆಚ್ಚು ಹೆಚ್ಚು ಸುಶಿಕ್ಷಿತರಾಗಲು ಬಯಸುತ್ತಿದ್ದಾರೆ. ಹಾಗಾಗಿ ಇಂದು ಮಹಿಳೆ ಎಲ್ಲಾ ವಲಯಗಳಲ್ಲೂ ತನ್ನ ಛಾಪನ್ನು ಮೂಡಿಸುತ್ತಿದ್ದಾಳೆ. ಮಹಿಳೆಯರು ರಾಜಕೀಯ ರಂಗವನ್ನು ಪ್ರವೇಶಿಸಿರುವುದು ಒಂದು ಸಾಧನೆಯೇ ಸರಿ. ಏಕೆಂದರೆ ಭಾರತೀಯ ಸಮಾಜ ವ್ಯವಸ್ಥೆಯಲ್ಲಿನ ಪಿತೃ ಪ್ರಧಾನ ಅಂಶಗಳನ್ನು ಮುರಿದು ಇಂದು ರಾಜಕೀಯ ವಲಯದಲ್ಲಿ ಪಾಲ್ಗೊಳ್ಳುತ್ತಿರುವುದು ಒಂದು ಸಂತೋಷದ ವಿಷಯ. ಆದರೆ ಇಲ್ಲಿ ಪಿತೃ ಪ್ರಧಾನ ಅಂಶಗಳನ್ನು ಮುರಿದು ಎಂದರೆ ಪುರುಷನೇ ಅಂತಹ ಅಧಿಕಾರವನ್ನು ಮಹಿಳೆಗೆ ದಾನವಾಗಿ ಕೊಡಲ್ಪಟ್ಟಿರುತ್ತಾನೆ. ಹಾಗಾಗಿ ಇಂದು ಮಹಿಳೆಯು ಸ್ವಾತಂತ್ರಳು ಎಂಗು

ತಿಳಿಯಬಾರದು. ಸಮಾಜದಲ್ಲಿ ನಾಗರಿಕತೆಗಳ ಹಂತಗಳು ಸಾಗಿ ಬಂದಂತೆಲ್ಲ ಪುರುಷ ಪ್ರಧಾನತೆಯ ಅತೀ ಮುಖ್ಯ ಸಾಧನವಾಗಿ ಪಿತೃ ಸಂಸ್ಕೃತಿಯ ಬೇರುಗಳು ಹಬ್ಬಿ ಹರಡುತ್ತಾ ತನ್ನ ಪರಮಾಧಿಕಾರವನ್ನು ಚಲಾಯಿಸುತ್ತಲೇ ಇದೆ. ಹಾಗಾಗಿ ಮಹಿಳೆ ಪುರುಷ ಅಧೀನದಲ್ಲಿಯೇ ಇದ್ದು ತನ್ನ ಅಧೀನತೆಯಿಂದ ಬಿಡುಗಡೆಗೊಳ್ಳಬೇಕಿದೆ. ನಗರ ಪ್ರದೇಶದಲ್ಲಿನ ಮಹಿಳೆಯರಿಗೆ ಸ್ವಲ್ಪ ರಾಜಕೀಯ ಸ್ವಾತಂತ್ರವಿರುತ್ತದೆ. ಅಂದರೆ ಮಹಿಳೆಯರಿಗೆ ಮುಕ್ತತೆ ಎಂಬುದಿರುತ್ತದೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿನ ಮಹಿಳೆಯರಿಗೆ ರಾಜಕೀಯವನ್ನು ಪ್ರವೇಶಿಸಲು ಮುಕ್ತ ಅವಕಾಶ ಇರುವುದಿಲ್ಲ. ಅದರ ಬಗ್ಗೆ ಹೆಚ್ಚಿನ ಗಮನವನ್ನು ಹರಿಸುವುದಿಲ್ಲ. ಏಕೆಂದರೆ ಗ್ರಾಮೀಣ ಪ್ರದೇಶಗಳಲ್ಲಿನ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿರುವುದು ಮತ್ತು ಪಿತೃ ಪ್ರಧಾನ ಮೌಲ್ಯಗಳನ್ನು ಅವಳ ಮೇಲೆ ಹೇರಿರುವುದರಿಂದ ರಾಜಕೀಯ ವಲಯದಿಂದ ಹೊರಗುಳಿದಿದ್ದಾರೆ ನನ್ನ ಅಧ್ಯಯನ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಮಹಿಳೆಯರಲ್ಲಿ ರಾಜಕೀಯ ಬಗ್ಗೆ ಅಷ್ಟಾಗಿ ತಿಳುವಳಿಕೆ ಇಲ್ಲ. ಇದ್ದರೂ ಸಹ ಅದು ಮೇಲ್ವರ್ಗದ ಕುಟುಂಬದ ಮಹಿಳೆಯರಲ್ಲಿದೆ. ಕೆಳವರ್ಗದ ಕುಟುಂಬಗಳಲ್ಲಿ ಈ ರಾಜಕೀಯದ ಬಗ್ಗೆ ಅರಿವೇ ಇಲ್ಲವಾಗಿ ಅದರಿಂದ ದೂರ ಉಳಿದಿರುವುದು ಕಂಡುಬರುತ್ತದೆ. ಕೆಳವರ್ಗದ ಪುರುಷರಲ್ಲಿಯೂ ಸಹ ಇಂತಹ ಪರಿಸ್ಥಿತಿ ಕಂಡುಬರುತ್ತದೆ. ಮೇಲ್ವರ್ಗದ ಮಹಿಳೆಯರು ರಾಜಕೀಯದಲ್ಲಿ ಭಾಗವಹಿಸಿರುವ ಉದಾಹರಣೆಗಳು ಕಂಡುಬಂದಿವೆ. ಆದರೆ ಇದರ ಸಂಪೂರ್ಣ ಲಾಭ ಮಾತ್ರ ಪುರುಷನೇ ಪಡೆದುಕೊಂಡಿದ್ದಾನೆ. ಮಹಿಳೆ ಕೇವಲ ರಬ್ಬರ್ ಸ್ಟಾಂಪ್ ನಂತೆ ಕೆಲಸ ನಿರ್ವಹಿಸುತ್ತಿದ್ದಾಳೆ. ಒಟ್ಟಿನಲ್ಲಿ ಇಲ್ಲಿನ ಮಹಿಳೆಯರಿಗೆ ರಾಜಕೀಯದ ಬಗ್ಗೆ ಅಷ್ಟಾಗಿ ಆಸಕ್ತಿ ಇಲ್ಲದಿರುವುದು ಕಂಡುಬರುತ್ತದೆ. ಹಾಗಾಗಿ ಇವರು ರಾಜಕೀಯವಾಗಿ ಹಿನ್ನಡೆಯನ್ನು ಪಡೆದಿದ್ದಾರೆ ಎಂದು ಹೇಳಬಹುದಾಗಿದೆ.

## ೭.೨. ಯೋಜನೆಯಲ್ಲಿನ ಲಿಂಗ ತಾರತಮ್ಯದ ನೆಲೆಗಳು ಮತ್ತು ಯೋಜನೆಯಲ್ಲಿ ಮಹಿಳೆಯ ಪಾಲ್ಗೊಳ್ಳುವಿಕೆ

ಕೇಂದ್ರ ಸರಕಾರವು ಜಾರಿಗೆ ತಂದಂತಹ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯು ಇಂದು ದೇಶದ ಪ್ರತಿಯೊಂದು ಗ್ರಾಮ ಪಂಚಾಯ್ತಿಗಳ ವ್ಯಾಪ್ತಿಯಲ್ಲಿ ಅನುಷ್ಠಾನದಲ್ಲಿರುವುದು ಕಂಡುಬರುತ್ತದೆ. ಆದರೆ ಈ ಯೋಜನೆಯು ಜಾರಿಗೆ ಬಂದು ಹಲವಾರು ವರ್ಷಗಳೇ ಕಳೆದರೂ ಕೂಡ ಗ್ರಾಮೀಣ ಭಾಗದಲ್ಲಿನ ಜನರು ಇಂದಿಗೂ ಕೆಲಸಗಳನ್ನು ಅರಸಿ ವಲಸೆ ಹೋಗುತ್ತಿರುವುದು ನಿಲ್ಲದಾಗಿದೆ. ಏಕೆಂದರೆ ಈ ಯೋಜನೆಯಲ್ಲಿ ಹಲವಾರು ಲೋಪ ದೋಷಗಳಿರುವುದು ತಿಳಿದುಬರುತ್ತದೆ. ಉದ್ಯೋಗ ಖಾತ್ರಿ ಯೋಜನೆಯು ಮೇಲ್ನೋಟಕ್ಕೆ ಸಮಾನತೆಯ ಅಂಶಗಳನ್ನು ಒಳಗೊಂಡಿದೆ ಎಂಬುದಾಗಿ ಕಂಡುಬಂದರೂ ಅದನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಲಿಂಗ ಅಸಮಾನತೆಯ ಅಂಶಗಳಿರುವುದು ಕಂಡುಬರುತ್ತದೆ. ಈ ಲಿಂಗ ಅಸಮಾನತೆಯು ಹಿಂದಿನಿಂದಲೂ ಇಂದಿನವರೆಗೂ ಸಾಮಾನ್ಯವಾಗಿಬಿಟ್ಟಿದೆ.

ಏಕೆಂದರೆ ಪಿತೃ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಎಲ್ಲವೂ ಪುರುಷಮಯವಾಗಿರುತ್ತದೆ. ಅಂದರೆ ಈ ಯೋಜನೆಯನ್ನು ರೂಪಿಸಿರುವವರು ಪುರುಷರೇ ಆಗಿದ್ದರಿಂದ ಅವರ ಅನುಕೂಲಕ್ಕೆ ತಕ್ಕಂತೆ ಯೋಜನೆಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಯೋಜನೆಯನ್ನು ರೂಪಿಸುವಲ್ಲಿ, ಯೋಜನೆಗಳ ಅನುಷ್ಠಾನ ಮತ್ತು ಕಾರ್ಯಚಟುವಟಿಕೆಗಳಲ್ಲಿ, ಗ್ರಾಮ ಪಂಚಾಯ್ತಿಗಳ ಸಭೆಗಳಲ್ಲಿ, ಗ್ರಾಮ ಪಂಚಾಯ್ತಿಗಳಲ್ಲಿ ದುಡಿಯುವ ಕೆಲಸಗಾರರಲ್ಲಿ ಹೀಗೆ ಹಲವಾರು ಅಂಶಗಳಲ್ಲಿ ಲಿಂಗ ಅಸಮಾನತೆಯ ಅಂಶಗಳನ್ನು ಕಂಡುಕೊಳ್ಳಬಹುದಾಗಿದೆ. ಈ ಯೋಜನೆಯ ಉದ್ದೇಶಗಳಲ್ಲಿಯೇ ಅಸಮಾನತೆ ಕಂಡುಬರುತ್ತದೆ. ಅಂದರೆ ಯೋಜನೆಯ ಮೊದಲ ಉದ್ದೇಶವಾದ ಕುಶಲವಲ್ಲದ ದೈಹಿಕ ಕೆಲಸವನ್ನು ಸ್ವಇಚ್ಛೆಯಿಂದ ಮಾಡಲಿಚ್ಚಿಸುವ ಪ್ರತಿಯೊಂದು ಗ್ರಾಮೀಣ ಕುಟುಂಬದ ವಯಸ್ಕ ಸದಸ್ಯರುಗಳಿಗೆ ಒಂದು ಆರ್ಥಿಕ ವರ್ಷದಲ್ಲಿ ೧೦೦ ದಿನಗಳ ಉದ್ಯೋಗವನ್ನು ನೀಡುವುದಾಗಿದೆ. ಇಲ್ಲಿ ದೈಹಿಕ ಕೆಲಸವನ್ನು ಸ್ವ ಇಚ್ಛೆಯಿಂದ ಮಾಡುವವರು ಎಂಬುದು ಮಹಿಳೆಯರನ್ನು ಮತ್ತೆ ಪುರುಷನ ಅದೀನದಲ್ಲಿ ತಳ್ಳುವಂತಾಗಿದೆ. ಏಕೆಂದರೆ ಹಿಂದಿನಿಂದಲೂ ಕೂಡ ಮಹಿಳೆಯು ಪುರುಷನಿಗಿಂತ ದೈಹಿಕವಾಗಿ ಬಲಿಷ್ಠಳಾದವಳಲ್ಲ ಹಾಗಾಗಿ ಅವಳು ಪುರುಷನು ಯಾವ ಕೆಲಸವನ್ನು ಮಾಡುತ್ತಾನೆಯೋ ಆ ಕೆಲಸವನ್ನು ಮಾಡಲು ಸಮರ್ಥಳಲ್ಲ. ಹಾಗಾಗಿ ಅವಳು ಕೇವಲ ಮನೆಯ ಒಳಗಿನ ಕೆಲಸಗಳಿಗೆ ಮಾತ್ರ ಸೀಮಿತಳು ಹಾಗೂ ಮನೆಯ ಹೊರಗಿನ ಕೆಲಸಗಳಿಗೆ ಅವಳು ಸಮರ್ಥಳಲ್ಲ ಎಂಬಂತಹ ಚಿಂತನೆಗಳು ಇರುವುದರಿಂದ ಅವಳ ಸಾಮರ್ಥ್ಯಕ್ಕೆ ಪೆಟ್ಟನ್ನು ನೀಡಿರುವುದು ಕಂಡುಬರುತ್ತದೆ. ಒಂದು ವೇಳೆ ಈ ಯೋಜನೆಯಲ್ಲಿ ಸ್ವ-ಇಚ್ಛೆಯಿಂದ ಸೇರಲು ಬಯಸಿದರೂ ಕೂಡ ಪುರುಷನ ಆದೀನದಲ್ಲಿಯೇ ದುಡಿಯುವ ಪ್ರಸಂಗಗಳು ಕಂಡುಬರುತ್ತವೆ. ಹಾಗೂ ಪುರುಷರು ಮತ್ತು ಮಹಿಳೆಯರಿಗೆ ಸಮಾನ ವೇತನ ಕೊಡಬೇಕು ಎಂಬುದು ಈ ಯೋಜನೆಯ ನಿಯಮ. ಆದರೆ ಪುರುಷರು ಮಹಿಳೆಯರಿಗೆ ಸಮಾನವಾಗಿ ವೇತನವನ್ನು ಪಡೆಯಲು ಇಚ್ಛಿಸುವುದಿಲ್ಲ. ಏಕೆಂದರೆ ದೈಹಿಕವಾಗಿ ಬಲಿಷ್ಠರಾಗಿರುವ ಮತ್ತು ಕೆಲಸದಲ್ಲಿ ಹೆಚ್ಚಿನ ಶ್ರಮವಹಿಸುವುದರಿಂದ ಮತ್ತು ಸ್ತ್ರೀಯು ಅವನ ಅಧೀನದಲ್ಲಿಯೇ ಇರಬೇಕು ಎಂಬಂತಹ ಚಿಂತನೆಗಳು ಅವನಲ್ಲಿ ನೆಲೆಯೂರಿರುವುದರಿಂದಾಗಿ ಮಹಿಳೆಗೆ ಸಮಾನವಾಗಿ ವೇತನವನ್ನು ಪಡೆಯಲು ಇಚ್ಛಿಸುವುದಿಲ್ಲ. ಹಾಗಾಗಿ ಇದು ಒಂದು ಲಿಂಗ ಅಸಮಾನತೆಗೆ ಕಾರಣವಾಗಿ ರೂಪುಗೊಂಡಿದೆ ಎಂದು ಹೇಳಬಹುದು.

ಇನ್ನು ನನ್ನ ಅಧ್ಯಯನ ಕ್ಷೇತ್ರವಾದ ಗಣದಿನ್ನಿ ಮತ್ತು ಅತ್ತನೂರು ಗ್ರಾಮ ಪಂಚಾಯ್ತಿಗಳನ್ನು ಗಮನಿಸಿದರೆ ಈ ಎರಡು ಗ್ರಾಮ ಪಂಚಾಯ್ತಿಗಳು ಮಾನ್ವಿ ತಾಲೂಕಿನ ವ್ಯಾಪ್ತಿಯಲ್ಲಿ ಬರುತ್ತವೆ. ಮೊದಲು ಈ ಮಾನ್ವಿ ತಾಲೂಕಿನಲ್ಲಿ ಈ ಉದ್ಯೋಗ ಖಾತ್ರಿ ಯೋಜನೆಯಲ್ಲಿ ಎಷ್ಟು ಜನ ಭಾಗವಹಿಸಿದ್ದಾರೆ ಎಂಬುದನ್ನು ತಿಳಿದುಕೊಳ್ಳುವುದು ಸೂಕ್ತ. ಇದನ್ನು ಈ ಕೆಳಗಿನ ಪಟ್ಟಿಯಲ್ಲಿ ತಿಳಿಸಲಾಗಿದೆ.

| ಗ್ರಾಮಪಂಚಾಯಿತಿಗಳು | ಉದ್ಯೋಗ ಚೀಟಿ ಹೊಂದಿದ ಕುಟುಂಬಗಳ ಸಂಖ್ಯೆ | | | | ಕೆಲಸದಲ್ಲಿ ತೊಡಗಿಕೊಂಡ ಮಾನವ ದಿನಗಳು | | | | |
|---|---|---|---|---|---|---|---|---|---|
| ೩೬ | ಪ.ಜಾತಿ | ಪ.ಪಂ | ಇತರರು | ಒಟ್ಟು | ಪ.ಜಾತಿ | ಪ.ಪಂ | ಇತರರು | ಒಟ್ಟು | ಮಹಿಳೆಯರು |
| | ೮೯೫೮ | ೧೧೧೯೪ | ೨೪೬೩೬ | ೪೪೭೮೮ | ೩೯೬೪೩ | ೪೨೨೪೪ | ೩೯೯೪೪ | ೧೭೫೮೩೧ | ೭೯೬೩೮ |

ಮಾರ್ಚ್ ೨೦೦೮ ರಿಂದ ಮಾರ್ಚ್ ೨೦೦೯ರವರೆಗೆ ಮಾನ್ವಿ ತಾಲೂಕಿನ ವ್ಯಾಪ್ತಿಯಲ್ಲಿ ಉದ್ಯೋಗ ಚೀಟಿಯನ್ನು ಹೊಂದಿದ ಕುಟುಂಬಗಳ ಜಾತಿವಾರು ವಿಂಗಡಣೆ ಮತ್ತು ಕೆಲಸದಲ್ಲಿ ತೊಡಗಿಕೊಂಡ ಮಾನವ ದಿನಗಳು.

ಮಾನ್ವಿ ತಾಲೂಕಿನಲ್ಲಿ ಒಟ್ಟು ೩೬ ಗ್ರಾಮ ಪಂಚಾಯ್ತಿಗಳು ಬರುತ್ತಿದ್ದು ಈ ಎಲ್ಲಾ ಗ್ರಾಮ ಪಂಚಾಯ್ತಿಗಳಲ್ಲೂ ಈ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯು ಅನುಷ್ಠಾನದಲ್ಲಿದೆ. ಒಟ್ಟು ೩೬ ಗ್ರಾಮ ಪಂಚಾಯ್ತಿಗಳಲ್ಲಿ ಉದ್ಯೋಗ ಚೀಟಿಯನ್ನು ಹೊಂದಿದ ಜಾತಿವಾರು ವಿಂಗಡನೆಯನ್ನು ಈ ಮೇಲಿನ ಪಟ್ಟಿಯಲ್ಲಿ ತಿಳಿಸಲಾಗಿದೆ. ಪರಿಶಿಷ್ಟ ಜಾತಿಯ ಸುಮಾರು ೮೯೫೮ ಕುಟುಂಬಗಳು ಉದ್ಯೋಗ ಚೀಟಿಯನ್ನು ಹೊಂದಿದ್ದು ೩೯೬೪೩ ಮಾನವ ದಿನಗಳು ಕೆಲಸದಲ್ಲಿ ತೊಡಗಿಸಿಕೊಂಡಿದ್ದಾರೆ. ಕ್ರಮವಾಗಿ ಪರಿಶಿಷ್ಟ ಪಂಗಡ ೧೧೧೯೪ ಕುಟುಂಬಗಳು ಉದ್ಯೋಗ ಚೀಟಿಯನ್ನು ಮತ್ತು ೪೨೨೪೪ ಮಾನವ ದಿನಗಳು, ಇತರೆ ವರ್ಗದವರು ೨೪೬೩೬ ಕುಟುಂಬಗಳು ಮತ್ತು ೩೯೯೪೪ ಮಾನವ ದಿನಗಳು ಕೆಲಸದಲ್ಲಿ ತೊಡಗಿಕೊಂಡಿದ್ದಾರೆ. ಇದರಲ್ಲಿ ೯೬೧೯೩ ಮಾನವ ದಿನಗಳು ಪುರುಷರದಾದರೆ ೭೯೬೩೮ ಮಾನವ ದಿನಗಳು ಮಹಿಳೆಯರದು. ಇದು ಇಡೀ ಮಾನ್ವಿ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ೩೬ ಗ್ರಾಮಪಂಚಾಯತಿಗಳಲ್ಲಿ ಕಂಡುಬರುವ ಉದ್ಯೋಗ ಚೀಟಿಯನ್ನು ಹೊಂದಿರುವ ಜಾತಿವಾರು ವಿಂಗಡಣೆ ಮತ್ತು ಕೆಲಸದಲ್ಲಿ ತೊಡಗಿಕೊಂಡ ಮಾನವ ದಿನಗಳಾಗಿವೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯು ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ತನ್ನ ಕಾರ್ಯಯೋಜನೆಗಳನ್ನು ರೂಪಿಸಿರುವುದರಿಂದ ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಎರಡು ಪಂಚಾಯ್ತಿಗಳಾದ ಅತ್ತನೂರು ಮತ್ತು ಗಣದಿನ್ನಿಗಳಲ್ಲಿ ಈ ಉದ್ಯೋಗ ಖಾತ್ರಿ ಯೋಜನೆಯು ಎಷ್ಟರ ಮಟ್ಟಿಗೆ ಸಫಲತೆಯನ್ನು ಹೊಂದಿದೆ ಮತ್ತು ಅಲ್ಲಿನ ಜನರ ಆರ್ಥಿಕತೆಯು ಎಷ್ಟು ಸುಧಾರಿಸಿದೆ? ಹಾಗೂ ಈ ಯೋಜನೆಯಲ್ಲಿನ ಲಿಂಗತಾರತಮ್ಯದ ನೆಲೆಗಳೇನು ಮತ್ತು ಮಹಿಳೆಯರ ಪಾತ್ರ ಈ ಯೋಜನೆಯಲ್ಲಿ ಎಷ್ಟಿದೆ? ಎಂಬುದನ್ನು ತಿಳಿದುಕೊಳ್ಳುವುದು ಅಗತ್ಯವಾಗಿದೆ. ಹಾಗಾಗಿ ಒಂದೊಂದು ಗ್ರಾಮ ಪಂಚಾಯ್ತಿಗಳಡಿಯಲ್ಲಿ ಈ ಉದ್ಯೋಗ ಖಾತ್ರಿ ಯೋಜನೆಯ ಬಗ್ಗೆ ಈ ಕೆಳಗಿನಂತೆ ತಿಳಿಯಬಹುದಾಗಿದೆ.

## ಅತ್ತನೂರು ಗ್ರಾಮ ಪಂಚಾಯ್ತಿ

ಅತ್ತನೂರು ಗ್ರಾಮ ಪಂಚಾಯ್ತಿಯು ಸುಮಾರು ೮೭೦೦ ಜನಸಂಖ್ಯೆಯನ್ನು ಹೊಂದಿದ್ದು ಈ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಅತ್ತನೂರು, ಜಕ್ಕಲದಿನ್ನಿ, ಶಾಖಾಪೂರ, ನೀಲಗಲ್ ಕ್ಯಾಂಪ್

ಮತ್ತು ಆಂಜನೇಯ ಕ್ಯಾಂಪ್ ಎಂಬ ಒಟ್ಟು ೫ ಹಳ್ಳಿಗಳು ಬರುತ್ತವೆ. ಈ ಐದು ಹಳ್ಳಿಗಳಲ್ಲಿಯೂ ಈ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯ ಕಾಮಗಾರಿಗಳು ಜಾರಿಯಲ್ಲಿರುವುದು ಕಂಡುಬರುತ್ತದೆ. ಈ ಗ್ರಾಮಪಂಚಾಯ್ತಿಯು ಮೂರು ತಿಂಗಳಿಗೆ ಒಂದು ಬಾರಿ ಗ್ರಾಮ ಸಭೆಗಳನ್ನು ಕರೆಯುತ್ತದೆ. ಈ ಗ್ರಾಮ ಸಭೆಗಳು ಪ್ರತಿಯೊಂದು ಊರಿನಲ್ಲಿ ಏರ್ಪಡಿಸಲಾಗುತ್ತಿದೆ ಎಂದು ಹೇಳಲಾಗುತ್ತದೆ. ಆದರೆ ಇದು ವಾಸ್ತವ ಸತ್ಯ ಅಲ್ಲ. ಹಾಗೂ ಒಂದು ವೇಳೆ ಗ್ರಾಮ ಸಭೆಗಳು ನಡೆದರೆ ಈ ಗ್ರಾಮ ಸಭೆಗಳಲ್ಲಿ ಭಾಗವಹಿಸುವವರು ಕೇವಲ ಕೆಲವೇ ಜನ ಪುರುಷರಾಗಿದ್ದಾರೆ. ಈ ಗ್ರಾಮ ಸಭೆಗಳಲ್ಲಿ ಮಹಿಳೆಯರು ಭಾಗವಹಿಸುವುದು ತುಂಬಾ ಕಡಿಮೆಯಾಗಿದೆ. ಏಕೆಂದರೆ ಈ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಬರುವ ಬಹಳಷ್ಟು ಮಹಿಳೆಯರು ಅನಕ್ಷರಸ್ಥರಾಗಿದ್ದು, ಗ್ರಾಮಸಭೆಗಳು ರಾಜಕೀಯ ಈ ತರಹದ ಮುಂತಾದ ವಿಷಯಗಳ ಬಗ್ಗೆ ಅಸಡ್ಡೆಯನ್ನು ಅಥವಾ ನಿರ್ಲಕ್ಷ್ಯತೆಯನ್ನು ತೋರಿದವರಾಗಿದ್ದಾರೆ. ಹಾಗೂ ಒಂದು ವೇಳೆ ಅವಳಿಗೆ ಆಸಕ್ತಿ ಇದ್ದರೂ ಕೂಡ ಅವಳನ್ನು ಮನೆಯಿಂದ ಹೊರ ಬರದಂತೆ ನಿರ್ಬಂಧವನ್ನು ಹೇರಲಾಗಿದೆ. ಹಾಗಾಗಿ ಅವಳು ಮನೆಯ ವಿಷಯಗಳನ್ನು ಹೊರತುಪಡಿಸಿ ಬೇರೆ ವಿಷಯಗಳಿಗೆ ಹೆಚ್ಚಿನ ಆಸಕ್ತಿಯನ್ನು ತೋರಿಸದೆ ಪುರುಷನ ಆಜ್ಞೆಯಂತೆ ಕೆಲಸ ಮಾಡುತ್ತಿರುತ್ತಾಳೆ. ಈ ಗ್ರಾಮ ಪಂಚಾಯ್ತಿಗಳು ಸಹ ಗ್ರಾಮ ಸಭೆಗಳಲ್ಲಿ ಉದ್ಯೋಗ ಖಾತ್ರಿ ಯೋಜನೆಯ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಜನರಿಗೆ ತಿಳಿಸಿಲ್ಲದಿರುವುದು ಕ್ಷೇತ್ರಾಧ್ಯಯನದಿಂದ ತಿಳಿದುಬಂದಿದೆ. ಈ ಯೋಜನೆಯ ಪ್ರಯೋಜನವನ್ನು ಕೆಲವೇ ಉನ್ನತವರ್ಗದವರು ಪಡೆಯುತ್ತಿದ್ದಾರೆ. ಕಂಡುಬಂದಿದೆ. ಇದನ್ನು ಮರೆಮಾಚುವುದರ ಸಲುವಾಗಿ ಗ್ರಾಮಗಳಲ್ಲಿ ಪ್ರತಿಯೊಂದು ಕುಟುಂಬಕ್ಕೂ ಉದ್ಯೋಗ ಚೀಟಿಯನ್ನು ನೀಡಲಾಗಿದೆ. ಅದರಲ್ಲೂ ಹೆಚ್ಚಾಗಿ ಮಹಿಳೆಯರ ಹೆಸರಿನಲ್ಲಿ ನೀಡಲಾಗಿದೆ. ಇವರ ಹೆಸರಿನಲ್ಲಿ ಉನ್ನತ ವರ್ಗದ ಜನರು ತಮಗೆ ಬೇಕಾದ ಲಾಭವನ್ನು ಪಡೆಯುತ್ತಿದ್ದಾರೆ. ಈ ಗ್ರಾಮಗಳಲ್ಲಿ ಕೆಲವು ಸ್ವ-ಸಹಾಯ ಸಂಘಗಳಿದ್ದು ಅವುಗಳು ಈ ಯೋಜನೆಯ ಪ್ರಯೋಜನವನ್ನು ಪಡೆದುಕೊಳ್ಳುವಲ್ಲಿ ವಿಫಲವಾಗಿದೆ. ಏಕೆಂದರೆ ಈ ಸಂಘಗಳು ಯಾವುದೇ ಗ್ರಾಮ ಸಭೆಗಳಲ್ಲಿ ಭಾಗವಹಿಸುತ್ತಿಲ್ಲ. ಹಾಗಾಗಿ ಈ ಯೋಜನೆಯ ಬಗ್ಗೆ ಅವುಗಳಿಗೆ ಅರಿವೇ ಇಲ್ಲದಂತಾಗಿದೆ. ಊರಿನ ಪ್ರಮುಖರು ಹೇಳುವ ಹಾಗೆ ಕೇಳಿಕೊಂಡು ಈ ಸಂಘಗಳು ಮುಂದುವರಿಯುತ್ತಿವೆ. ಈ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಕಂಡುಬರುವ ಗ್ರಾಮಗಳಲ್ಲಿ ಈ ಉದ್ಯೋಗ ಖಾತ್ರಿ ಯೋಜನೆಯ ಅಡಿಯಲ್ಲಿ ಕೈಗೊಂಡಿರುವ ಕಾಮಗಾರಿಗಳ ವಿವರಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

| ಕ್ರ.ಸಂ. | ಗ್ರಾಮಗಳು | ಕೈಗೊಂಡಿರುವ ಕಾಮಗಾರಿಗಳು |
|---|---|---|
| ೦೧ | ಅತ್ತನೂರು | ೧. ಕೃಷಿಹೊಂಡ ೨. ಚೆಕ್‌ಡ್ಯಾಂ<br>೩. ಕಾಲುವೆ ಹೊಳೆತ್ತುವುದು, ೪. ಅರಣ್ಯೀಕರಣ<br>೫. ಜಂಗಲ್ ಕಟಿಂಗ್ ಊರಿನ ಸುತ್ತ |

| | | ೬. ಸ್ಮಶಾಸನದಲ್ಲಿ ಜಂಗಲ್ ಕಟಿಂಗ್<br>೭. ಒಡ್ಡುಗಳ ನಿರ್ಮಾಣ |
|---|---|---|
| ೦೨ | ಜಕ್ಕಲದಿನ್ನಿ | ೧. ಕೃಷಿಹೊಂಡ<br>೨. ಚೆಕ್‌ಡ್ಯಾಂ<br>೩. ಕುಡಿಯುವ ನೀರಿನ ಕೆರೆಯ ನಿರ್ಮಾಣ<br>೪. ಜಂಗಲ್ ಕಟಿಂಗ್ |
| ೦೩ | ಶಾಖಾಪೂರ | ೧. ಕೃಷಿ ಹೊಂಡ<br>೨. ಚೆಕ್‌ಡ್ಯಾಂ<br>೩. ಒಡ್ಡು ನಿರ್ಮಾಣ<br>೪. ಕುಡಿಯುವ ನೀರಿನ ಕೆರೆ ನಿರ್ಮಾಣ<br>೫. ಕಾಲುವೆ ಹೊಳೆತ್ತುವುದು |
| ೦೪ | ನೀಲಗಲ್ ಕ್ಯಾಂಪ್ | ೧. ಕೃಷಿ ಹೊಂಡ<br>೨. ಕಾಲುವೆ ಹೊಳೆತ್ತುವುದು<br>೩. ಜಂಗಲ್ ಕಟಿಂಗ್<br>೪. ರಸ್ತೆ ನಿರ್ಮಾಣ |
| ೦೫ | ಆಂಜನೇಯ ಕ್ಯಾಂಪ್ | ೧. ಜಂಗಲ್ ಕಟಿಂಗ್<br>೨. ರಸ್ತೆ ನಿರ್ಮಾಣ |

ಅತ್ತನೂರು ಗ್ರಾಮ ಪಂಚಾಯ್ತಿ ವ್ಯಾಪ್ತಿಯಲ್ಲಿ ಬರುವಂತಹ ಗ್ರಾಮಗಳು ಮತ್ತು ಕೈಗೊಂಡಿರುವ ಕಾಮಗಾರಿಗಳು.(ವರದಿಯಲ್ಲಿ ತಿಳಿಸಿರುವಂತೆ)

ಅತ್ತನೂರು ಗ್ರಾಮ ಪಂಚಾಯ್ತಿಯಲ್ಲಿ ಈ ಮೇಲಿನ ಎಲ್ಲಾ ಕಾಮಗಾರಿಗಳನ್ನು ಕೈಗೊಂಡಿದ್ದು ಅವುಗಳೆಲ್ಲವೂ ಪರಿಪೂರ್ಣತೆಯನ್ನು ಹೊಂದುವ ಹಂತದಲ್ಲಿವೆ. ಹಾಗೆಯೇ ಈ ಉದ್ಯೋಗ ಖಾತ್ರಿ ಯೋಜನೆಯಲ್ಲಿ ತೊಡಗಿಕೊಂಡಿರುವ ಕುಟುಂಬಗಳ ಸಂಖ್ಯೆಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

| ಗ್ರಾಮಗಳು | ಒಟ್ಟು ಕುಟುಂಬಗಳು | ಉದ್ಯೋಗ ಕಾರ್ಡ್ ಹೊಂದಿರುವ ಕುಟುಂಬಗಳು | | ಉದ್ಯೋಗ ಕಾರ್ಡ್ ಹೊಂದಿರುವ ಒಟ್ಟು ಕುಟುಂಬಗಲು ಸಂಖ್ಯೆ |
|---|---|---|---|---|
| | | ಮಹಿಳೆಯರು | ಪುರುಷರು | |
| ಅತ್ತನೂರು | ೯೯೮ | ೩೪೯ | ೩೪೦ | ೬೮೯ |
| ಜಕ್ಕಲದಿನ್ನಿ | ೪೦೦ | ೧೧೦ | ೧೯೦ | ೩೦೦ |
| ಶಾಖಾಪೂರ | ೨೮೦ | ೭೫ | ೧೦೫ | ೧೮೦ |
| ನೀಲಗಲ್ ಕ್ಯಾಂಪ್ | ೮೦ | ೨೦ | ೩೦ | ೫೦ |
| ಆಂಜನೇಯ ಕ್ಯಾಂಪ್ | ೩೫ | ೫ | ೧೦ | ೧೫ |

ಅತ್ತನೂರು ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳು ಮತ್ತು ಉದ್ಯೋಗ ಕಾರ್ಡ್‌ಗಳನ್ನು ಹೊಂದಿರುವ ಕುಟುಂಬಗಳ ಸಂಖ್ಯೆ.

ಅತ್ತನೂರು ಗ್ರಾಮ ಪಂಚಾಯ್ತಿಯಲ್ಲಿ ಈ ಯೋಜನೆಯ ಫಲವನ್ನು ಕೆಲವು ಕುಟುಂಬಗಳು ಮಾತ್ರ ಪಡೆದಿರುವುದು ಕಂಡುಬರುತ್ತದೆ. ಅತ್ತನೂರು ಗ್ರಾಮದಲ್ಲಿ ಒಟ್ಟು ೯೯೮ ಕುಟುಂಬಗಳಲ್ಲಿ ೬೮೯ ಕುಟುಂಬಗಳು ಮಾತ್ರ ಉದ್ಯೋಗ ಕಾರ್ಡ್‌ಗಳನ್ನು ಹೊಂದಿವೆ. ಇದರಲ್ಲಿ ೩೪೯ ಮಹಿಳೆಯರು ಮತ್ತು ೩೪೦ ಪುರುಷರು ಉದ್ಯೋಗ ಕಾರ್ಡ್‌ಗಳನ್ನು ಹೊಂದಿದ್ದಾರೆ. ಇಲ್ಲಿ ಪುರುಷರಿಗಿಂತ ಮಹಿಳೆಯರೇ ಹೆಚ್ಚಾಗಿ ಉದ್ಯೋಗ ಕಾರ್ಡ್‌ಗಳನ್ನು ಹೊಂದಿದ್ದಾರೆ. ಮತ್ತು ಸುಮಾರು ೩೦೯ ಕುಟುಂಬಗಳು ಈ ಯೋಜನೆಯಿಂದ ದೂರ ಉಳಿದಿದ್ದಾರೆ. ಉಳಿದಂತೆ ಜಿಕ್ಕಲದಿನ್ನಿ, ಶಾಹಾಪೂರ, ನೀಲಗಲ್ ಕ್ಯಾಂಪ್, ಆಂಜನೇಯ ಕ್ಯಾಂಪ್ ಗಳಲ್ಲಿ ಹೆಚ್ಚಿನದಾಗಿ ಪುರುಷರು ಉದ್ಯೋಗ ಕಾಡ್ ್ಗಗಳನ್ನು ಹೊಂದಿರುವುದು ಕಂಡುಬರುತ್ತದೆ. ಹಾಗೆಯೇ ಉದ್ಯೋಗ ಕಾರ್ಡ್‌ಗಳನ್ನು ಹೊಂದಿರದ ಕುಟುಂಬಗಳು ಕೂಡ ಇವೆ. ಮತ್ತು ಅತ್ತನೂರು ಗ್ರಾಮ ಪಂಚಾಯ್ತಿಯಲ್ಲಿ ಹಲಾವರು ಜಾತಿ ಜನಾಂಗದವರು ವಾಸವಾಗಿದ್ದು ಅವರ ಜಾತಿವಾರು ವಿಂಗಡಣೆ ಮತ್ತು ಅವರು ಕೆಲಸದಲ್ಲಿ ತೊಡಗಿಕೊಂಡ ಮಾನವ ದಿನಗಳನ್ನು ಈ ಕೆಳಗಿನ ಪಟ್ಟಿಯಿಂದ ತಿಳಿಯಬಹುದು.

| ಗ್ರಾಮಪಂಚಾಯಿತಿಗಳು | ಉದ್ಯೋಗ ಚೀಟಿ ಹೊಂದಿದ ಕುಟುಂಬಗಳ ಸಂಖ್ಯೆ | | | | ಕೆಲಸದಲ್ಲಿ ತೊಡಗಿಕೊಂಡ ಮಾನವ ದಿನಗಳು | | | | |
|---|---|---|---|---|---|---|---|---|---|
| ಅತ್ತನೂರು | ಪ.ಜಾತಿ | ಪ.ಪಂ | ಇತರರು | ಒಟ್ಟು | ಪ.ಜಾತಿ | ಪ.ಪಂ | ಇತರರು | ಒಟ್ಟು | ಮಹಿಳೆಯರು |
| | ೨೫೦ | ೨೮೬ | ೬೯೮ | ೧೨೩೪ | ೩೫೨೫ | ೨೫೧೮ | ೪೦೩೦ | ೧೦೦೭೩ | ೪೦೨೯ |

ಮಾರ್ಚ್ ೨೦೦೮ ರಿಂದ ಮಾರ್ಚ್ ೨೦೦೯ರವರೆಗಿನ ವರದಿ.

ಅತ್ತನೂರು ಗ್ರಾಮ ಪಂಚಾಯ್ತಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕುಟುಂಬಗಳು ಇತರೆ ವರ್ಗದ ಕುಟುಂಬಗಳಿಗಿಂತ ಕಡಿಮೆ ಪ್ರಮಾಣದಲ್ಲಿ ಉದ್ಯೋಗ ಕಾಡ್ ್ಗಗಳನ್ನು ಹೊಂದಿವೆ. ಆದರೆ ಕೆಲಸದಲ್ಲಿ ತೊಡಗಿಕೊಂಡ ಮಾನವ ದಿನಗಳನ್ನು ಪರಿಶೀಲಿಸಿದರೆ ಇತರ ವರ್ಗದವರಿಗಿಂತ ಪರಿಶಿಷ್ಟ ಜಾತಿ/ಪಂಗಡದವರು ಹೆಚ್ಚಿನ ದಿನಗಳು ಕೆಲಸದಲ್ಲಿ ತೊಡಗಿರುವುದು ಕಂಡುಬರುತ್ತದೆ. ಇಲ್ಲಿ ಹೆಚ್ಚಿನ ದೈಹಿಕ ಶ್ರಮವಹಿಸುವವರು ಕೆಳ ಸಮುದಾಯದವರೇ ಆಗಿರುವುದು ಎಂಬುದು ತಿಳಿದು ಬರುತ್ತದೆ. ಒಟ್ಟಾರೆ ಮಾನವ ದಿನಗಳಲ್ಲಿ ೪೦೨೯ ಮಾನವ ದಿನಗಳು ಮಹಿಳೆಯರು ಭಾಗವಹಿಸಿದ್ದು ಇವರು ಶೇ.೪೦ರಷ್ಟು ಕೆಲಸದಲ್ಲಿ ತೊಡಗಿಕೊಂಡಿದ್ದಾರೆ.

### ಗಣದಿನ್ನಿ ಗ್ರಾಮಪಂಚಾಯ್ತಿ

ಗಣದಿನ್ನಿ ಗ್ರಾಮ ಪಂಚಾಯ್ತಿಯು ೬ ಗ್ರಾಮಗಳನ್ನು ಒಳಗೊಂಡಿದ್ದು (ಗಣದಿನ್ನಿ ಊರನ್ನು ಒಳಗೊಂಡು) ಇಲ್ಲಿನ ಜನಸಂಖ್ಯೆ ೮೨೦೦ರಷ್ಟಾಗಿದೆ. ಈ ಗ್ರಾಮಗಳಲ್ಲಿ ಉದ್ಯೋಗ ಖಾತ್ರಿ ಯೋಜನೆಯ ಎಲ್ಲಾ ಕಾಮಗಾರಿಗಳು ಜಾರಿಯಲ್ಲಿರುವುದು ತಿಳಿದುಬರುತ್ತದೆ. ಗ್ರಾಮಗಳಲ್ಲಿನ ಕಾಮಗಾರಿಗಳ ಬಗ್ಗೆ ಈ ಕೆಳಗಿನಂತೆ ತಿಳಿಯಬಹುದಾಗಿದೆ.

| ಕ್ರ.ಸಂ. | ಗ್ರಾಮಗಳು | ಕೈಗೊಂಡಿರುವ ಕಾಮಗಾರಿಗಳು |
|---|---|---|
| ೦೧ | ಗಣದಿನ್ನಿ | ೧. ಕೃಷಿಹೊಂಡ ೨. ಚೆಕ್‌ಡ್ಯಾಂ<br>೩. ಕಾಲುವೆ ಹೊಳೆತ್ತುವುದು<br>೪. ಜಂಗಲ್ ಕಟಿಂಗ್<br>೫. ಒಡ್ಡುಗಳ ನಿರ್ಮಾಣ |
| ೦೨ | ಮಾಚನೂರು | ೧. ಕೃಷಿಹೊಂಡ<br>೨. ಚೆಕ್‌ಡ್ಯಾಂ<br>೩. ಕಾಲುವೆ ಹೊಳೆತ್ತುವುದು<br>೪. ಜಂಗಲ್ ಕಟಿಂಗ್ ಊರಿನ ಸುತ್ತಮುತ್ತ ಸ್ಮಶಾನದಲ್ಲಿ<br>೫. ರಸ್ತೆ ಕಾಮಗಾರಿ |
| ೦೩ | ಹೊಕ್ರಾಣಿ | ೧. ಕೃಷಿ ಹೊಂಡ<br>೨. ಚೆಕ್‌ಡ್ಯಾಂ<br>೩. ಕಾಲುವೆ ಹೊಳೆತ್ತುವುದು<br>೪. ಕುಡಿಯುವ ನೀರಿನ ಕೆರೆ ನಿರ್ಮಾಣ<br>೫. ಜಂಗಲ್ ಕಟಿಂಗ್ |
| ೦೪ | ಬೇವಿನೂರು | ೧. ಕೃಷಿ ಹೊಂಡ<br>೨. ಜಂಗಲ್ ಕಟಿಂಗ್ |
| ೦೫ | ತುಪ್ಪದೂರು | ೧. ಕೃಷಿಹೊಂಡ<br>೨. ಕಾಲುವೆ ಹೊಳೆತ್ತುವುದು<br>೨. ಜಂಗಲ್ ಕಟಿಂಗ್ |

ಗಣದಿನ್ನಿ ಗ್ರಾಮಪಂಚಾಯ್ತಿಯ ವ್ಯಾಪ್ತಿಯಲ್ಲಿ ಈ ಮೇಲಿನ ಎಲ್ಲಾ ಕಾಮಗಾರಿಗಳು ಜಾರಿಯಲ್ಲಿವೆ. ಗಣದಿನ್ನಿ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳು ಮತ್ತು ಉದ್ಯೋಗ ಕಾರ್ಡ್‌ಗಳನ್ನು ಹೊಂದಿರುವ ಕುಟುಂಬಗಳ ಸಂಖ್ಯೆ. ಈ ಕೆಳಗಿನಂತಿವೆ.

| ಗ್ರಾಮಗಳು | ಒಟ್ಟು ಕುಟುಂಬಗಳು | ಉದ್ಯೋಗ ಕಾರ್ಡ್ ಹೊಂದಿರುವ ಕುಟುಂಬಗಳು | | ಉದ್ಯೋಗ ಕಾರ್ಡ್ ಹೊಂದಿರುವ ಒಟ್ಟು ಕುಟುಂಬಗಲು ಸಂಖ್ಯೆ |
|---|---|---|---|---|
| | | ಮಹಿಳೆಯರು | ಪುರುಷರು | |
| ಗಣದಿನ್ನಿ | ೫೪೦ | ೧೪೦ | ೧೬೦ | ೩೦೦ |
| ಮಾಚನೂರು | ೩೫೦ | ೧೨೭ | ೧೫೩ | ೨೮೦ |
| ಹೊತ್ರಾಣಿ | ೩೮೦ | ೧೦೪ | ೧೧೧ | ೨೧೫ |
| ಸಿಂಗಡದಿನ್ನಿ | ೮೦ | ೨೨ | ೨೮ | ೫೦ |
| ಬೇವಿನೂರು | ೭೦ | ೧೬ | ೨೦ | ೩೬ |
| ತುಪ್ಪದೂರು | ೮೦ | ೨೨ | ೨೨ | ೪೪ |

ಗಣದಿನ್ನಿ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಪುರುಷರಿಗಿಂತ ಮಹಿಳೆಯರೇ ಹೆಚ್ಚಾಗಿ ಉದ್ಯೋಗ ಕಾರ್ಡಗಳನ್ನು ಹೊಂದಿದ್ದಾರೆ. ಆದರೆ ಇದು ಹೆಸರಿಗೆ ಮಾತ್ರ ಅಂದರೆ ಇದು ಕೇವಲ ವರದಿಗಳಲ್ಲಿನ ದಾಖಲಾತಿಯಾಗಿದೆ. ವಾಸ್ತವದಲ್ಲಿ ಈ ಸಂಖ್ಯೆ ನಿಜವಾಗಿದ್ದರೂ ಸಹ ಮಹಿಳೆಯರಿಗೆ ಈ ಯೋಜನೆಯಿಂದ ಯಾವುದೇ ಪ್ರಯೋಜನ ದೊರೆತಿಲ್ಲ. ಗಣದಿನ್ನಿ ಗ್ರಾಮದಲ್ಲಿ ಒಟ್ಟು ೫೪೦ ಕುಟುಂಬಗಳಿದ್ದು ಅವುಗಳಲ್ಲಿ ೩೦೦ ಕುಟುಂಬಗಳು ಉದ್ಯೋಗಕಾರ್ಡ್‌ಗಳನ್ನು ಹೊಂದಿವೆ. ಇದರಲ್ಲಿ ಪುರುಷರು ೧೪೦ ಮತ್ತು ಮಹಿಳೆಯರು ೧೬೦ ಕುಟುಂಬಗಳು ಉದ್ಯೋಗಕಾರ್ಡ್‌ಗಳನ್ನು ಹೊಂದಿವೆ. ಸುಮಾರು ೨೪೦ ಕುಟುಂಬಗಳು ಈ ಯೋಜನೆಯಿಂದ ಹೊರಗೆ ಉಳಿದಿದ್ದಾರೆ. ಇನ್ನು ಉಳಿದಂತೆ ಮಾಚನೂರು, ಹೊಕ್ರಾಣಿ, ಸಿಂಗಡದಿನ್ನಿ, ಬೇವಿನೂರು ಮತ್ತು ತುಪ್ಪದೂರು ಗ್ರಾಮಗಳಲ್ಲಿಯೂ ಸಹ ಮಹಿಳೆಯರು ಪುರುಷರಿಗಿಂತ ಹೆಚ್ಚಿನ ಉದ್ಯೋಗ ಕಾರ್ಡ್‌ಗಳನ್ನು ಹೊಂದಿದ್ದಾರೆ. ಈ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಹಲವಾರು ಜಾತಿ, ಜನಾಂಗಗಳು ವಾಸವಾಗಿದ್ದು ಅವರ ಜಾತಿವಾರು ವಿಂಗಡಣೆ ಮತ್ತು ಅವರು ಕೆಲಸದಲ್ಲಿ ತೊಡಗಿಕೊಂಡ ಮಾನವ ದಿನಗಳನ್ನು ಈ ಕೆಳಗಿನ ಕೋಷ್ಟಕದಿಂಗ ತಿಳಿಯಬಹುದಾಗಿದೆ.

| ಗ್ರಾಮಪಂಚಾಯಿತಿಗಳು | ಉದ್ಯೋಗ ಚೀಟಿ ಹೊಂದಿದ ಕುಟುಂಬಗಳ ಸಂಖ್ಯೆ | | | | ಕೆಲಸದಲ್ಲಿ ತೊಡಗಿಕೊಂಡ ಮಾನವ ದಿನಗಳು | | | | |
|---|---|---|---|---|---|---|---|---|---|
| ಗಣದಿನ್ನಿ | ಪ.ಜಾತಿ | ಪ.ಪಂ | ಇತರರು | ಒಟ್ಟು | ಪ.ಜಾತಿ | ಪ.ಪಂ | ಇತರರು | ಒಟ್ಟು | ಮಹಿಳೆಯರು |
| | ೨೫೨ | ೨೧೩ | ೪೭೦ | ೯೩೫ | ೮೦೩೭ | ೩೪೧೨ | ೭೮೦೩ | ೧೭೨೫೧ | ೬೯೦೦ |

ಮಾರ್ಚ್ ೨೦೦೮ ರಿಂದ ಮಾಚ್ ೯ ೨೦೦೯ ವರೆಗಿನ ಉದ್ಯೋಗ ಕಾರ್ಡ್‌ಗಳನ್ನು ಹೊಂದಿದ ಕುಟುಂಬಗಳ ಜಾತಿವಾರು ವಿಂಗಡಣೆ ಮತ್ತು ಕೆಲಸದಲ್ಲಿ ತೊಡಗಿಕೊಂಡ ಮಾನವ ದಿನಗಳು.

ಗಣದಿನ್ನಿ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿ(SC) ಮತ್ತು ಪರಿಶಿಷ್ಟ ಪಂಗಡ(ST)ದ ಕುಟುಂಬಗಳು ಇತರೆ ವರ್ಗದ(others)ವರಿಗಿಂತ ಕಡಿಮೆ ಉದ್ಯೋಗ ಕಾಡ್ ್ಗಳನ್ನು ಹೊಂದಿವೆ. ಆದರೆ ಕೆಲಸ ಮಾಡಿದ ಮಾನವ ದಿನಗಳನ್ನು ಪರಿಶೀಲಿಸಿದಾಗ ಇತರೆ ವರ್ಗದವರಿಗಿಂತ ಪರಿಶಿಷ್ಟ ಜಾತಿ/ವರ್ಗದವರೆ ಹೆಚ್ಚಾಗಿ ತೊಡಗಿಕೊಂಡಿದ್ದಾರೆ. ಇದರಲ್ಲಿ ೬೯೦೦ ಮಾನವ ದಿನಗಳು ಮಹಿಳೆಯರು ಕೆಲಸದಲ್ಲಿ ತೊಡಗಿದ್ದಾರೆ. ಇದನ್ನು ಗಮನಿಸಿದರೆ ಶೇ.೪೦ರಷ್ಟು ಮಾತ್ರ ಮಹಿಳೆಯರು ಈ ಯೋಜನೆಯಲ್ಲಿ ಭಾಗವಹಿಸಿದ್ದಾರೆ ಎಂಬುದು ತಿಳಿದಬರುತ್ತದೆ. ಇನ್ನುಳಿದಂತೆ ಶೇ.೬೦ರಷ್ಟು ಪುರುಷರು ಕೆಲಸದಲ್ಲಿ ತೊಡಗಿಕೊಂಡಿದ್ದಾರೆ. ಆದರೆ ಇದು ಕೇವಲ ಪುಸ್ತಕದಲ್ಲಿಯ ವರದಿಯಾಗಿದೆಯೇ ಹೊರತು ವಾಸ್ತವದಲ್ಲಿ ಮಹಿಳೆಯರ ಭಾಗವಹಿಸುವಿಕೆಯು ತುಂಬಾ ಕಡಿಮೆಯಿರುವುದು ಕಂಡುಬರುತ್ತದೆ.

ಗಣದಿನ್ನಿ ಮತ್ತು ಅತ್ತನೂರು ಗ್ರಾಮ ಪಂಚಾಯ್ತಿಗಳಲ್ಲಿ ಈ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಸಾಧಾರಣವಾಗಿರುವುದು ಕಂಡುಬರುತ್ತದೆ. ಕೆಲವು

ಗ್ರಾಮಗಳಲ್ಲಿ ಮಹಿಳೆಯರೇ ಹೆಚ್ಚಿನ ಉದ್ಯೋಗ ಕಾರ್ಡಗಳನ್ನು ಹೊಂದಿದ್ದರೂ ಕೂಡ ಅವರು ಆರ್ಥಿಕವಾಗಿ ಸ್ವಾವಲಂಬಿಗಳಾಗಿಲ್ಲ. ಏಕೆಂದರೆ ಅದು ಕೇವಲ ಹೆಸರಿಗೆ ಮಾತ್ರ, ಅವರ ಅಧಿಕಾರವೆಲ್ಲವೂ ಪುರುಷರ ಕೈಯಲ್ಲಿರುತ್ತದೆ. ಹಾಗಾಗಿ ಕುಟುಂಬದ ಹೊರ ಬಂದು ಉದ್ಯೋಗದಲ್ಲಿ ತೊಡಗಿಕೊಂಡಿದ್ದರೂ ಸಹ ಮಹಿಳೆ ತನ್ನ ಸ್ವಾತಂತ್ರ್ಯವನ್ನು ಪಡೆದುಕೊಳ್ಳುವಲ್ಲಿ ವಿಫಲಳಾಗಿದ್ದಾಳೆ.

ಯೋಜನೆಯು ಹಲವಾರು ಲಿಂಗ ಅಸಮಾನತೆಗಳನ್ನು ಹೊಂದಿರುವುದನ್ನು ಮತ್ತು ಸ್ತ್ರೀಯರು ಸಮಾಜದಲ್ಲಿನ ಎರಡನೆ ದರ್ಜೆಯ ಸ್ಥಾನಕ್ಕೆ ಪುಷ್ಟಿಕೊಡುವಂತಹ ಅಂಶಗಳನ್ನು ಈ ಹಿಂದೆಯೇ ಕೆಲವು ಉದಾಹರಣೆಗಳಿಂದ ತಿಳಿದುಕೊಳ್ಳಲಾಗಿದೆ. ಇನ್ನು ಮುಂದುವರೆದಂತೆ ಈ ಯೋಜನೆಗಳ ನಿಯಮಗಳಲ್ಲಿ ಹಲವಾರು ದೋಷಗಳಿರುವುದು ಕಂಡುಬರುತ್ತದೆ. ಏಕೆಂದರೆ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರಿರುವುದು ನಮಗೆಲ್ಲಾ ತಿಳಿದಿರುವ ವಿಷಯವೇ. ಆದರೆ ಈ ಯೋಜನೆಯಲ್ಲಿನ ಕಾಮಗಾರಿಗಳಲ್ಲಿ ಕೆಲಸ ಮಾಡಲು ಹಲವಾರು ವಿಧಾನಗಳನ್ನು ಅನುಸರಿಸಬೇಕಾಗುತ್ತದೆ. ಅಂದರೆ ನೊಂದಣಿ ವಿಷಯಕ್ಕೆ ಸಂಬಂಧಿಸಿದಂತೆ ಸದಸ್ಯರ ನೋಂದಣಿಗಾಗಿ ನಮೂನೆ ೨ಎ ಯಲ್ಲಿ ಅರ್ಜಿಸಲ್ಲಿಸುವುದು ಗ್ರಾಮೀಣ ಭಾಗದ ಜನರಿಗೆ ತಿಳಿಯದ ವಿಷಯ. ಹಾಗಾಗಿ ಗ್ರಾಮದಲ್ಲಿನ ಹಿರಿಯ ಮುಖಂಡರ ಸಲಹೆ ಸೂಚನೆಗಳಂತೆ ಅರ್ಜಿಯನ್ನು ಸಲ್ಲಿಸುವುದು ಕಂಡುಬರುತ್ತದೆ. ಹಾಗೂ ಆ ಅರ್ಜಿಯ ಬಗ್ಗೆ ಅವರಿಗೆ ಯಾವುದೇ ತಿಳುವಳಿಕೆ ಇರುವುದಿಲ್ಲ. ಅದನ್ನು ತಿಳಿದುಕೊಳ್ಳುವ ಆಸಕ್ತಿಯೂ ಅವರಲ್ಲಿ ಇರುವುದಿಲ್ಲ. ಏಕೆಂದರೆ ಯಾವುದಾದರೊಂದು ಮೂಲದಿಂದಾಗಲಿ ಕೆಲಸ ಸಿಕ್ಕರೆ ಸಾಕು ಎಂಬಂತಹ ಪರಿಸ್ಥಿತಿಯಲ್ಲಿ ಅವರಿರುತ್ತಾರೆ. ಹಾಗೂ ಈ ಯೋಜನೆಯು ಸಂಪೂರ್ಣವಾಗಿ ಜನಾಯೋಜನೆಯ ರೂಪವನ್ನು ಪಡೆಯಬೇಕು ಎಂಬುದು ಇದರ ಧೋರಣೆ. ಆದ ಈ ಯೋಜನೆಯ ಬಗ್ಗೆ ಯಾರು ಅಷ್ಟೊಂದು ಪರಿಣಾಮಕಾರಿಯಾಗಿ ಯೋಚಿಸುವುದಿಲ್ಲ. ಹಾಗೂ ಗ್ರಾಮ ಪಂಚಾಯ್ತಿಗಳಿಗೆ ಅಷ್ಟೊಂದು ಸಮಯವು ಕೂಡ ಇರುವುದಿಲ್ಲ. ಇಲ್ಲಿ ಜನಾಯೋಜನೆ ಎಂದರೇನು? ಎಂಬ ಪ್ರಶ್ನೆ ನಮ್ಮನ್ನು ಕಾಡದಿರದು. ಈ ಹಿಂದೆ ಯೋಜನೆಗಳನ್ನು ಪರಿಣಿತರು ದೂರದಲ್ಲೆಲ್ಲೋ ಕುಳಿತು ರೂಪಿಸುತ್ತಿದ್ದರೂ. ಇವರಿಗೆ ತಾಂತ್ರಿಕ ಜ್ಞಾನ ಸಾಕಷ್ಟು ಇದ್ದರೂ ಜನರ ಅಗತ್ಯಗಳ ಬಗ್ಗೆ ಸಾಕಷ್ಟು ತಿಳುವಳಿಕೆ ಇರಲಿಲ್ಲ. ಹಾಗೂ ಪ್ರದೇಶದಿಂದ ಪ್ರದೇಶಕ್ಕೆ ಜನರ ಅಗತ್ಯಗಳು ಬೇರೆ ಬೇರೆ ಇರುವುದರಿಂದ ಒಂದೇ ರೀತಿಯ ಯೋಜನೆ ಎಲ್ಲಾ ಜನರಿಗೆ ಉಪಯೋಗವಾಗುತ್ತಿರಲಿಲ್ಲ. ಹಾಗಾಗಿ ಜನರೇ ತಮ್ಮ ಅಗತ್ಯಗಳನ್ನು ಗುರುತಿಸಿಕೊಂಡು ಆದ್ಯತೆಯ ಮೇರೆಗೆ ಯೋಜನೆ ರೂಪಿಸಿದರೆ ಜನರಿಗೆ ತುಂಬಾ ಉಪಯೋಗ ಆಗುತ್ತದೆ. ಹಾಗಾಗಿ ಜನರಿಗಾಗಿ ಜನರೇ ಸಿದ್ಧಪಡಿಸಿ ಕಾರ್ಯರೂಪಕ್ಕೆ ತರುವ ಯೋಜನೆಯನ್ನು ಜನಾಯೋಜನೆ ಎಂದು ಕರೆಯಲಾಗಿದೆ. ಜನರ ಯೋಜನೆಯ ಬಗ್ಗೆ ಚರ್ಚಿಸುವ ಮುನ್ನ ಯೋಜನೆಯ ಬಗ್ಗೆ ಕನಿಷ್ಠ ಮಾಹಿತಿ ಅಗತ್ಯ. ಅಂದರೆ ಯೋಜನೆ ಎಂದರೇನು? ಎಂಬುದನ್ನು ತಿಳಿದುಕೊಳ್ಳುವುದು ಮುಖ್ಯ. ತುಂಬಾ ಸರಳವಾಗಿ ಯೋಜನೆಯನ್ನು

ಭವಿಷ್ಯದಲ್ಲಿ ಸಾಧಿಸಬೇಕಾದ ಗುರಿ ಹಾಗೂ ಮಾರ್ಗಗಳ ಒಂದು ರೂಪುರೇಷೆಯೆಂದು ವ್ಯಾಖ್ಯಾನಿಸಿಕೊಳ್ಳಬಹುದು. ಈ ವ್ಯಾಖ್ಯಾನದ ಪ್ರಕಾರ ಯೋಜನೆಯ ಬಹುಮುಖ್ಯ ಕೆಲಸ ವಾಸ್ತವವನ್ನು ಆದರ್ಶದೊಂದಿಗೆ ಹೋಲಿಸಿ ಕ್ರಮಿಸಬೇಕಾದ ಅಂತರವನ್ನು ಗುರುತಿಸುವುದು ಮತ್ತು ಆ ಅಂತರವನ್ನು ಕ್ರಮಿಸಲು ಪರಿಣಾಮಕಾರಿಯಾದ ಮಾರ್ಗವನ್ನು ಸೂಚಿಸುವುದು. ಅಭಿವೃದ್ಧಿ ಕ್ಷೇತ್ರದಲ್ಲಿ ಸಾಧಾರಣವಾಗಿ ಯೋಜನೆಯು ಈ ಕೆಳಗಿನ ಹಂತಗಳನ್ನು ಹೊಂದಿರುತ್ತದೆ. ಒಂದು ವಿವಿಧ ವಲಯಗಳ ಅಭಿವೃದ್ಧಿಯ ಈಗಿನ ಸ್ಥಿತಿಯನ್ನು ತಿಳಿದುಕೊಳ್ಳುವುದು. ಎರಡನೆಯದಾಗಿ ಈಗಿನ ಸ್ಥಿತಿಯನ್ನು ಆ ವಲಯ ಸಾಧಿಸಬೇಕಾದ ಅಭಿವೃದ್ಧಿಯ ಮಟ್ಟದೊಂದಿಗೆ ಹೋಲಿಸುವುದು. ಮೂರನೆಯದಾಗಿ ಅದು ಸಾಧಿಸಬೇಕಾದ ಅಭಿವೃದ್ಧಿಯ ಮಟ್ಟ ಆ ವಲಯದ ಈಗಿನ ಸಾಧನೆಗಿಂತ ಕಡಿಮೆ ಇದ್ದರೆ ಅದೆಷ್ಟೆಂದು ಗುರುತಿಸುವುದು, ನಾಲ್ಕನೆಯದಾಗಿ ಕಡಿಮೆ ಇರುವ ಅಂತರವನ್ನು ತುಂಬಿಸಲು ಯೋಜನೆಗಳನ್ನು ತಯಾರಿಸುವುದು. ಈ ಯೋಜನೆ ತಯಾರಿಯ ವಿವಿಧ ಹಂತಗಳ ಕೆಲಸಗಳಲ್ಲಿ ಪಳಗಿದ ಹೊರಗಿನ ತಜ್ಞರು ಪ್ರಧಾನ ಪಾತ್ರ ವಹಿಸಿದರೆ ಅದು ಸಾಂಪ್ರದಾಯಿಕ ಯೋಜನೆ ಆಗುತ್ತದೆ. ಅದರ ಬದಲು ಯೋಜನೆ ತಯಾರಿಯ ಎಲ್ಲಾ ಹಂತಗಳಲ್ಲೂ ಹಳ್ಳಿಯ ಜನರು ಪ್ರಧಾನ ಪಾತ್ರವಹಿಸಿದರೆ ಅದು ಜನರ ಯೋಜನೆ ಆಗುತ್ತದೆ. ಈ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯು ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಲ್ಲಿನ ಸಮಸ್ಯೆಗಳನ್ನು ಅಲ್ಲಿನ ಜನರಿಂದಲೇ ಅರಿಯುವಂತಹ ಕೆಲಸ ಮಾಡುವ ಮತ್ತು ಅವರ ಇಚ್ಛೆಯಂತೆಯೇ ಯೋಜನೆಗಳನ್ನು ಅಥವಾ ಕಾಮಗಾರಿಗಳನ್ನು ರೂಪಿಸುವ ಉದ್ದೇಶವನ್ನು ಹೊಂದಿದೆ. ಇದಕ್ಕೆ ಗ್ರಾಮ ಪಂಚಾಯ್ತಿಗಳು ಹಲವಾರು ವಿಧಾನಗಳನ್ನು ಅನುಸರಿಸಬೇಕಾಗುತ್ತದೆ. ಅಂದರೆ ಕೆಲವು ತಂಡಗಳನ್ನು ರಚಿಸುವುದರ ಮೂಲಕ ಆ ಊರಿನ ಸಮಸ್ಯೆಗಳನ್ನು ಅರಿಯುವುದು ಮತ್ತು ಆ ಊರಿನ ವ್ಯಾಪ್ತಿಯಲ್ಲಿ ಯಾವ ಕಾಮಗಾರಿಗಳನ್ನು ಕೈಗೊಳ್ಳಬೇಕು. ಹಾಗೂ ಯಾವ ಮೂಲಭೂತ ಸೌಕರ್ಯಗಳನ್ನು ಒದಗಿಸಬೇಕು ಎಂಬಿತ್ಯಾದಿ ವಿಷಯಗಳನ್ನು ಕ್ರೋಢೀಕರಿಸಿಕೊಳ್ಳಬೇಕು. ಇವುಗಳೆಲ್ಲವೂ ಕೂಡ ಗ್ರಾಮೀಣ ಜನರ ಸಮ್ಮುಖದಲ್ಲಿಯೇ ನಡೆಯಬೇಕಾಗುತ್ತದೆ. ಆದರೆ ಅತ್ತನೂರು ಮತ್ತು ಗಣದಿನ್ನಿ ಗ್ರಾಮ ಪಂಚಾಯ್ತಿಗಳಲ್ಲಿ ಈ ರೀತಿಯ ಯಾವುದೇ ಕಾರ್ಯಚಟುವಟಿಕೆಗಳು ನಡೆಯದಿರುವುದು ತಿಳಿದುಬಂದಿದೆ. ಬದಲಾಗಿ ಗ್ರಾಮ ಪಂಚಾಯ್ತಿಗಳಿಗೆ ಒಂದೊಂದು ಊರಿನಲ್ಲಿ ಒಬ್ಬೊಬ್ಬರಾದರೂ ಸದಸ್ಯರು ಆಯ್ಕೆಯಾಗಿರುತ್ತಾರೆ. ಅವರ ಹೇಳಿಕೆಯಂತೆಯೇ ಆ ಊರಿನ ಸಮಸ್ಯೆಗಳನ್ನು ಪಟ್ಟಿ ಮಾಡಲಾಗುತ್ತದೆ. ಇಂತಹ ಸಂದರ್ಭದಲ್ಲಿ ಗ್ರಾಮ ಪಂಚಾಯ್ತಿಯ ಸದಸ್ಯನು ತನ್ನ ವೈಯಕ್ತಿಕ ಅಭಿವೃದ್ಧಿಗೆ ಅಥವಾ ತನ್ನ ಸಮುದಾಯದ ಅಭಿವೃದ್ಧಿಗೆ ಹೆಚ್ಚಿನ ಗಮನವನ್ನು ನೀಡಬಹುದು. ಆಗ ಇದು ಏಕಮುಖಿ ಚಲನೆಯನ್ನು ಹೊಂದುತ್ತದೆ. ಈ ತರಹದ ಸನ್ನಿವೇಶಗಳು ಈ ಗ್ರಾಮ ಪಂಚಾಯ್ತಿಗಳ ವ್ಯಾಪ್ತಿಯಲ್ಲಿ ಕಂಡುಬಂದಿವೆ. ಇಲ್ಲಿ ಇನ್ನೊಂದು ಮುಖ್ಯವಾದ ಅಂಶವೆಂದರೆ ಒಂದು ವೇಳೆ ಜನರಿಂದ ಚರ್ಚಿಸಿ ಮಾಹಿತಿಗಳನ್ನು

ಸಂಗ್ರಹಿಸಿದರೂ ಸಹ ಯೋಜನೆಗಳು ಮಾತ್ರ ತಜ್ಞರಿಂದ ರೂಪಿತಗೊಳ್ಳುತ್ತದೆ. ಹಾಗಾಗಿ ಜನರ ಬೇಕು ಬೇಡಗಳನ್ನು ತಿಳಿದುಕೊಂಡು ಮಾಡುವ ಯೋಜನೆ ಜನರನ್ನು ತೊಡಗಿಸಿಕೊಂಡು ಮಾಡುವ ಯೋಜನೆ ಆಗುತ್ತದೆಯೇ ಹೊರತು, ಜನರ ಯೋಜನೆ ಆಗುವುದಿಲ್ಲ. ಜನರ ಯೋಜನೆ ಮತ್ತು ಜನರನ್ನು ತೊಡಗಿಸಿಕೊಂಡು ಮಾಡುವ ಯೊಜನೆಯು ನಡುವೆ ಸಾಕಷ್ಟು ಅಂತರವಿದ್ದರೂ ಸಹ ಈ ಪದಗಳನ್ನು ಒಂದೇ ಅರ್ಥದಲ್ಲಿ ಅರ್ಥೈಸಲಾಗುತ್ತಿದೆ. ಈ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಲ್ಲಿ ಯೋಜನೆ ತಯಾರಿಯ ಒಂದು ದೊಡ್ಡ ಪಟ್ಟಿಯೇ ಇದೆ. ಆದರೆ ಈ ವಿಧಾನಗಳ ಮೂಲಕ ಯಾವುದೇ ಕಾರ್ಯಚಟುವಟಿಕೆಗಳು ನಡೆಯದಿರುವುದು ಇಲ್ಲಿನ ಗ್ರಾಮಪಂಚಾಯ್ತಿಗಳಿಂದ ತಿಳಿದುಬರುತ್ತದೆ. ಜನಾಯೋಜನೆಯಲ್ಲಿ ಜನರು ಎಂದರೆ ಕೇವಲ ಪುರುಷರು ಮಾತ್ರ ಎಂಬಂತಾಗಿದೆ ಬಹಿರಂಗವಾಗಿ ಮಹಿಳೆಯರು ಕೂಡ ಭಾಗವಹಿಸಬೇಕು ಎಂದು ಹೇಳಿದರೂ ಮಹಿಳೆಯರು ಭಾಗವಹಿಸದೇ ಇರುವಂತಹ ಸಂದರ್ಭಗಳನ್ನು ಇಲ್ಲಿ ಕಾಣಲಾಗುತ್ತದೆ. ಸಂವಿಧಾನ ಬದ್ಧವಾದ ಸಮಾನತೆಯ ಹಕ್ಕು ಎಲ್ಲರಿಗೂ ಒಂದೇಯಾಗಿದ್ದರೂ ಸಹ ಸಮಾನತೆಯಿಂದ ಮಹಿಳೆ ದೂರ ಉಳಿದಿದ್ದಾಳೆ. ಇದಕ್ಕೆ ಪ್ರಮುಖ ಕಾರಣ ಪುರುಷ ಪ್ರಧಾನ ವ್ಯವಸ್ಥೆ ಹಾಗೂ ಈ ವ್ಯವಸ್ಥೆಯನ್ನು ಮಹಿಳೆ ಒಪ್ಪಿಕೊಂಡಿರುವುದು. ಅತ್ತನೂರು ಮತ್ತು ಗಣದಿನ್ನಿ ಗ್ರಾಮ ಪಂಚಾಯ್ತಿಗಳ ವ್ಯಾಪ್ತಿಯಲ್ಲಿ ಸುಮಾರು ೧೧ ಗ್ರಾಮಗಳು ಬರುತ್ತದೆ. (ಗಣದಿನ್ನಿ ಮತ್ತು ಅತ್ತನೂರಗಳನ್ನು ಒಳಗೊಂಡಂತೆ). ಈ ಗ್ರಾಮಗಳಲ್ಲಿ ಹಲವಾರು ಕಾಮಗಾರಿಗಳು ನಡೆದಿವೆ. ಆದರೆ ಈ ಕಾಮಗಾರಿಗಳಲ್ಲಿ ಮಹಿಳೆಯರ ಮತ್ತು ಪುರುಷರ ಪಾಲೆಷ್ಟು ಎಂಬುದನ್ನು ತಿಳಿಯ ಹೊರಟಾಗ ಮಹಿಳೆಯರ ಪಾಲು ಸಾಧಾರಣವಾಗಿದ್ದು. ಪುರುಷರ ಪಾಲೇ ಅಧಿಕವಾಗಿದೆ. ಗ್ರಾಮ ಸಭೆಯಲ್ಲಿ ಭಾಗವಹಿಸುವಿಕೆಯಿಂದ ಹಿಡಿದು ಕಾಮಗಾರಿಗಳ ಅನುಷ್ಠಾನ ಮತ್ತು ಅವುಗಳಲ್ಲಿ ದುಡಿಯುವವರೆಗೂ ಮಹಿಳೆಯರು ಪುರುಷನ ಹಿಡಿತದಲ್ಲಿಯೇ ಇದ್ದಾರೆ. ಏಕೆಂದರೆ ಕೆಲವು ಗ್ರಾಮ ಸಭೆಗಳಲ್ಲಿ ಮಹಿಳೆಯರು ಭಾಗವಹಿಸಿದ್ದೇ ಇಲ್ಲ. ಈ ಬಗ್ಗೆ ಮಹಿಳೆಯರಲ್ಲಿ ಪ್ರಶ್ನಿಸಿದಾಗ ಮನೆಯ ಯಜಮಾನರು ಇದ್ದಾರಲ್ಲ ಅವರೇ ಹೋಗುತ್ತಾರೆ. ಈ ಗ್ರಾಮ ಸಭೆಗಳ ಬಗ್ಗೆ ನಮಗೇನು ತಿಳಿಯುವುದಿಲ್ಲ ಎಂಬಂತಹ ಮತ್ತು ಈ ಗ್ರಾಮ ಸಭೆಗಳಲ್ಲಿ ಏನು ಹೇಳುತ್ತಾರೆ, ಏನು ಮಾಡುತ್ತಾರೆ ಎಂಬುದನ್ನು ತಿಳಿದುಕೊಳ್ಳುವ ಕುತೂಹಲ ನಮಗೂ ಇದೆ. ಆದರೆ ಇವುಗಳಲ್ಲಿ ಭಾಗವಹಿಸಲು ಮನೆಯಲ್ಲಿ ಬಿಡುವುದಿಲ್ಲ. ಹಾಗೂ ಮನೆ ಕೆಲಸಗಳೇ ಹೆಚ್ಚಾಗಿರುತ್ತವೆ. ಎಂಬಂತಹ ಮಾತುಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿಯಲಾಗಿದೆ. ಹಾಗಾಗಿ ಇನ್ನೂ ಈ ಗ್ರಾಮಗಳಲ್ಲಿ ಕೆಲವು ಮಹಿಳಾ ಸ್ವಸಹಾಯ ಸಂಘಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಆದರೆ ಇವುಗಳು ಕೇವಲ ಹಣ ಉಳಿಸುವ ಸಂಸ್ಥೆಗಳಾಗಿವೆಯೇ ಹೊರತು ಮಹಿಳೆಯರು ಯಾವ ರೀತಿ ಸ್ವಾವಲಂಬಿಗಳಾಗಬೇಕು ಎಂಬುದರ ಕಡೆ ಗಮನಹರಿಸುತ್ತಿಲ್ಲ. ಗ್ರಾಮ ಪಂಚಾಯ್ತಿಗಳು ಸಭೆಗಳು ಕರೆಯುವುದಕ್ಕೆ ಮೊದಲು ಮುಂಜಾಗ್ರತೆಯಾಗಿ

ಯಾವುದೇ ಮಾಹಿತಿಯನ್ನು ನೀಡದಿರುವುದು ಕಂಡುಬರುತ್ತದೆ. ಮತ್ತು ಈ ಮಹಿಳಾ ಸ್ವಸಹಾಯ ಸಂಘಗಳೂ ಸಹ ಗ್ರಾಮ ಸಭೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುವ ಮಾಹಿತಿ ದೊರೆತಿಲ್ಲ. ಇಷ್ಟೆಲ್ಲಾ ದೋಷಗಳಿದ್ದಾಗ ಯಾವುದಾದರೂ ಒಂದು ಯೋಜನೆಯ ಬಗ್ಗೆ ಮಹಿಳೆಯರಿಗೆ ತಿಳಿಯುವುದು ತಪ್ಪವಾಗುತ್ತದೆ. ಇದಕ್ಕೆ ಅವರ ಪ್ರತಿನಿಧೀಕರಣದ ಕೊರತೆಯ ಜೊತೆಗೆ ಮಹಿಳೆಯರು ಸಮಾಜದಲ್ಲಿ ಹೀಗೆ ಇರಬೇಕು ಎಂಬಂತಹ ಕಟ್ಟುಪಾಡುಗಳು ಅವಳನ್ನು ಮುಂದುವರೆಯಲು ಬಿಡುತ್ತಿಲ್ಲ ಎಂದು ಹೇಳಬಹುದು.

ಇನ್ನು ಈ ಗ್ರಾಮ ಪಂಚಾಯ್ತಿಗಳಲ್ಲಿ ಮಹಿಳಾ ಸದಸ್ಯೆರೂ ಕೂಡ ಇದ್ದಾರೆ. ಆದರೆ ಇವರು ಅಧಿಕಾರ ಇದ್ದೂ ಅಧಿಕಾರ ಚಲಾಯಿಸುವ ಸ್ಥಿತಿಯಲ್ಲಿ ಇಲ್ಲ. ಅಂದರೆ ವ್ಯವಸ್ಥೆಯಲ್ಲಿ ಸದಸ್ಯೆಯರು ಕೇವಲ ಹೆಸರಿಗೆ ಮಾತ್ರ ಸದಸ್ಯೆಯರಾಗಿದ್ದಾರೆ. ಇವರ ಅಧಿಕಾರಗಳನ್ನೆಲ್ಲಾ ಪುರುಷರು ಚಲಾಯಿಸುತ್ತಿರುತ್ತಾರೆ. ಹಾಗಾಗಿ ಇವರು ಸದಸ್ಯರಾಗಿದ್ದರೂ ಹಲವಾರು ಬಾರಿ ಗ್ರಾಮ ಸಭೆಗಳಲ್ಲಿ ಪಾಲ್ಗೊಳ್ಳದೇ ಇರುವಂತಹ ಸ್ಥಿತಿ ಉದ್ಭವಿಸಿದೆ. ಹಾಗೂ ಅವಳು ಏನೇ ಕೆಲಸಗಳು ಮಾಡಬೇಕಾದರೂ ಪುರುಷನ ಅನುಮತಿಯನ್ನು ಪಡೆಯಲೇಬೇಕು. ಹಾಗಾಗಿ ಅವಳು ಎಲ್ಲಾ ಅಧಿಕಾರಗಳನ್ನು ಸಹ ಪುರುಷನೇ ಕಿತ್ತುಕೊಂಡಿದ್ದಾನೆ. ಇನ್ನು ಈ ಉದ್ಯೋಗ ಖಾತ್ರಿ ಯೋಜನೆಯ ಬಗ್ಗೆ ಸಂಪೂರ್ಣ ಮಾಹಿತಿಯನ್ನು ತಿಳಿದುಕೊಂಡಿರದೇ ಇರುವಂತಹ ಸದಸ್ಯೆಯರಿರುವುದು ಈ ಗ್ರಾಮ ಪಂಚಾಯ್ತಿಗಳಲ್ಲಿ ಕಂಡುಬರುತ್ತಾರೆ. ಗ್ರಾಮ ಪಂಚಾಯಿತಿಯ ಸದಸ್ಯೆಯರಾಗಿದ್ದು ಯೋಜನೆಯ ಸಂಪೂರ್ಣ ಮಾಹಿತಿ ಅವರಿಗಿಲ್ಲ ಎಂದಾದರೆ ಸಾಮಾನ್ಯ ಮಹಿಳೆಗೆ ತಿಳಿಯುವುದು ಕಷ್ಟಸಾಧ್ಯವಾಗಿದೆ. ಯೋಜನೆಯ ಆಯ್ಕೆ ಮತ್ತು ಅನುಷ್ಠಾನ ವಿಷಯಗಳಲ್ಲಂತೂ ಮಹಿಳೆಯನ್ನು ಕಡೆಗಾಣಿಸಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಅತ್ತನೂರು ಮತ್ತು ಗಣದಿನ್ನಿ ಗ್ರಾಮ ಪಂಚಾಯ್ತಿಗಳ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಮಹಿಳಾ ಸದಸ್ಯರೇ ಹೆಚ್ಚಾಗಿ ಉದ್ಯೋಗ ಕಾರ್ಡ್‌ಗಳನ್ನು ಹೊಂದಿರುವುದು ಕಂಡುಬರುತ್ತದೆ. ಆದರೆ ಅವರ ದುಡಿಮೆಯಿಂದ ಬಂದಂತಹ ಆದಾಯ ಮಾತ್ರ ಅವರ ಕೈ ಸೇರುತ್ತಿಲ್ಲ. ಏಕೆಂದರೆ ದುಡಿಯುವುದು ಅವಳ ಕರ್ತವ್ಯ ಆದರೆ ಅದರಿಂದ ಬಂದಂತಹ ಆದಾಯವನ್ನು ಖರ್ಚು ಮಾಡುವುದು ಅವಳ ಕೆಲಸವಲ್ಲ ಎಂಬಂತಹ ಧೋರಣೆಗಳು ಪ್ರಾಚೀನ ಕಾಲದಿಂದಲೂ ಪುರುಷನ ಚಿಂತನೆಯಲ್ಲಿರುವುದರಿಂದ ಅವಳ ಆದಾಯದ ಮೇಲೆ ಯಾವುದೇ ಹಕ್ಕನ್ನು ಚಲಾಯಿಸಲು ಅವಳಿಗೆ ಅಧಿಕಾರ ಇಲ್ಲದಂತಾಗಿದೆ. ಪ್ರತಿಯೊಂದು ಗ್ರಾಮದಲ್ಲಿಯೂ ಕೂಡ ಕಾಮಗಾರಿಗಳು ಜಾರಿಯಲ್ಲಿವೆ. ಆದರೆ ಇವುಗಳು ಒಂದು ಆರ್ಥಿಕ ವರ್ಷದಲ್ಲಿ ೧೦೦ ದಿನಗಳ ಕಾಲ ಉದ್ಯೋಗವನ್ನು ಕೊಟ್ಟಿಲ್ಲದಿರುವುದು ಇಲ್ಲಿ ಕಂಡುಬರುತ್ತದೆ. ಇದಕ್ಕೆ ಬದಲಾಗಿ ಕೇವಲ ವರದಿಯಲ್ಲಿ ಮಾತ್ರ ತೋರಿಸಲಾಗುತ್ತದೆ. ಆದರೆ ವಾಸ್ತವದಲ್ಲಿ ಇಂದಿಗೂ ಕಾಮಗಾರಿಗಳು ಚಾಲನೆಯಲ್ಲಿದ್ದರೂ ಕೆಲವು ಕುಟುಂಬಗಳನ್ನು ಹೊರತುಪಡಿಸಿ ಬಹಳಷ್ಟು ಕುಟುಂಬಗಳು ಕೆಲಸದಲ್ಲಿ ತೊಡಗಿಕೊಂಡಿರುವುದಿಲ್ಲ

ಎಂದು ನನ್ನ ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ಅಲ್ಲಿನ ಜನರು ತಿಳಿಸಿರುತ್ತಾರೆ. ಮತ್ತು ಅವರು ಈ ಯೋಜನೆಯ ಕೆಲಸವನ್ನು ಬಿಟ್ಟು ಅಂದರೆ ಉದ್ಯೋಗ ಕಾರ್ಡನ್ನು ಹೊಂದಿದ್ದರೂ ಸಹ ಬೇರೆ ಬೇರೆ ಕೆಲಸಗಳಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಹಾಗೂ ಯೋಜನೆಯಲ್ಲಿನ ಈ ನೂರು ದಿನಗಳ ವೇತನವು ಸಹ ಸಂಪೂರ್ಣವಾಗಿ ಅವರ ಕೈ ಸೇರುತ್ತಿಲ್ಲ. ಹಾಗಾಗಿ ಅವರು ಬೇರೆ ಬೇರೆ ಕೆಲಸಗಳನ್ನರಿಸಿದ್ದಾರೆ. ಮತ್ತು ಈ ಯೋಜನೆಯ ಕಾಮಗಾರಿಗಳಲ್ಲಿನ ದುಡಿಮೆಯ ವೇತನ ಒಂದು ಕುಟುಂಬ ಜೀವನ ನಡೆಸಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಈ ಯೋಜನೆಯ ಕಾಮಗಾರಿಗಳ ಬಗ್ಗೆ ನಿರ್ಲಕ್ಷ್ಯವಹಿಸಿರುವುದಕ್ಕೆ ಒಂದು ಕಾರಣವಾಗಿದೆ. ಕೆಲವು ಕಾಮಗಾರಿಗಳಲ್ಲಿ ಜನರು ಭಾಗವಹಿಸಿದ್ದಾರೆ. ಆದರೆ ಸ್ತ್ರೀ ಪುರುಷರಿಗೆ ಸಮಾನ ವೇತನ ಇರುವುದರಿಂದ ಇಲ್ಲಿ ಕೆಲವು ಪುರುಷರು ಸ್ತ್ರೀಯರು ಸಮನಾಗಿ ನಿಂತು ಕೆಲಸ ಮಾಡಲು ಹಿಂಜರಿದಿದ್ದಾರೆ. ಮತ್ತು ಕೆಲಸದ ಸ್ಥಳದಲ್ಲಿ ಮಹಿಳೆಯನ್ನು ಒಂದು ವಸ್ತುವನ್ನಾಗಿ ಮಾಡಿಕೊಂಡು ಅವಳನ್ನು ಮಾನಸಿಕವಾಗಿ ಹಿಂಸಿಸುವುದೂ ಕಂಡುಬಂದಿದೆ. ಈ ಕಾಮಗಾರಿಗಳಲ್ಲಿ ದುಡಿಯುವ ಕಾರ್ಮಿಕರಿಗೂ ಮತ್ತು ಅಸಂಘಟಿತ ವಲಯದ ಕಾರ್ಮಿಕರಿಗೂ ಯಾವುದೇ ವ್ಯತ್ಯಾಸವಿಲ್ಲ. ಏಕೆಂದರೆ ಕೆಲಸದಲ್ಲಿ ಭಾಗವಹಿಸುವ ಕಾರ್ಮಿಕರಿಗೆ ಯಾವುದೇ ಉದ್ಯೋಗ ಭದ್ರತೆ ಇಲ್ಲವಾಗಿದೆ. ಏಕೆಂದರೆ ಇದರ ನಿಯಮವೇ ಒಂದು ಆರ್ಥಿಕ ವರ್ಷದಲ್ಲಿ ೧೦೦ ದಿನಗಳು ಮಾತ್ರ ಉದ್ಯೋಗವನ್ನು ನೀಡುವುದಾಗಿದೆ. ಹಾಗಾಗಿ ೧೦೦ ದಿನಗಳು ಮುಗಿದ ನಂತರ ಬೇರೆ ಬೇರೆ ಕೆಲಸಗಳನ್ನರಿಸಿ ಊರನ್ನು ತೊರೆಯಬೇಕಾಗುತ್ತದೆ. ಈ ಯೋಜನೆಯಲ್ಲಿ ಮಹಿಳೆಯರಿಗೆ ಕೆಲಸದ ಸ್ಥಳದಲ್ಲಿ ಕೆಲವು ಪ್ರಯೋಜನಗಳನ್ನು ಅಥವಾ ಸೌಲಭ್ಯಗಳನ್ನು ಒದಗಿಸಬೇಕು ಎಂಬುದಿದೆ. ಆದರೆ ಈ ಪ್ರಯೋಜನಗಳು ಮಹಿಳೆಯರಿಗೆ ದೊರೆತ್ತಿಲ್ಲ. ಹಾಗಾಗಿ ಅವರು ದೈಹಿಕವಾಗಿ ಕುಂದಿರುವುದು ಕಂಡುಬರುತ್ತದೆ. ಮತ್ತು ಕೆಲವು ಸಂದರ್ಭದಲ್ಲಿ ಕೆಲಸದ ಸ್ಥಳದಲ್ಲಿ ಮಹಿಳೆ ಅನೇಕ ರೀತಿಯ ದೈಹಿಕ ಮತ್ತು ಮಾನಸಿಕ ದೌರ್ಜನ್ಯಕ್ಕೆ ಒಳಗಾಗಿರುವುದು ತಿಳಿದುಬರುತ್ತದೆ. ಆದರೆ ಇದನ್ನು ಬಹಿರಂಗಪಡಿಸಲು ಮಹಿಳೆಯರು ಒಪ್ಪುವುದಿಲ್ಲ. ಏಕೆಂದರೆ ಉದ್ಯೋಗವನ್ನು ಎಲ್ಲಿ ಕಳೆದುಕೊಳ್ಳುತ್ತೇನೊ ಎಂಬಂಥಹ ಮತ್ತು ಈ ತರಹದ ಸಮಸ್ಯೆಗಳನ್ನು ಬಹಿರಂಗವಾಗಿ ಹೇಳಿಕೊಳ್ಳುವುದರಿಂದ ಬೇರೆ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ ಎಂಬಂತಹ ಮನಸ್ಥಿತಿಯಿಂದಾಗಿ ಅವಳ ಮೇಲೆ ಎಷ್ಟೇ ದೌರ್ಜನ್ಯಗಳು ನಡೆದರೂ ಸಹ ಅವುಗಳೆಲ್ಲವನ್ನು ಮೌನವಹಿಸಿಯೇ ಸಹಿಸಿಕೊಂಡಿದ್ದಾಳೆ. ಈ ಯೋಜನೆಯ ಕಾಮಗಾರಿಗಳಲ್ಲಿ ದುಡಿಯುವ ಕಾರ್ಮಿಕರಿಗೆ ವೇತನವನ್ನು ಆ ವಾರದ ಅಂತ್ಯದಲ್ಲಿ ಅಥವಾ ೧೫ ದಿನಗಳಿಗೊಮ್ಮೆ ಕೊಡಬೇಕು ಎಂಬುದು ನಿಯಮ. ಆದರೆ ಈ ಗ್ರಾಮ ಪಂಚಾಯ್ತಿಗಳಲ್ಲಿ ತಿಂಗಳಾನುಗಟ್ಟಲೇ ವೇತನವನ್ನು ಕೊಡದೆ ಇರುವಂತಹ ಪರಿಸ್ಥಿತಿ ಉದ್ಭವಿಸಿದೆ. ಹಾಗೂ ಈ ವೇತನ ೫೦೦ ರೂಪಾಯಿಗಳಿಗಿಂತ ಹೆಚ್ಚಿದ್ದರೆ ಬ್ಯಾಂಕುಗಳ ಮೂಲಕ ಪಡೆಯಬೇಕು. ಆದ್ದರಿಂದ ಬ್ಯಾಂಕ್ ಎಂದಾಕ್ಷಣ ಮಹಿಳೆಯರಿಗೆ ಒಂದು ರೀತಿಯ ಹೆದರಿಕೆ

ಉಂಟಾಗುತ್ತದೆ. ಏಕೆಂದರೆ ಅವರು ಅನಕ್ಷರಸ್ಥರಾಗಿದ್ದು ಬ್ಯಾಂಕ್ ವ್ಯವಹಾರದ ಬಗ್ಗೆ ತಿಳಿದುಕೊಂಡಿರುವುದಿಲ್ಲ. ಅಂತಹ ಸಂದರ್ಭದಲ್ಲಿ ಪುರುಷನು ಈ ಕೆಲಸವನ್ನು ನಿಭಾಯಿಸುತ್ತಾನೆ. ಅಲ್ಲಿಂದ ಪಡೆದ ಹಣವನ್ನು ತನಗಿಷ್ಟ ಬಂದಂತೆ ಖರ್ಚು ಮಾಡುವ ಅಧಿಕಾರವನ್ನು ಅವನ ಪಡೆಯುತ್ತಾನೆ. ಹೀಗೆ ಮಹಿಳೆಯರು ಈ ಯೋಜನೆಯ ಫಲಾನುಭವಿಗಳಾಗಿದ್ದರೂ ಸಹ ಈ ಯೋಜನೆಯಿಂದ ಯಾವುದೇ ಪ್ರಯೋಜನವನ್ನು ಪಡೆಯುತ್ತಿಲ್ಲ ಎಂದು ಹೇಳಬಹುದು.

ಪುರುಷಶಾಹಿ ವ್ಯವಸ್ಥೆಯು ಸ್ತ್ರೀ ಪುರುಷರ ನಡುವಿನ ಜೈವಿಕ ವ್ಯತ್ಯಾಸಗಳನ್ನು ಅತಿಯಾಗಿ ದೊಡ್ಡದು ಮಾಡಿದೆ. ಜೈವಿಕವಾಗಿ ಭಿನ್ನತೆಗಳಿರುವುದರಿಂದ ಸ್ತ್ರೀಯರು ಮತ್ತು ಪುರುಷರು ಸಮಾಜದಲ್ಲಿ ಸಮಾನ ಪಾತ್ರಗಳನ್ನು ನಿರ್ವಹಿಸಲು ಸಾಧ್ಯವಿಲ್ಲ ಎಂಬ ನಂಬಿಕೆಯು ಕೇವಲ ಮಿಥ್ಯೆಯಾಗಿದೆ. ಸ್ತ್ರೀಯರಲ್ಲಿ ಮತ್ತು ಪುರುಷರಲ್ಲಿ ಲಿಂಗ ನಿರ್ದಿಷ್ಟ ಗುಣಗಳು ಹಾಗೂ ಪಾತ್ರಗಳು ಸೃಷ್ಟಿಯಾಗಿರುವುದಕ್ಕೆ ಲಿಂಗಶಾಹಿ ಸಾಮಾಜೀಕರಣವೇ ಕಾರಣವಾಗಿದೆ. ಪುರುಷಶಾಹಿ ವ್ಯವಸ್ಥೆಯು ಪುರುಷರಿಗೆ ಅತಿಯಾದ ಪ್ರಾಧಾನ್ಯತೆಯನ್ನು ನೀಡಿ ಅವರ ಪಾತ್ರವನ್ನು ಶ್ರೇಷ್ಠವೆಂದು ಪರಿಗಣಿಸಿದೆ. ಇದೇ ವ್ಯವಸ್ಥೆಯು ಸ್ತ್ರೀಯರ ಪಾತ್ರವನ್ನು, ಅವರು ಮಾಡುವ ಕಾರ್ಯಗಳನ್ನು ಅತೀ ಗೌಣವಾಗಿ ಕಂಡು ಸ್ತ್ರೀಯರ ಮೇಲೆ ನಾನಾ ಬಗೆಯ ನಿಬಂಧನೆಗಳನ್ನು ಹೇರಿ ಲಿಂಗ ಅಸಮಾನತೆಯನ್ನು ಸೃಷ್ಟಿಸಿಬಿಟ್ಟಿದೆ. ಇದು ಎಲ್ಲಾ ವಲಯಗಳಲ್ಲಿಯೂ ಕೂಡ ಕಂಡುಬರುವಂತಹ ಸಾಮಾನ್ಯ ವಿಷಯವಾಗಿದೆ.

ಈ ಗ್ರಾಮ ಪಂಚಾಯ್ತಿಗಳ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಕೆಲವು ವಿದ್ಯಾವಂತ ಮಹಿಳೆಯರು ಸಹ ಕಂಡುಬರುತ್ತಾರೆ. ಆದರೆ ಅವರು ಈ ಯೋಜನೆಯಲ್ಲಿ ಕೆಲಸ ಮಾಡಲು ಇಚ್ಛಿಸುತ್ತಿಲ್ಲ ಎಂಬ ವಿಷಯಗಳು ಬೆಳಕಿಗೆ ಬಂದಿದೆ. ಇದು ಕೂಡ ಮಹಿಳೆಯರು ಭಾಗವಹಿಸುತ್ತಿಲ್ಲ ಎಂಬುದಕ್ಕೆ ಕಾರಣವಾಗಿದೆ. ಈ ಯೊಜನೆಯೇ ಹೇಳುವಂತೆ ಹಾಜರಿ ಪಟ್ಟಿಗಳ ನಿರ್ವಹಣೆಗಾಗಿ ಕನಿಷ್ಟ ೫೦ ಕಾರ್ಮಿಕರಿಗೆ ಒಬ್ಬ ಅಕ್ಷರಸ್ಥರನ್ನು ನೇಮಿಸಿಕೊಳ್ಳಬಹುದು ಎಂದು ಹೇಳುತ್ತದೆ. ಆದರೆ ಇಲ್ಲಿ "ಅಕ್ಷರಸ್ಥನನ್ನು" ಎಂಬುದು ಕೇವಲ "ಪುರುಷನನ್ನು" ಮಾತ್ರ ನೇಮಿಸಿಕೊಳ್ಳಬೇಕು ಎಂಬುದನ್ನು ಸೂಚ್ಯವಾಗಿ ತಿಳಿಸುತ್ತದೆ. ಇಲ್ಲಿಯೂ ಸಹ ಮಹಿಳೆಯನ್ನು ಕಡೆಗಣಿಸಲಾಗಿದೆ. ಈ ತರಹದ ಹಲವಾರು ನಿಯಮಗಳು ಕಂಡುಬರುತ್ತವೆ. ಆದರೆ ಇವುಗಳನ್ನು ಯಾರು ಪ್ರಶ್ನಿಸುವ ಕೆಲಸಕ್ಕೆ ಕೈ ಹಾಕುವುದಿಲ್ಲ. ಈ ಗ್ರಾಮ ಪಂಚಾಯ್ತಿಗಳಲ್ಲಿ ನಿರುದ್ಯೋಗ ಭತ್ಯೆಯನ್ನು ನೀಡಿರುವ ಯಾವುದೇ ಉದಾಹರಣೆಗಳು ದೊರೆತ್ತಿಲ್ಲ. ಇನ್ನೂ ಮುಂದುವರೆದು ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸೇರಿದ ಕುಟುಂಬಗಳ ಒಡೆತನದ ಜಮೀನುಗಳಿಗೆ ನೀರಿನ ಸೌಲಭ್ಯಗಳನ್ನು ಒದಗಿಸುವಂತಹ ಯಾವುದೇ ರೀತಿಯ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ. ಇಲ್ಲಿ ಉನ್ನತ ವರ್ಗದ ಜನರು ತಮಗೆ ಬೇಕಾದ ಹಾಗೆ ಕಾಮಗಾರಿಗಳನ್ನು ಸೃಷ್ಟಿಸಿಕೊಂಡಿರುವುದು ಕಂಡುಬರುತ್ತದೆ. ಹಾಗೂ ಗ್ರಾಮ ಪಂಚಾಯಿತಿಯ ಅಧ್ಯಕ್ಷರು ಮಾತ್ರ ಗ್ರಾಮ

ಪಂಚಾಯ್ತಿಗಳಿಗೆ ಯಾವುದೇ ಯೋಜನೆಗಳು ಜಾರಿಗೆ ಬಂದರೂ ಸಹ ಬಲಿಷ್ಟರಾಗುತ್ತಿರುವುದು ವಾಸ್ತವ ಸತ್ಯ. ಇವರು ಯಾವುದೇ ಜನಹಿತಕಾರ್ಯಗಳಲ್ಲಿ ತೊಡಗಿಸಿಕೊಳ್ಳದೇ ತಮ್ಮ ಸ್ವಹಿತಕ್ಕಾಗಿ ದುಡಿಯುವವರಾಗಿದ್ದಾರೆ. ಒಂದು ವೇಳೆ ಇಲ್ಲಿ ಗ್ರಾಮಪಂಚಾಯ್ತಿಯ ಅಧ್ಯಕ್ಷರು ಮಹಿಳೆಯಾಗಿದ್ದರೆ ಆ ಅಧಿಕಾರವನ್ನೆಲ್ಲಾ ಪುರುಷ ಚಲಾಯಿಸುತ್ತಾನೆ. ಇಲ್ಲಿ ಜನ ಹಿತಕ್ಕಿಂತ ತನ್ನ ಸ್ವಂತ ಅಭಿವೃದ್ಧಿಗೆ ಹೆಚ್ಚಿನ ಗಮನ ಹರಿಸುತ್ತಾನೆ. ಇದರಿಂದ ಗ್ರಾಮಗಳಲ್ಲಿನ ಜನರ ನಿಂದನೆಗಳಿಗೆ ಮಹಿಳೆ ಬಲಿಯಾಗು ತ್ತಿದ್ದಾಳೆಯೇ ವಿನಃ ಪುರುಷನಲ್ಲ. ಇಲ್ಲಿ ಅಧಿಕಾರ ಚಲಾಯಿಸುವುದು ಪುರುಷ ಆದರೆ ನಿಂದನೆ ಗೊಳಗಾಗುವುದು ಮಾತ್ರ ಮಹಿಳೆ. ಇಂತಹ ಪರಿಸ್ಥಿತಿಗಳು ಸಹ ಕಂಡುಬರುತ್ತವೆ.

ಲಿಂಗಸಂಬಂಧಿ ಅಸಮಾನತೆಯು ಮುಂದುವರೆದುಕೊಂಡು ಬರುವಂತೆ ಪೋಷಿಸುತ್ತಿರುವ ಅನೇಕ ಸಂಗತಿಗಳಲ್ಲಿ ಬಹುಮುಖ್ಯವಾದುದು ಲಿಂಗ ಸಂಬಂಧಿ ಶ್ರಮವಿಭಜನೆ. ಲಿಂಗ ಸಂಬಂಧಿ ಶ್ರಮ ವಿಭಜನೆಯು ಕುಟುಂಬ ಮಟ್ಟದಲ್ಲಿ ಹಾಗೂ ಆರ್ಥಿಕತೆಯ ಮಟ್ಟದಲ್ಲಿ ಪುರುಷರಿಗೆ ಪರಮ ಅಧಿಕಾರವನ್ನು, ಸಂಪನ್ಮೂಲಗಳ ಮೇಲೆ ಅಂಕುಶವನ್ನು ಒದಗಿಸಿಬಿಡುತ್ತದೆ. ಆದರೆ ಮಹಿಳೆಯರಿಗೆ ಮೀಸಲಿಟ್ಟ ಕೆಲಸಗಳು ಸಂಪನ್ಮೂಲಗಳ ಮೇಲೆ ಅಧಿಕಾರವನ್ನು ಒದಗಿಸುವುದಿಲ್ಲ. ಪುರುಷ ಮತ್ತು ಮಹಿಳೆಯರ ನಡುವೆ ಹಂಚಿಕೆಯಾಗಿರುವ ಕಾಯಕಗಳು ಪುರುಷರಿಗೆ ಹೆಚ್ಚಿನ ಅಧಿಕಾರವನ್ನು ನೀಡಿ ಮಹಿಳೆಯರನ್ನು ಅಧೀನ ಸ್ಥಿತಿಯಲ್ಲಿರುವಂತೆ ಮಾಡುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರು ಮೂರು ಬಗೆಯ ದುಡಿಮೆಯಲ್ಲಿ ತೊಡಗಿಕೊಂಡಿರುತ್ತಾರೆ. ೧. ಸಂತಾನೋತ್ಪತ್ತಿಯ ದುಡಿಮೆ ೨. ಮನೆವಾರ್ತೆ ದುಡಿಮೆ ೩. ಉತ್ಪಾದನಾ ದುಡಿಮೆ, ಗರ್ಭಧರಿಸುವ ಒಂಬತ್ತು ತಿಂಗಳು ಹೊಟ್ಟೆಯಲ್ಲಿಟ್ಟುಕೊಂಡು ಮಗುವನ್ನು ಸಾಕುವ, ಮಗುವನ್ನು ಹೆರುವ, ಪೋಷಿಸುವ ದುಡಿಮೆಯು ಸಂತಾನೋತ್ಪತ್ತಿಯ ದುಡಿಮೆಯಾಗುತ್ತದೆ. ಇಲ್ಲಿ ಸಂತಾನೋತ್ಪತ್ತಿ ದುಡಿಮೆಯು ಮಕ್ಕಳನ್ನು ಹೆರುವ ಕೆಲಸದಲ್ಲಿದೆ, ಶಿಶುಪಾಲನೆಯನ್ನು ಒಳಗೊಳ್ಳುತ್ತದೆ. ಆದರೆ ಶಿಶು ಪಾಲನೆಯು ಒಂದು ಲಿಂಗಕ್ಕೆ ನಿರ್ದಿಷ್ಟವಾಗಿಲ್ಲ. ಅದು ಪುರುಷರೂ ಮಾಡಬಹುದು. ಆದರೆ ಪುರುಷಶಾಹಿ ಚಿಂತನೆಗಳು ಸಂತಾನೋತ್ಪತ್ತಿಯ ಪೂರ್ಣ ಜವಾಬ್ದಾರಿಯನ್ನು ಮಹಿಳೆಯರಿಗೆ ನಿಯಮಿಸಿಬಿಟ್ಟಿದೆ. ಹಾಗೆಯೇ ಮನೆವಾರ್ತೆ ದುಡಿಮೆಯು ಸಂಭಾವನೆ ರಹಿತ ದುಡಿಮೆಯಾಗಿದೆ. ಈ ಮನೆ ವಾರ್ತೆ ದುಡಿಮೆಯೂ ಸಹ ಮಹಿಳೆಯರಿಗೆ ಸೀಮಿತವಾಗಿಬಿಟ್ಟಿದೆ. ಅದೇ ರೀತಿಯಾಗಿ ಉತ್ಪಾದನ ದುಡಿಮೆಯಲ್ಲಿ ಮಹಿಳೆಯರು ಅನೇಕ ಬಗೆಯ ಸಂಭಾವನೆ ಸಹಿತ-ಕೂಲಿ-ವೇತನ-ಸಂಬಳ ಪಡೆಯುವ ದುಡಿಮೆಯಲ್ಲಿ ನಿರತರಾಗಿರುತ್ತಾರೆ. ಆದರೆ ಇವರ ದುಡಿಮೆಯು ಕೇವಲ ಪುರುಷರನ್ನು ಅಥವಾ ಕುಟುಂಬವನ್ನು ಪೋಷಿಸುವುದಕ್ಕಾಗಿ ಮಾತ್ರವಾಗಿಬಿಡುತ್ತನೆ. ರಾಷ್ಟ್ರೀಯ ವರಮಾನದಲ್ಲಿ ಇವರ ದುಡಿಮೆ ಅದೃಶ್ಯವಾಗಿ ಬಿಡುತ್ತದೆ. "ಮಹಿಳೆಯರ ದುಡಿಮೆಯ ಸ್ವರೂಪವನ್ನು ಕುರಿತಂತೆ ಎಂ.ಎನ್.ಶ್ರೀನಿವಾಸ ಒಂದು ಪ್ರಸಿದ್ಧ ಪ್ರಮೇಯವನ್ನು ರೂಪಿಸಿದ್ದಾರೆ.

ಕುಟುಂಬಗಳ ವರಮಾನವು ಅಧಿಕಗೊಂಡಂತೆ, ಕುಟುಂಬದ ಆರ್ಥಿಕ, ಸಾಮಾಜಿಕ ಅಂತಸ್ತು ಉತ್ತಮಗೊಂಡಂತೆ ಮನೆಯ ಹೊರಗೆ ಕೂಲಿಗಾಗಿ ದುಡಿಮೆ ಮಾಡುವ ಮಹಿಳೆಯರು ದುಡಿಮೆಯಿಂದ ಹಿಂದೆ ಸರಿಯುತ್ತಾರೆ." ಇದು ಅವರು ರೂಪಿಸಿದ ಒಂದು ಪ್ರಮೇಯ, ದುಡಿಮೆಯಿಂದ ಕೂಲಿಯಿಂದ ಮಹಿಳೆಯರು ಹಿಂದೆ ಸರಿಯುವುದನ್ನು, ಬಿಟ್ಟು ಬಿಡುವುದನ್ನು ಕೇವಲ ಮನೆವಾರ್ತೆಗೆ ತಮ್ಮ ಚಟುವಟಿಕೆಗಳನ್ನು ಮೀಸಲಿಟ್ಟುಕೊಳ್ಳುವ ಮಹಿಳೆಯರ ಕ್ರಿಯೆಯನ್ನು ಶ್ರೀನಿವಾಸ್ "Immarement" ಎಂದು ಕರೆದಿದ್ದಾರೆ. ಕುಟುಂಬಗಳು ತಮ್ಮ ಮಹಿಳೆಯರು ಕೂಲಿ ಮಾಡುವುದನ್ನು ಅಂತಸ್ತಿಗೆ ಕಡಿಮೆ" ಎಂದು ಭಾವಿಸುತ್ತವೆ. ಕೂಲಿ ಮಾಡದೆ ಕೇವಲ ಮನೆ ವಾರ್ತೆಗೆ ಸೀಮಿತಗೊಳಿಸಿಕೊಳ್ಳುವ ಮಹಿಳೆಯರ ಕುಟುಂಬದ ಸ್ಥಾನ ಉತ್ತಮವೆಂದು ತಿಳಿಯಲಾಗುತ್ತದೆ. ಇಲ್ಲಿ ನನ್ನ ಅಧ್ಯಯನ ವ್ಯಾಪ್ತಿಯ ಪ್ರದೇಶದಲ್ಲಿ ಈ ರೀತಿಯ ಸನ್ನಿವೇಶಗಳು ಕಂಡುಬರುತ್ತದೆ. ಏಕೆಂದರೆ ಈ ಗ್ರಾಮಪಂಚಾಯ್ತಿಯ ವ್ಯಾಪ್ತಿಯಲ್ಲಿನ ಜನರು ಕೆಲವು ಉನ್ನತ ವರ್ಗದ ಜನರಿದ್ದು ಅವರ ಕುಟುಂಬದಲ್ಲಿನ ಮಹಿಳೆಯರು ಈ ಯೋಜನೆಯಲ್ಲಿ ಪಾಲ್ಗೊಳ್ಳದೇ ಇರುವುದನ್ನು ಕಾಣಬಹುದಾಗಿದೆ. ಹಾಗೂ ಕೆಳವರ್ಗದ ಮತ್ತು ಮಧ್ಯಮವರ್ಗದ ಜನರು ಹೆಚ್ಚಾಗಿದ್ದಾರೆ. ಈ ಯೋಜನೆಯಲ್ಲಿ ಉದ್ಯೋಗ ಕಾರ್ಡ್‌ಗಳನ್ನು ಪಡೆದಿರುವ ಮಹಿಳೆಯರು ಹೊರಗಿನ ದುಡಿಮೆಯ ಜೊತೆಗೆ ಮನೆಯಲ್ಲಿನ ದುಡಿಮೆಯಲ್ಲಿಯೂ ತೊಡಗಿಕೊಂಡಿದ್ದಾರೆ. ಇದು ಅವರ ಸಾಮರ್ಥ್ಯಕ್ಕಿಂತ ಅಂದರೆ ಪುರುಷರ ಸಾಮರ್ಥ್ಯಕ್ಕಿಂತ ಹೆಚ್ಚಿನ ಸಮಯ ದುಡಿಮೆಯಲ್ಲಿ ತೊಡಗಿದ್ದಾ''. ಆದರೆ ಮಹಿಳೆಯರಿಗೆ ಕುಟುಂಬದಲ್ಲಾಗಲೀ ಅಥವಾ ಸಮಾಜದಲ್ಲಾಗಲೀ ಪುರುಷನ ಸಮಾನ ಸ್ಥಾನ ದೊರೆತಿಲ್ಲ. ಹಾಗೆಯೇ ಆಧುನಿಕತೆಯು ಈ ಗ್ರಾಮಗಳ ಮೇಲೆ ಯಾವುದೇ ಪರಿಣಾಮ ಬೀರಿಲ್ಲ. ಆದರೆ ಈ ಯೋಜನೆಯ ಕಾಮಗಾರಿಗಳಲ್ಲಿ ಯಂತ್ರೋಪಕರಣಗಳನ್ನು ಬಳಸುತ್ತಿರುವ ವಿಷಯಗಳು ಗಮನಕ್ಕೆ ಬಂದಿದೆ. ಇದರಿಂದ ಉದ್ಯೋಗ ಕಾರ್ಡ್‌ಗಳನ್ನು ಹೊಂದಿದ ಸದಸ್ಯರಿಗೆ ಯಾವುದೇ ಕೆಲಸ ಇಲ್ಲದಂತಾಗಿ ಅವರು ಬೇರೆ ಕೆಲಸಗಳಿಗೆ ಮೊರೆ ಹೊಕ್ಕಿದ್ದಾರೆ. ಇಲ್ಲಿ ಇನ್ನೊಂದು ಗಮನೀಯ ಅಂಶವೆಂದರೆ, ಉದ್ಯೋಗ ಕಾರ್ಡ್‌ಗಳನ್ನು ಹೊಂದಿರುವ ಸದಸ್ಯೆಯರು ಕಾಮಗಾರಿಗಳಲ್ಲಿ ಭಾಗವಹಿಸದೇ ವೇತನ ಪಡೆಯುವ ಸಂಗತಿ ಕಂಡುಬರುತ್ತದೆ. ಆದರೆ ಇಲ್ಲಿ ಅವರಿಗೆ ಆದಾಯ ದೊರೆಯುತ್ತಿಲ್ಲ ಎಂಬುದು. ಏಕೆಂದರೆ ಕಾರ್ಡ ಹೊಂದಿರುವ ಸದಸ್ಯೆಯರು ದುಡಿಮೆಯಲ್ಲಿನ ಸಹಬಾಗಿತ್ವವನ್ನು ವರದಿಯಲ್ಲಿ ಮಾತ್ರ ತೋರಿಸಲಾಗುತ್ತಿದೆ. ಇಲ್ಲಿ ಅವರ ಸಹಬಾಗಿತ್ವ ಇಲ್ಲವಾಗಿದೆ. ಇದರ ಹಿಂದೆ ಒಂದು ದೊಡ್ಡ ರಾಜಕೀಯವೇ ಇರುವುದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕಂಡುಬರುತ್ತದೆ.

ಒಟ್ಟಾರೆಯಾಗಿ ಈ ಯೋಜನೆಯಲ್ಲಿ ಹಲವಾರು ಲಿಂಗ ಅಸಮಾನತೆಯ ಅಂಶಗಳನ್ನು ಕಾಣಬಹುದಾಗಿದೆ. ಹಾಗೆಯೇ ಮಹಿಳೆಯರು ಈ ಯೋಜನೆಯ ಬಗ್ಗೆ ಅವರಿಗಿರುವ ಹಿತಾಶಕ್ತಿಗಳೇನು? ಅವರು ಎಷ್ಟರ ಮಟ್ಟಿಗೆ ಈ ಯೋಜನೆಯಲ್ಲಿ ಪಾಲ್ಗೊಂಡಿದ್ದಾರೆ. ಹಾಗೆಯೇ ಯೋಜನೆಯು

ಮಹಿಳೆಯರಿಗೆ ಯಾವ ಯಾವ ಬಗೆಯಲ್ಲಿ ತಾರತಮ್ಯಕ್ಕೆ ಒಳಪಡಿಸಿದೆ ಎಂಬುದನ್ನು ಈ ಮೇಲಿನಂತೆ ತಿಳಿಯಬಹುದಾಗಿದೆ.

## ೭.೩. ಯೋಜನೆಯ ಫಲಿತಗಳು ಅಥವಾ ಪ್ರತಿಫಲಗಳು

ಉದ್ಯೋಗ ಖಾತ್ರಿ ಯೋಜನೆಯು ೨೦೦೬ರಲ್ಲಿ ಜಾರಿಗೆ ಬಂದಿದ್ದರೂ ಕೂಡ ಇಂದಿಗೂ ಅದು ಪರಿಪೂರ್ಣತೆಯನ್ನು ಅಥವಾ ಯಶಸ್ಸಿಯನ್ನು ಸಾಧಿಸುವಲ್ಲಿ ವಿಫಲವಾಗಿದೆ. ಏಕೆಂದರೆ ಈ ಯೋಜನೆಗೆ ಜನರ ಸಹಭಾಗಿತ್ವ ಕಡಿಮೆಯಾಗಿ ಅಧಿಕಾರಿಗಳ ಕೈವಶವಾಗಿರುವುದು ಕಂಡುಬರುತ್ತದೆ. ಇಂದಿನ ದಿನ ಪತ್ರಿಕೆಗಳನ್ನು ಪರಿಶೀಲಿಸಿದಾಗ ಉದ್ಯೋಗ ಖಾತ್ರಿ ಯೋಜನೆಯು ವಿಫಲತೆಗಳು ಎಲ್ಲೆಲ್ಲಿ ಹೇಗೇಗೆ ಆಗುತ್ತದೆ ಎಂಬುದು ತಿಳಿದುಬರುತ್ತದೆ. ಗಣದಿನ್ನಿ ಮತ್ತು ಅತ್ತನೂರು ಪಂಚಾಯ್ತಿಗಳಲ್ಲಿ ಮಹಿಳೆಯರ ಹೆಸರಿನಲ್ಲಿಯೇ ಉದ್ಯೋಗ ಕಾರ್ಡ್ ಗಳು ಹೆಚ್ಚಾಗಿರುವುದು ಕಂಡುಬರುತ್ತದೆ. ಇದನ್ನು ಅವರ ಸಬಲೀಕರಣಕ್ಕೆ ಕಾರಣ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಈ ಯೋಜನೆಯ ನಿಯಮವೇ ಹೇಳುವಂತೆ ಸ್ತ್ರೀ ಪುರುಷರಿಗೆ ಸಮಾನ ವೇತನ ನೀಡಬೇಕು ಎಂಬುದು. ಇಲ್ಲಿ ಈ ಸಮಾನ ವೇತನದಿಂದಾಗಿ ಪುರುಷರು ಹೆಚ್ಚಾಗಿ ಮಹಿಳೆಯರ ಹೆಸರಿನಲ್ಲಿಯೇ ಹೆಚ್ಚಾಗಿ ಉದ್ಯೋಗ ಕಾರ್ಡ್‌ಗಳನ್ನು ಮಾಡಿಸಿದ್ದಾರೆ. ಏಕೆಂದರೆ ನಮಗೆ ಸರಿಸಮನವಾಗಿ ವೇತನ ತೆಗೆದುಕೊಳ್ಳುವುದರಿಂದ ಅವಳನ್ನೇ ಕೆಲಸದಲ್ಲಿ ತೊಡಗಿಸಿಕೊಂಡರಾಯಿತು ಎಂಬಂತಹ ಧೋರಣೆ ಪುರುಷನಲ್ಲಿ ಇರುವುದರಿಂದ ಮಹಿಳೆಯರಿಗೆ ಹೆಚ್ಚೆಚ್ಚು ಭಾಗವಹಿಸಲು ಅವಕಾಶ ಕೊಡುತ್ತಿದ್ದಾರೆ. ಈ ಸಂಗತಿ ಮಹಿಳೆಯು ಆರ್ಥಿಕ ಸಬಲೀಕರಣಕ್ಕೆ ಮಹತ್ವದ್ದೆನಿಸಿದರೂ, ಮಹಿಳೆ ದುಡಿದು ಸಂಪಾದಿಸಿದ ಹಣ ಕುಟುಂಬದ ಯಜಮಾನನ ಹೆಸರಿನಲ್ಲಿ ಸಂದಾಯವಾಗುತ್ತಿದೆ. ಯಾಕೆಂದರೆ ಕಾರ್ಡುಗಳು ಜನರಿಗೆ ತಲುಪುತ್ತಿರುವುದು ಕುಟುಂಬದ ಯಜಮಾನನ ಹೆಸರಿನಲ್ಲಿವೇ. ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಈ ಯೋಜನೆಯ ಕಾಮಗಾರಿಗಳು ಗ್ರಾಮೀಣ ಪ್ರದೇಶಗಳಲ್ಲಿಯೇ ಜಾರಿಯಲ್ಲಿ ತರಬೇಕಾದರಿಂದ ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಚಟುವಟಿಕೆಗಳು ಹೆಚ್ಚಾಗಿ ಕಂಡುಬರುವಂತಹ ಸಮಯದಲ್ಲಿ ಈ ಕಾಮಗಾರಿಗಳನ್ನು ಜಾರಿಗೆ ತರುವುದರಿಂದ ಈ ಕಾಮಗಾರಿಗಳಲ್ಲಿ ಜನರು ಭಾಗವಹಿಸದೇ ಇರುವಂತಹ ಸಂದರ್ಭಗಳೂ ಕೂಡ ಕಂಡುಬಂದಿವೆ. ಈ ತರಹದ ಕಾಮಗಾರಿಗಳ ಅನುಷ್ಠಾನಗಳನ್ನು ರಾಜಕೀಯ ವ್ಯಕ್ತಿಗಳು, ಉದ್ದೇಶ ಪೂರ್ವಕವಾಗಿಯೇ ಮಾಡುತ್ತಿರುತ್ತಾರೆ. ಹೀಗಾಗಿ ಇಂದು ಈ ಯೋಜನೆಯು ಸಫಲತೆಯನ್ನು ಪಡೆಯುತ್ತಿಲ್ಲ. ಹಾಗೂ ರಾಜ್ಯ ರಾಜ್ಯಗಳ ನಡುವೆ ಪ್ರತಿಸ್ಪರ್ಧೆ ಮನೋಭಾವನೆಗಳು ಇಂದು ಕಂಡುಬರುತ್ತಿವೆ. ಇದಕ್ಕೆ ಒಂದು ಉತ್ತಮ ಉದಾಹರಣೆ ಎಂದರೆ "ಖಾತ್ರಿ ಯೋಜನೆಯಡಿ ನೆರೆಯ ಆಂಧ್ರ ಪ್ರದೇಶ ಸರಕಾರವು ಸಾವಿರಾರು ಕೋಟಿ ರೂಪಾಯಿ ಬಳಕೆ ಮಾಡಿಕೊಳ್ಳುತ್ತಿರುವ ಹಿನ್ನೆಲೆಯಲ್ಲಿ ಅದಕ್ಕೆ ಸರಿಸಮವಾಗಿ ಕರ್ನಾಟಕದಲ್ಲೂ ಬಳಕೆಯಾಗಬೇಕು ಎಂಬ ರಾಜ್ಯ ಸರಕಾರದ ಸ್ಪರ್ಧಾಮನೋಭಾವವೇ ಕಾರಣ. ಕೋಲಾರದಲ್ಲಿ ಪ್ರಗತಿ

ಪರಿಶೀಲನೆ ನಡೆಸಿದ ಗ್ರಾಮೀಣಾ ಅಭಿವೃದ್ಧಿ ಸಚಿವೆ ಶೋಭಾ ಕರಂದ್ಲಾಜೆ ಮತ್ತು ಇಲಾಖೆ ಕಾರ್ಯದರ್ಶಿ ಬಿ.ರವಿಕುಮಾರ ಸಭೆಯುದ್ದಕ್ಕೂ ಅಧಿಕಾರಿಗಳಿಗೆ ಬೋಧಿಸಿದ ಒಂದೇ ಒಂದು ನೀತಿ ಪಾಠ "ಯಂತ್ರಗಳನ್ನು ಬಳಸಿ-ಹೆಚ್ಚು ಹೆಚ್ಚು ಹಣ ಖರ್ಚು ಮಾಡಿ" ಎಂದು ಸಚಿವೆ ಶೋಭಾ ಕರಂದ್ಲಾಜೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಯಂತ್ರಗಳ ಬಳಕೆ ಕುರಿತು ಬರುವ ಆರೋಪಗಳಿಗೆ ತಲೆಕೆಡಿಸಿಕೊಳ್ಳಲೇ ಬೇಡಿ ಎಂದು ಅಧಿಕಾರಿಗಳಿಗೆ ಅಭಯ ನೀಡಿದರು"(ಸಂಯುಕ್ತ ಕರ್ನಾಟಕ, ೨೧-೮-೨೦೦೯). ಈ ರೀತಿಯ ಹೇಳಿಕೆಗಳು ರಾಜಕೀಯ ವ್ಯಕ್ತಿಗಳು ಸಂಪೂರ್ಣವಾಗಿ ಗ್ರಾಮೀಣ ಪ್ರದೇಶದ ಜನರನ್ನು ನಿರ್ಲಕ್ಷಿಸಿರುವುದು ಮತ್ತು ಕೇವಲ ಹಣವನ್ನು ಹೇಗೆ ಖರ್ಚು ಮಾಡಬೇಕು ಎಂಬುದರ ಬಗ್ಗೆ ಆಲೋಚಿಸುತ್ತಿದ್ದಾರೆಯೇ ಹೊರತು ಗ್ರಾಮೀಣ ಜನರ ಬಗ್ಗೆ ಯಾವುದೇ ಕಾಳಜಿಯನ್ನು ವಹಿಸುತ್ತಿಲ್ಲ ಎಂಬುದಕ್ಕೆ ಸಾಕ್ಷಿಗಳಾಗಿ ನಿಲ್ಲುತ್ತವೆ. ಹಾಗಾಗಿ ಈ ಯೋಜನೆಯ ಸೌಲಭ್ಯ ಜನರಿಗೆ ಸಿಗುತ್ತಿಲ್ಲ. ಆದ್ದರಿಂದ ವಿಫಲತೆಯನ್ನು ಅನುಭವಿಸುತ್ತಿದೆ ಎಂದು ಹೇಳಬಹುದು. ಇದೇ ಪರಿಸ್ಥಿತಿಯೂ ಸಹ ಎಲ್ಲಾ ಗ್ರಾಮ ಪಂಚಾಯ್ತಿಯ ಕೆಲವು ಕಾಮಗಾರಿಗಳಲ್ಲಿ ಕಾಣಬಹುದಾಗಿದೆ. ಇನ್ನೂ ಈ ಯೋಜನೆಯಲ್ಲಿ ನಿಗಧಿಪಡಿಸಿದ ವೇತನ ಜನರ ಜೀವನ ನಿರ್ವಹಣೆಗೆ ಸಾಕಾಗುತ್ತಿಲ್ಲ. ಇಲ್ಲಿನ ಜನರು ಬೇರೆ ಕಡೆ ದುಡಿಯಲು ಹೋದರೆ ಅವರಿಗೆ ದಿನಕ್ಕೆ ೧೫೦-೨೦೦ ರೂ. ಕೂಲಿ ದೊರೆಯುತ್ತದೆ. ಆದರೆ ಸರಕಾರ ಯೋಜನೆಯಲ್ಲಿ ನಿಗಧಿಪಡಿಸಿರುವುದು ೮೨ ರೂ. ಹಾಗಾದರೆ ಖಾಸಗಿಗಿಂತ ಕಡಿಮೆ ಕೂಲಿಸಿಗುವ ಕೆಲಸಕ್ಕೆ ಜನರು ಒಪ್ಪುವುದಿಲ್ಲ. ಹಾಗಾಗಿ ಈ ಯೋಜನೆಯ ವಿಫಲತೆಗೆ ಇದೂ ಒಂದು ಕಾರಣವಾಗಿದೆ ಎಂದು ಹೇಳಬಹುದು.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯ ವರದಿಗಳಲ್ಲಿ ಮಾತ್ರ ಮುನ್ನಡೆಯನ್ನು ಸಾಧಿಸದೆಯೇ ಹೊರತು ವಾಸ್ತವದಲ್ಲಿ ಯಾವುದೇ ಪರಿಣಾಮಕಾರಿಯಾದ ಕಾರ್ಯಗಳನ್ನು ಮಾಡಿಲ್ಲ. ಅದರಲ್ಲೂ ಮಹಿಳೆಯರ ವಿಷಯಕ್ಕೆ ಬಂದಾಗ ಈ ಯೋಜನೆಯು ಯಾವುದೇ ಸೌಲಭ್ಯಗಳನ್ನು ಕಲ್ಪಿಸಿಲ್ಲ. ಅಭಿವೃದ್ಧಿಯು ತನ್ನಷ್ಟಕ್ಕೆ ತಾನೇ ಮಹಿಳೆಯರ ಬದುಕನ್ನು ಉತ್ತಮಪಡಿಸುತ್ತದೆ ಎಂಬ ನಂಬಿಕೆಯಲ್ಲಿ ಹುರುಳಿಲ್ಲ. ಇಷ್ಟಾದರೂ ಕೂಡ ಈ ಯೋಜನೆ ಲಿಂಗ ನಿರಪೇಕ್ಷ ಸ್ವರೂಪವನ್ನು ಹೊಂದಿದೆ ಎಂದು ಹೇಳಲಾಗುತ್ತದೆ. ರಾಜಕೀಯ ಪಕ್ಷಗಳು ಮತ್ತು ಪುರುಷ ವರ್ಗ ಅಧಿಕಾರವನ್ನು ಮಹಿಳೆಯರ ಮೇಲೆ ಚಲಾಯಿಸುತ್ತಿವೆ. ಮಹಿಳೆಯರನ್ನು ಕುಟುಂಬ ಮತ್ತು ಮಕ್ಕಳು ಗಂಡ ಎಂಬಲ್ಲಿಗೆ ಪರಿಮಿತಿಗೊಳಿಸುವುದರ ಮೂಲಕ ಮಾತ್ರ ತಮ್ಮ ಅಧಿಕಾರವನ್ನು ಅನಿರ್ಬಂಧಿತವಾಗಿ ಕಾಯ್ದುಕೊಳ್ಳಬಹುದು ಎಂಬುದಾಗಿ ಪುರುಷ ವರ್ಗ ನಂಬಿದೆ. ಈ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯು ಪ್ರಮುಖವಾಗಿ ರಾಜಕೀಯ ವಲಯಕ್ಕೆ, ಆಡಳಿತ ವರ್ಗಕ್ಕೆ ಹೆಚ್ಚಿನ ಸಹಾಯವನ್ನು ಒದಗಿಸಿಕೊಟ್ಟಿದೆ. ಏಕೆಂದರೆ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಕೂಡ ಸಾಕ್ಷರರ ಪ್ರಮಾಣ ತುಂಬಾ ಕಡಿಮೆ. ಹಾಗಾಗಿ ಈ ಯೋಜನೆಯ ಬಗ್ಗೆ ಸಂಪೂರ್ಣ ಮಾಹಿತಿ ಅವರಲ್ಲಿ ಇಲ್ಲದೇ ಇರುವಂತಹ ಸಂದರ್ಭದಲ್ಲಿ ಅಧಿಕಾರಿಶಾಹಿ ವರ್ಗ ತಮ್ಮ ಸ್ಥಾನವನ್ನು ಬಲಪಡಿಸಿಕೊಂಡು ದಲಿತ ವರ್ಗದವರನ್ನು ತುಳಿಯಲಾರಂಬಿ

ಸುತ್ತಿವೆ. ಮತ್ತು ಈ ಯೋಜನೆಯು ಕೇವಲ ಕೆಲವು ಸಮುದಾಯಕ್ಕೆ ಮಾತ್ರ ಸೀಮಿತವಾಗುತ್ತಿರುವುದನ್ನು ಸಹ ಕೆಲವು ಉದಾಹರಣೆಗಳಿಂದ ತಿಳಿಯಬಹುದಾಗಿದೆ. ಅತ್ತನೂರು ಮತ್ತು ಗಣದಿನ್ನಿ ಗ್ರಾಮ ಪಂಚಾಯ್ತಿಗಳ ವ್ಯಾಪ್ತಿಯಲ್ಲಿ ಈ ಹಿಂದೆ ತಿಳಿಸಿದಂತೆ ಹಲವಾರು ಕಾಮಗಾರಿಗಳು ನಡೆದಿವೆ. ಇದರಿಂದ ಕೆಲವು ವರ್ಗದವರು ಮಾತ್ರ ಉಪಯೋಗವನ್ನು ಪಡೆದುಕೊಂಡಿದ್ದಾರೆ. ಇಲ್ಲಿ ಪರಿಶಿಷ್ಟ ಜಾತಿ/ವರ್ಗದವರ ಹೊಲಗಳಲಿ ಈ ಯೋಜನೆಯಡಿಯಲ್ಲಿ ಯಾವುದೇ ಕಾಮಗಾರಿಗಳನ್ನು ಕೈಗೊಂಡಿಲ್ಲ. ಮತ್ತು ರೈತರ ಚಟುವಟಿಕೆಗಳಿಗೆ ಹೆಚ್ಚಿನ ತೊಂದರೆಯಾಗುತ್ತದೆ ಎಂಬ ಉದ್ದೇಶದಿಂದಾಗಿ ಇದನ್ನು ನಿರಾಕರಿಸಿದವರೂ ನಮಗೆ ದೊರೆಯುತ್ತಾರೆ. ಇತ್ತೀಚಿನ ಬದಲಾವಣೆಯಾಗಿ ಈ ಯೋಜನೆಯನ್ನು ರೈತ ಸ್ನೇಹಿಯಾಗಿ ಮಾಡಹೊರಟಿದೆ. ಅಂದರೆ ಬಡತನ ರೇಖೆಗಿಂತ ಕೆಳಗಿರುವ ಸಣ್ಣ ರೈತರು ಹಾಗೂ ಪರಿಶಿಷ್ಟ ಜಾತಿ/ಪಂಗಡದವರಿಗೆ ಮೀಸಲಾಗಿದ್ದ ಜಮೀನಿನಲ್ಲಿ ಹೊಸ ಬಾವಿ ತೊಡುವಿಕೆ, ಕಾಲುವೆ, ರಸ್ತೆ ನಿರ್ಮಾಣ ಕಾಮಗಾರಿಗಳ ಸೌಲಭ್ಯವನ್ನು ಎಲ್ಲಾ ವರ್ಗದ ರೈತರಿಗೂ ವಿಸ್ತರಿಸಿ ತಿದ್ದುಪಡಿ ಮಾಡಲಾಗಿದೆ. ಎಲ್ಲಾ ವರ್ಗಜಾತಿಯವರೂ ಯೋಜನೆಯ ಪ್ರಯೋಜನ ಪಡೆಯಲು ಸಾಧ್ಯವಾಗುವಂತೆ ಹೊಸ ರೂಪ ನೀಡಲಾಗಿದೆ. ಜಮೀನುಗಳ ಮಾಲೀಕರು ಕೃಷಿ ಅಭಿವೃದ್ಧಿಗೆ ಸಂಬಂಧಿಸಿದ ಕೆಲಸಗಳನ್ನು ಉದ್ಯೋಗ ಖಾತ್ರಿ ಯೋಜನೆಯಡಿ ಉಚಿತ ಮಾಡಿಕೊಳ್ಳಬಹುದಾಗಿದೆ(ಪ್ರಜಾವಾಣಿ ೮-೦೬-೨೦೦೯). ಆದರೆ ಈ ಬದಲಾವಣೆಯು ಸಹ ಕೇವಲ ಉನ್ನತ ವರ್ಗದವರ ಪಾಲಾಗುವುದಂತೂ ಸತ್ಯ. ಏಕೆಂದರೆ ಗ್ರಾಮೀಣ ಭಾಗದಲ್ಲಿ ಜಮೀನುಗಳನ್ನು ಹೊಂದಿದವರು ಬಹುಪಾಲು ಮೇಲ್ವರ್ಗದವರು ಮತ್ತು ಮಧ್ಯಮ ವರ್ಗದವರೇ ಇಂತಹ ಸಂದರ್ಭದಲ್ಲಿ ಈ ಯೋಜನೆಯ ಫಲವನ್ನೆಲ್ಲಾ ಇವರೇ ಹೆಚ್ಚಾಗಿ ಪಡೆಯುತ್ತಾರೆ. ಹೀಗಾಗಿ ಈ ಯೋಜನೆಯ ಅಡಿಯಲ್ಲಿ ಯಾವುದೇ ಬದಲಾವಣೆಗಳನ್ನು ತಂದರೂ ಸಹ ಅವುಗಳು ಮೇಲ್ವರ್ಗದವರ ಅಥವಾ ಅಧಿಕಾರಿಶಾಹಿಗಳ ಪಾಲಾಗುವುದಂತೂ ಸತ್ಯ.

ಒಟ್ಟಾರೆಯಾಗಿ ಈ ಯೋಜನೆಯ ಪ್ರತಿಫಲಗಳಂತೂ ಕೇವಲ ಮೇಲ್ವರ್ಗದವರ ಪರವಾಗಿ ಮತ್ತು ಕೆಳವರ್ಗದವರ ವಿರುದ್ಧವಾಗಿ ನಡೆಯುತ್ತಿವೆ. ಇನ್ನು ಮಹಿಳೆಯರ ವಿಷಯಕ್ಕೆ ಬಂದರೆ ಈ ಯೋಜನೆಯು ಯಾವುದೇ ರೀತಿಯ ಸೌಲಭ್ಯಗಳನ್ನು ಕಲ್ಪಿಸಿಲ್ಲ ಮತ್ತು ಅವರ ಸಬಲೀಕರಣಕ್ಕೆ ಯಾವುದೇ ದಾರಿ ಮಾಡಿಕೊಡದೆ ಮತ್ತೆ ಪುರುಷಶಾಹಿಯ ಕೆಳಗೆ ನಲುಗುವಂತೆ ಮಾಡಿದೆ ಎಂದು ಹೇಳಬಹುದಾಗಿದೆ.

೮

# ಅಧ್ಯಯನದ ಫಲಿತಗಳು

ಪ್ರಸ್ತುತ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿಯೂ ಲಿಂಗತಾರತಮ್ಯ ಹೇಗೆ ನಡೆದಿದೆ ಹಾಗೂ ಅದರ ಪರಿಣಾಮಗಳೇನು ಎಂಬುದನ್ನು ಕುರಿತು ಈ ಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ. ಗ್ರಾಮೀಣ ಭಾಗದಲ್ಲಿನ ಜನರ ಬಡತನವನ್ನು ಹೋಗಲಾಡಿಸಲು ಮತ್ತು ಅವರು ಉದ್ಯೋಗವನ್ನರಸಿ ವಲಸೆ ಹೋಗುವುದನ್ನು ತಡೆಗಟ್ಟುವುದರ ಸಲುವಾಗಿ ೨೦೦೫ರಲ್ಲಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯನ್ನು ಜಾರಿಗೆ ತರಲಾಗಿದೆ. ಆದರೆ ಇಂದು ಈ ಯೋಜನೆಯು ಸಫಲತೆಯನನ್ನು ಪಡೆಯುವುದರಲ್ಲಿ ಎಡವಿರುವುದು ಕಂಡುಬರುತ್ತದೆ. ಈ ಯೋಜನೆಯು ಲಿಂಗಾಧಾರಿತ ಯೋಜನೆಯ ನಿಯಮಗಳನ್ನು ನೀಡಿರುವುದರಿಂದ ಈ ಯೋಜನೆಯು ಮಹಿಳೆಯರಿಗೆ ತುಂಬಾ ಅನಾನುಕೂಲಗಳನ್ನು ಸೃಷ್ಟಿಸಿದೆ. ಹಾಗೆಯೇ ಇದು ಮೇಲ್ನೋಟಕ್ಕೆ ಸ್ತ್ರೀಪುರುಷರ ನಡುವೆ ಸಮಾನತೆಯ ಅಂಶಗಳನ್ನು ಹೊಂದಿದೆ ಎಂದು ತಿಳಿದುಬಂದರೂ ಅದನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಇದು ಸಂಪೂರ್ಣವಾಗಿ ಪುರುಷಮಯವಾಗಿರುವುದು ಕಂಡುಬರುತ್ತದೆ. ಏಕೆಂದರೆ ಯೋಜನೆಯ ನಿಯಮಗಳಲ್ಲಿ, ಅನುಷ್ಠಾನದಲ್ಲಿ, ಕೆಲಸದ ಹಂಚಿಕೆಯಲ್ಲಿ, ಆದಾಯದ ವಿತರಣೆಯಲ್ಲಿ ಹೀಗೆ ಹಲವಾರು ವಿಷಯಗಳಲ್ಲಿ ಮಹಿಳೆಯನ್ನು ಕಡೆಗಣಿಸಲಾಗಿದೆ. ಹಾಗಾಗಿ ಮಹಿಳೆಯರಿಗೆ ಈ ಯೋಜನೆಯಿಂದ ಯಾವುದೇ ಪ್ರಯೋಜನ ಆಗಿಲ್ಲ.

ಸಾಮಾಜಿಕವಾಗಿ ಮತ್ತು ಲಿಂಗಸಂಬಂಧಿ ಅಸಮಾನತೆಯ ನಿವಾರಣೆಗಾಗಿ ಮತ್ತು ಸಮಾಜದಲ್ಲಿ ಸಮಾನತೆಯನ್ನು ಸ್ಥಾಪಿಸಲು ಸಮಾಜದ ಎಲ್ಲಾ ದುರ್ಬಲವರ್ಗದವರು ಮತ್ತು ಮಹಿಳೆಯರು ಆರ್ಥಿಕವಾಗಿ ಸ್ವಾವಲಂಬಿಗಳಾಗಬೇಕು ಮತ್ತು ಸಂಪತ್ತಿನ ಸಮಾನ ಹಂಚಿಕೆಯಾಗಬೇಕು. ಆದರೆ ಈ ಯೋಜನೆಯು ಜಾರಿಗೆ ಬಂದಾಗಿನಿಂದಲೂ ಕೂಡ ಮಹಿಳೆಯರು ಯಾವುದೇ ಸ್ವಾವಲಂಬನೆಯನ್ನು ಸಾಧಿಸಿಲ್ಲ ಮತ್ತು ಆರ್ಥಿಕವಾಗಿ ಸಬಲರಾಗಿಲ್ಲ. ಗ್ರಾಮೀಣ ಭಾಗದಲ್ಲಿ ಮಹಿಳೆಯರು ಅನಕ್ಷರಸ್ಥರಾಗಿರುವುದರಿಂದ ಅವರಿಗೆ ಈ ಯೋಜನೆಯ ಸಂಪೂರ್ಣ ಮಾಹಿತಿ ಇಲ್ಲವಾಗಿದೆ. ಹಾಗೂ ಈ ಯೋಜನೆಯ ಬಗ್ಗೆ ತಿಳಿದುಕೊಳ್ಳುವ ಪ್ರಯತ್ನವೂ ಅವರಲ್ಲಿ ನಡೆಯುತ್ತಿಲ್ಲ. ಅಧ್ಯಯನ ಕ್ಷೇತ್ರದಲ್ಲಿನ ಮಹಿಳೆಯರು ಕುಟುಂಬದ ನಿರ್ವಹಣೆಯಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಆದರೆ ಪುರುಷನಷ್ಟೇ ಬುದ್ಧಿ ಮತ್ತು ಭೌತಿಕ

ಬಲವನ್ನು ವಿನಿಯೋಗಿಸಿದರೂ ಕೂಡ ದುಡಿತದ ಫಲಿತದ ಮೇಲೆ ಅವಳ ಹಕ್ಕನ್ನು ಕಿತ್ತುಕೊಳ್ಳಲಾಗಿದೆ. ಈ ಯೋಜನೆಯಲ್ಲಿ ಹೇಳಿರುವಂತೆ ಸಮಾನ ವೇತನವು ಮಹಿಳೆಯರನ್ನು ಶೋಷಿಸಲು ಅನುಕೂಲ ಮಾಡಿಕೊಟ್ಟಿದೆ. ಏಕೆಂದರೆ ಈ ಸಮಾನ ವೇತನದಿಂದಾಗಿ ಪುರುಷರು ಕೆಲಸದಿಂದ ದೂರ ಉಳಿಯುತ್ತಿದ್ದಾರೆ. ಮತ್ತು ಮಹಿಳೆಯರು ಹೆಚ್ಚಾಗಿ ಕೆಲಸದಲ್ಲಿ ತೊಡಗಿಕೊಳ್ಳುತ್ತಿದ್ದಾರೆ. ಮತ್ತು ತೊಡಗಿಸಿಕೊಳ್ಳುವಂತೆ ಮಾಡಲಾಗುತ್ತಿದೆ. ಇದರ ಜೊತೆಯಲ್ಲಿಯೇ ಕೆಲಸದ ಸ್ಥಳಗಳಲ್ಲಿ ಮಹಿಳೆಯರಿಗೆ ಮಾನಸಿಕ ಮತ್ತು ದೈಹಿಕ ತೊಂದರೆಗಳು ನಡೆಯುತ್ತಿವೆ. ಆದರೆ ಈ ಹಿಂಸೆಗಳನ್ನು ಮಹಿಳೆಯರು ಮೌನವಾಗಿಯೇ ಸಹಿಸಿಕೊಳ್ಳುತ್ತಿದ್ದಾರೆ. ಈ ಹಿಂಸೆ ಮತ್ತು ಅವರಿಗೆ ಆಗುತ್ತಿರುವಂತಹ ತೊಂದರೆಗಳ ಬಗ್ಗೆ ಎಲ್ಲಿಯೂ ಚರ್ಚಿಸುತ್ತಿಲ್ಲ. ಏಕೆಂದರೆ ಅವರಲ್ಲಿನ ಉದ್ಯೋಗದ ಅಭದ್ರತೆ ಮತ್ತು ಕುಟುಂಬದಲ್ಲಿ ತನ್ನ ಸ್ಥಾನದ ಅಭದ್ರತೆಯೇ ಕಾರಣವಾಗಿದೆ. ಅಷ್ಟೇ ಅಲ್ಲದೆ ಸಮಾಜದಲ್ಲಿ ಅವಳ ಅಸ್ತಿತ್ವಕ್ಕೆ ಹೆಚ್ಚಿನ ಪೆಟ್ಟು ಬೀಳುತ್ತಿದೆ. ಹಾಗಾಗಿ ಅವರು ಎಲ್ಲಿಯೂ ಬಾಯಿ ಬಿಡುತ್ತಿಲ್ಲ. ಆದರೆ ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ಮಹಿಳೆಯರನ್ನು ಸಂದರ್ಶಿಸುವ ಸಂದರ್ಭದಲ್ಲಿ ಮತ್ತು ಪ್ರಶ್ನಿಸುವ ಸಂದರ್ಭದಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ಈ ವಿಷಯಗಳು ಗೋಚರಿಸುತ್ತವೆ.

ದಿನಾಲು ಬೆಳಿಗ್ಗೆ ನಾಲ್ಕು ಗಂಟೆಯಿಂದ ಪ್ರಾರಂಭವಾಗುವ ಅವಳ ದುಡಿಮೆ ಆತಂಕ, ಅನಿಶ್ಚಿತತೆ ರಾತ್ರಿ ಮಲಗುವವರೆಗೂ ಸಾಗುತ್ತದೆ. ಸೂರ್ಯೋದಯದ ಮುಂಚೆಯೇ ಪ್ರಾರಂಭವಾಗುವ ಮನೆ ಕೆಲಸ ಮತ್ತು ಸೂರ್ಯೋದಯದ ನಂತರ ಪ್ರಾರಂಭವಾಗುವ ಕೂಲಿ ಕೆಲಸ ಹಾಗೂ ಹೊತ್ತು ಮುಳುಗಿದ ನಂತರ ಮತ್ತೆ ನಿರ್ವಹಿಸಲೇ ಬೇಕಾದ ನಿತ್ಯದ ಮನೆಗೆಲಸಗಳ ಮಧ್ಯೆ ಮಹಿಳೆ ಸ್ವಾತಂತ್ರ್ಯಕ್ಕಾಗಿ ಪರದಾಡುವಂತಹ ಪರಿಸ್ಥಿತಿಯಲ್ಲಿದ್ದಾಳೆ. ಭಾರತ ಸರಕಾರವು ಯಾವುದೇ ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತಂದರೂ ಸಹ ಅವುಗಳು ಮಹಿಳೆಯರ ಪರವಾಗಿರದೆ ಪುರುಷ ಪರವಾಗಿರುತ್ತವೆ. ಏಕೆಂದರೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಎಲ್ಲಿಯೂ ಪುರುಷನ ಮೂಗಿನ ನೇರಕ್ಕೆ ಇರುತ್ತವೆ. ಹಾಗಾಗಿ ಮಹಿಳೆಯು ಯಾವುದೇ ಅಭಿವೃದ್ಧಿಯನ್ನು ಸಾಧಿಸುತ್ತಿಲ್ಲ. ಲಿಂಗತಾರತಮ್ಯ ಎಂಬುದು ಮಹಿಳೆಯರಿಗೆ ಒಂದು ಶಾಪವಾಗಿ ಕಾಡುತ್ತಿದೆ. ಅದು ಎಲ್ಲಾ ವಲಯಗಳಲ್ಲಿಯೂ ಕಂಡುಬರುತ್ತಿದೆ. ಇದಕ್ಕೆ ಈ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯೂ ಹೊರತಾಗಿಲ್ಲ. ಆದ್ದರಿಂದ ಮಹಿಳೆಯು ಸಮಾಜದಲ್ಲಿ ಎರಡನೆಯ ದರ್ಜೆಯವಳಾಗಿಯೇ ಇದ್ದಾಳೆ. ಪ್ರಸ್ತುತ ಅಧ್ಯಯನದಿಂದ ಈ ಕೆಳಗಿನ ಅಂಶಗಳು ನಮಗೆ ಗೋಚರಿಸುತ್ತವೆ.

೧. ಯೋಜನೆಯು ಸಂಪೂರ್ಣವಾಗಿ ಪುರುಷ ಪ್ರಧಾನ ಆಶಯಗಳಿಗೆ ಹೆಚ್ಚು ಒತ್ತು ಕೊಟ್ಟಿದೆ.

೨. ಈ ಯೋಜನೆಯಲ್ಲಿ ನೀಡಲಾಗುತ್ತಿರುವ ಕೂಲಿಯು ಕುಟುಂಬದ ನಿರ್ವಹಣೆಗೆ ಸಾಕಾಗುತ್ತಿಲ್ಲ. ಮತ್ತು ಕೂಲಿಯು ಸರಿಯಾಗಿ ಪಾವತಿಯಾಗುತ್ತಿಲ್ಲ.

೩. ದುಡಿಮೆಯಿಂದ ಬಂದಂತಹ ಆದಾಯದ ಮೇಲೆ ಮಹಿಳೆಯರಿಗೆ ಯಾವುದೇ ಹಕ್ಕಿಲ್ಲ.

೪. ಗ್ರಾಮಪಂಚಾಯಿತಿಗಳು ಈ ಯೋಜನೆಯ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಜನರಿಗೆ ತಲುಪಿಸುತ್ತಿಲ್ಲ. ಮತ್ತು ಗ್ರಾಮಸಭೆಗಳು ಸರಿಯಾಗಿ ನಡೆಯುತ್ತಿಲ್ಲ.

೫. ಅಧ್ಯಯನದ ವ್ಯಾಪ್ತಿಯಲ್ಲಿನ ಗ್ರಾಮಗಳಲ್ಲಿ ಹಲವಾರು ಸ್ತ್ರೀಶಕ್ತಿ ಸಂಘಗಳು ಇದ್ದರೂ ಸಹ ಈ ಯೋಜನೆಯ ಬಗ್ಗೆ ಸಂಪೂರ್ಣವಾದ ಮಾಹಿತಿ ಇವುಗಳಿಗಿಲ್ಲ. ಮತ್ತು ತಿಳಿದುಕೊಳ್ಳಬೇಕು ಎನ್ನುವ ಮನಸ್ಸು ಸಹ ಅವುಗಳಿಗಿಲ್ಲ.

೬. ಮಹಿಳೆಯರು ರಾಜಕೀಯವಾಗಿ ತುಂಬಾ ಹಿಂದುಳಿದಿದ್ದು ಗ್ರಾಮಪಂಚಾಯಿತಿಗಳಲ್ಲಿ ಅವರ ಭಾಗವಹಿಸುವಿಕೆ ತುಂಬಾ ವಿರಳವಾಗಿದೆ.

೭. ಈ ಯೋಜನೆಯ ಕಾಮಗಾರಿಗಳಲ್ಲಿ ಮೇಲ್ವರ್ಗದ ಮಹಿಳೆಯರು ಭಾಗವಹಿಸಿರುವುದು ಕಡಿಮೆ. ಕೆಳವರ್ಗದ ಮಹಿಳೆಯರು ಹೆಚ್ಚಾಗಿ ಉದ್ಯೋಗ ಕಾರ್ಡ್‌ಗಳನ್ನು ಹೊಂದಿದ್ದಾರೆ.

೮. ಈ ಯೋಜನೆಯ ಕೆಲವು ಕಾಮಗಾರಿಗಳಲ್ಲಿ ಯಂತ್ರಗಳನ್ನು ಬಳಕೆ ಮಾಡಲಾಗಿದೆ. ಹಾಗೂ ಈ ಯೋಜನೆಯು ಸಂಪೂರ್ಣವಾಗಿ ರಾಜಕೀಯಮಯವಾಗಿದೆ.

೯. ಕೆಲಸದ ಸ್ಥಳಗಳಲ್ಲಿ ಯಾವುದೇ ಸೌಲಭ್ಯಗಳನ್ನು ಒದಗಿಸಿಲ್ಲ.

೧೦. ಉದ್ಯೋಗ ಕಾರ್ಡ್‌ನ್ನು ಪಡೆದ ೧೫ ದಿನಗಳೊಳಗಾಗಿ ಕೆಲಸ ನೀಡದಿದ್ದಲ್ಲಿ ನಿರುದ್ಯೋಗದ ಭತ್ಯೆಯನ್ನು ನೀಡಬೇಕು. ಆದರೆ ಅದನ್ನು ನೀಡಿಲ್ಲ.

೧೧. ಈ ಯೋಜನೆಯ ಅಡಿಯಲ್ಲಿ ಹೆಚ್ಚಾಗಿ ಮಹಿಳೆಯರು ಉದ್ಯೋಗ ಕಾರ್ಡ್‌ಗಳನ್ನು ಹೊಂದಿದ್ದರೂ ದುಡಿತದ ಸಂಪಾದನೆಯ ಮೇಲೆ ಅವರಿಗೆ ಯಾವುದೇ ಸ್ವಾತಂತ್ರ್ಯ ದೊರೆತಿಲ್ಲ. ಹಾಗೂ ಅವಳ ಚಲನವಲನಗಳ ಮೇಲೆ ನಿರ್ಬಂಧವನ್ನು ಹಾಕಲಾಗಿದೆ. ಹಾಗಾಗಿ ಅವರಿಗೆ ಸೌಲಭ್ಯಗಳ ವಿಷಯವಾಗಿ ಧ್ವನಿ ಎತ್ತುವುದು ಕಷ್ಟವಾಗಿದೆ.

೧೨. ಈ ಯೋಜನೆಯಲ್ಲಿ ದುಡಿಯುವ ಮಹಿಳೆಯರು ಬಡಕುಟುಂಬದವರಾಗಿದ್ದು ಅವರು ಕೂಲಿಗೆ ಶ್ರಮವನ್ನು ಮಾರಿಕೊಳ್ಳುತ್ತಿದ್ದಾರೆ.

೧೩. ಒಂದು ಆರ್ಥಿಕ ವರ್ಷದಲ್ಲಿ ೧೦೦ ದಿನಗಳ ಕಾಲ ಉದ್ಯೋಗವನ್ನು ಕೊಡುವಂತಹದ್ದಾಗಿದ್ದರಿಂದ ಇದು ಅಸಂಘಟಿತ ಕ್ಷೇತ್ರವಾಗಿದ್ದು ಉದ್ಯೋಗದ ಭದ್ರತೆ ಇಲ್ಲವಾಗಿದೆ. ಹಾಗಾಗಿ ಗ್ರಾಮದ ಜನರು ಈ ಯೋಜನೆಯ ಕಾಮಗಾರಿಗಳಲ್ಲಿ ದುಡಿಯಲು ಆಸಕ್ತಿವಹಿಸುತ್ತಿಲ್ಲ.

೧೪. ಈ ಯೋಜನೆಯಲ್ಲಿ ಮಹಿಳೆಯರು ಎರಡು ಬಗೆಯ ಮನೆಗೆಲಸ, ಯೋಜನೆ ಕೆಲಸ, ದುಡಿಮೆಗಳ ಒತ್ತಡಕ್ಕೆ ಒಳಗಾಗುತ್ತಿದ್ದಾರೆ. ಹಾಗಾಗಿ ಅವರಿಗೆ ಬಿಡುವೇ ಇಲ್ಲದಂತಾಗಿದೆ.

೧೫. ಗ್ರಾಮದಲ್ಲಿನ ಮಹಿಳೆಯರು ಅನಕ್ಷರಸ್ಥರಾಗಿದ್ದು ಅವರಿಗೆ ಈ ಯೋಜನೆಯ ಬಗ್ಗೆ ಸಂಪೂರ್ಣ ಮಾಹಿತಿ ಇಲ್ಲವಾಗಿದೆ. ಊರಿನಲ್ಲಿನ ಪ್ರಮುಖ ವ್ಯಕ್ತಿಗಳು ಹೇಳಿದ ಹಾಗೆ ಕೇಳಿಕೊಂಡು ಹೋಗುವವರಾಗಿದ್ದಾರೆ. ಹಾಗಾಗಿ ಅವರಿಗೆ ಯಾವುದೇ ಸೌಲಭ್ಯಗಳು ದೊರೆಯುತ್ತಿಲ್ಲ. ಅವರಿಂದ ಶೋಷಣೆಯನ್ನು ಅನುಭವಿಸುತ್ತಿದ್ದಾರೆ.

೧೬. ಗ್ರಾಮಪಂಚಾಯಿತಿಗಳಲ್ಲಿ ಮಹಿಳಾ ಸದಸ್ಯರಿದ್ದೂ ಅವರು ಇತರ ಮಹಿಳೆಯರ ಬಗೆಗೆ ಯಾವುದೇ ಬಗೆಯ ಯೋಚನೆಯನ್ನು ಮಾಡದೆ ತಮ್ಮ ಸ್ವ ಹಿತಾಸಕ್ತಿಯನ್ನು ಪೂರೈಸಿಕೊಳ್ಳಲು ಮುಂದಾಗುತ್ತಿದ್ದಾರೆ. ಇದರ ಹಿಂದೆ ಪುರುಷರ ಕೈವಾಡವಿರುತ್ತದೆ. ಮತ್ತೆ ಕೆಲವು ಸಂದರ್ಭದಲ್ಲಿ ಪುರುಷನೇ ಅವಳ ಅಧಿಕಾರವನ್ನೆಲ್ಲಾ ಚಲಾಯಿಸುತ್ತಿರುತ್ತಾನೆ.

೧೭. ಈ ಯೋಜನೆಯಲ್ಲಿ ಉದ್ಯೋಗ ಕಾರ್ಡ್‌ನ್ನು ಪಡೆಯಲು ಮಹಿಳೆಯರೇ ಸ್ವತಃ ಗ್ರಾಮಪಂಚಾಯಿತಿಗಳಿಗೆ ತೆರಳಿ ಪಡೆದುಕೊಂಡಿದ್ದಾರೆ.

೧೮. ಈ ಯೋಜನೆಯು ಸಂಪೂರ್ಣವಾಗಿ ಮೇಲ್ವರ್ಗದವರ ಅಥವಾ ಉಳ್ಳವರ ಪಾಲಾಗಿದೆ.

ಹೀಗೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಜಾರಿಗೆ ಬಂದ ನಂತರ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಗ್ರಾಮಪಂಚಾಯಿತಿಗಳಲ್ಲಿ ಕೈಗೊಂಡ ಕ್ಷೇತ್ರಾಧ್ಯಯನದಿಂದ ಕಂಡುಕೊಂಡ ವಿಷಯಗಳಾಗಿವೆ.

## ಅಧ್ಯಯನದ ಸಲಹೆಗಳು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿಯೋಜನೆಯು ಹಲವಾರು ಲೋಪದೋಷಗಳನ್ನು ಹೊಂದಿದ್ದು, ಅವುಗಳಿಂದ ಮುಕ್ತವಾಗಿ ಸಫಲತೆಯನ್ನು ಹೊಂದಬೇಕಾಗಿದೆ. ಆ ನಿಟ್ಟಿನಲ್ಲಿ ಈ ಕೆಳಗಿನ ಕೆಲವು ಸಲಹೆಗಳು ಪೂರಕವಾಗುತ್ತವೆ.

೧. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಲಿಂಗತಾರತಮ್ಯದಿಂದ ಕೂಡಿದ್ದು ಇದನ್ನು ಹೋಗಲಾಡಿಸಲು ಈ ಯೋಜನೆಯನ್ನು ರೂಪಿಸುವವರಲ್ಲಿ ಸ್ತ್ರೀಪುರುಷರು ಸಮಾನರಾಗಿರಬೇಕು.

೨. ಸಂವಿಧಾನದ ನಿಯಮಗಳಿಗೆ ಬದ್ಧವಾಗಿ ಸ್ತ್ರೀಪುರುಷರಿಗೆ ಸಮಾನ ಅವಕಾಶಗಳನ್ನು ಒದಗಿಸಬೇಕು.

೩. ಯೋಜನೆಯ ಗುರಿ ಉದ್ದೇಶಗಳು ಇನ್ನಿತರ ವಿಷಯಗಳನ್ನು ಕುರಿತು ಜನರಲ್ಲಿ ಜಾಗೃತಿಯನ್ನು ಮೂಡಿಸಬೇಕು.

೪. ಸಮಾಜದಲ್ಲಿ ಮಹಿಳೆಯರ ಸ್ಥಾನಮಾನಗಳು ಉನ್ನತ ಮಟ್ಟಕ್ಕೇರಬೇಕು. ಅಂದರೆ ಸಾಮಾಜಿಕ ಸ್ಥಾನಮಾನಗಳ ಉನ್ನತೀಕರಣ ಅವಳ ಒಟ್ಟಾರೆಯ ಔನತ್ಯದ ಭಾಗವಾಗಿ ಸಾಧ್ಯವಾಗಬೇಕು. ಅವಳ ಪ್ರಜನೋತ್ಪತ್ತಿ ಸಾಧ್ಯತೆ, ಅವರ ಸ್ವಹಿತ ರಹಿತ ದುಡಿಮೆಯ ಕಾರಣಕ್ಕಾಗಿ ಒಟ್ಟಾರೆಯಾಗಿ ಮಹಿಳೆ ಸಮುದಾಯದಲ್ಲಿ ಮಹತ್ವದ ಸ್ಥಾನವನ್ನು ಹೊಂದಿದ್ದಾಳೆ. ಈ ಕಾರಣಕ್ಕಾಗಿ ಮಹಿಳೆಗೆ ಪುರುಷನಷ್ಟೇ ಸಾಮಾಜಿಕ ಸ್ಥಾನಮಾನಗಳು ಲಭ್ಯವಾಗಬೇಕು.

೫. ಒಂದು ಆರ್ಥಿಕ ವರ್ಷದಲ್ಲಿ ಕೇವಲ ೧೦೦ ದಿನಗಳು ಮಾತ್ರವಲ್ಲದೆ ವರ್ಷವಿಡೀ ಉದ್ಯೋಗವನ್ನು ಸೃಷ್ಟಿಸುವಂತಹ ಕೆಲಸವನ್ನು ಮಾಡಬೇಕು. ಮತ್ತು ವೇತನವನ್ನು ಹೆಚ್ಚಿಸಬೇಕು.

೬. ಗ್ರಾಮಪಂಚಾಯಿತಿಗಳು ಕಾಲಕಾಲಕ್ಕೆ ಗ್ರಾಮಸಭೆಗಳನ್ನು ಏರ್ಪಡಿಸುವುದರ ಮೂಲಕ ಅಲ್ಲಿನ ಸಮಸ್ಯೆಗಳ ಬಗ್ಗೆ ಹೆಚ್ಚಿನ ಗಮನವನ್ನು ಹರಿಸಬೇಕು.

೭. ಗ್ರಾಮಪಂಚಾಯಿತಿಗಳಲ್ಲಿ ಮಹಿಳಾ ಸದಸ್ಯೆಯರು ಯೋಜನೆಯ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಪಡೆಯಬೇಕು. ಹಾಗೂ ಇತರೆ ಮಹಿಳೆಯರ ಅಭಿವೃದ್ಧಿಗಾಗಿ ಶ್ರಮಿಸಬೇಕು.

೮. ಮಹಿಳೆಗೆ ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ನಿರ್ಣಾಯಕ ಅಧಿಕಾರಗಳು ಲಭ್ಯವಾಗಬೇಕೆಂದರೆ ಶೈಕ್ಷಣವಾಗಿ ಮತ್ತು ಆರ್ಥಿಕವಾಗಿ ಅವಳು ಸ್ವಾವಲಂಬಿಯಾಗಬೇಕು.

೯. ಗ್ರಾಮಗಳಲ್ಲಿ ರಾತ್ರಿ ಶಾಲೆಗಳನ್ನು ತೆರೆಯುವುದರ ಮೂಲಕ ಗ್ರಾಮದ ಮಹಿಳೆಯರಲ್ಲಿ ಸಾಕ್ಷರತೆಯನ್ನು ಹೆಚ್ಚಿಸಬೇಕು.

೧೦. ಮಹಿಳೆಯು ದುಡಿಮೆಯಿಂದ ಬಂದಂತಹ ಆದಾಯದ ಮೇಲೆ ಹಕ್ಕನ್ನು ಚಲಾಯಿಸುವಂತಾಗಬೇಕು.

೧೧. ಮಹಿಳೆಯ ದುಡಿಮೆಯು ಸಮಾಜದಿಂದ ಮಾನ್ಯತೆಯನ್ನು ಪಡೆಯಬೇಕು.

೧೨. ಯೋಜನೆಗಳಲ್ಲಿ ಅಥವಾ ಕಾಯಿದೆಗಳಲ್ಲಿ ಯಾವುದೇ ರಾಜಕೀಯದ ಪ್ರವೇಶವನ್ನು ಪಡೆಯಬಾರದು.

೧೩. ಮಹಿಳೆಯರು ಶಿಕ್ಷಣವನ್ನು ಪಡೆಯುವುದರ ಮೂಲಕ ಸಮಾಜದಲ್ಲಿ ರೂಢಿ ಸಂಪ್ರದಾಯಗಳನ್ನು ಪ್ರಶ್ನಿಸುವಂತಾಗಬೇಕು.

೧೪. ಈ ಯೋಜನೆಯು ಎಲ್ಲೆಲ್ಲಿ ವಿಫಲತೆಯನ್ನು ಅನುಭವಿಸುತ್ತಿದೆ ಮತ್ತು ಯಾರಿಂದ ಅನುಭವಿಸುತ್ತಿದೆ ಎಂಬುದನ್ನು ಸರಕಾರ ಕಂಡುಹಿಡಿದು ಅದರ ವಿರುದ್ಧ ಸರಿಯಾದ ಕ್ರಮವನ್ನು ಕೈಗೊಳ್ಳಬೇಕು.

೧೫. ಈ ಯೋಜನೆಯ ಕಾಮಗಾರಿಗಳಲ್ಲಿ ಯಂತ್ರಗಳನ್ನು ಬಳಸದೆ ಜನರನ್ನು ಕಾಮಗಾರಿಗಳಲ್ಲಿ ಬಳಸಿ ಕೊಳ್ಳಬೇಕು.

೧೬. ಮಹಿಳೆಯರು ಸ್ವತಂತ್ರರಾಗಲು, ಸ್ವಾವಲಂಬಿಗಳಾಗಲು ಹೆಚ್ಚಿನ ಒತ್ತನ್ನು ಕೊಡಬೇಕು.

೧೭. ಸರ್ಕಾರೇತರ ಸಂಸ್ಥೆಗಳು ಈ ಕಾರ್ಯಕ್ರಮಗಳ ಬಗ್ಗೆ ಕಾಳಜಿಯನ್ನು ವಹಿಸುವ ಮೂಲಕ ಮಹಿಳಾ ಸಮುದಾಯಕ್ಕೆ ಸಹಕಾರಿಯಾಗಬೇಕು.

ಪ್ರಸ್ತುತ ಸಂದರ್ಭದಲ್ಲಿ ಈ ಯೋಜನೆಗಾಗಿ ಬಹಳಷ್ಟು ಹಣವನ್ನು ವ್ಯಹಿಸಲಾಗುತ್ತಿದೆ. ಆದರೆ ಈ ಯೋಜನೆಯು ಮಾತ್ರ ಸಫಲತೆಯನ್ನು ಸಾಧಿಸುವಲ್ಲಿ ಎಡವಿರುವುದನ್ನು ಅಧ್ಯಯನದಿಂದ ತಿಳಿಯಬಹುದಾಗಿದೆ. ಹಾಗೂ ಈ ಯೋಜನೆಯು ಸಂಪೂರ್ಣವಾಗಿ ಲಿಂಗತಾರತಮ್ಯದಿಂದ ಕೂಡಿದ್ದರಿಂದ ಮಹಿಳೆಯನ್ನು ಸೌಲಭ್ಯಗಳಿಂದ ವಂಚಿತಳನ್ನಾಗಿಸಿದೆ. ಒಟ್ಟಿನಲ್ಲಿ ಈ ಯೋಜನೆಯು ಒಂದು ಉತ್ತಮ ರೀತಿಯಲ್ಲಿ ಜಾರಿಗೆ ಬಂದದ್ದೇ ಆದರೆ ಇದರ ಆಶಯಗಳು ಪೂರ್ಣಗೊಳ್ಳುವುದರಲ್ಲಿ ಸಂದೇಹವಿಲ್ಲ. ಮುಖ್ಯವಾಗಿ ಈ ಕಾರ್ಯ ಗ್ರಾಮಮಟ್ಟದಿಂದ ನಡೆಯಬೇಕು. ಅಧ್ಯಯನ ವ್ಯಾಪ್ತಿಯಲ್ಲಿ ಮಾತ್ರವಲ್ಲದೆ ರಾಜ್ಯದ ಹಲವಾರು ಕಡೆ ಈ ಯೋಜನೆಯು ವಿಫಲತೆಯನ್ನು ಅನುಭವಿಸಿದೆ. ಈ ಸಂಶೋಧನಾ ಪ್ರಬಂಧವು ಮುಖ್ಯವಾಗಿ ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿಯೇ ರೂಪಿತಗೊಂಡಿದೆ. ಹಾಗಾಗಿ ಹೆಚ್ಚು ಹೆಚ್ಚು ಲೋಪದೋಷಗಳು ಕಂಡುಬರುತ್ತಿವೆ. ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯು ಯಶಸ್ವಿ ಯಾಗಬೇಕು ಮತ್ತು ಗ್ರಾಮೀಣ ಜನರಲ್ಲಿನ ಬಡತನ ಮತ್ತು ನಿರುದ್ಯೋಗದ ಸಮಸ್ಯೆಯನ್ನು ನಿವಾರಿಸುವುದರ ನಿಟ್ಟಿನಲ್ಲಿ ಕಾಮಗಾರಿಗಳು ಜಾರಿಗೆ ಬರಬೇಕು. ಮತ್ತು ಮಹಿಳೆಯರು ಈ ಯೋಜನೆಯಲ್ಲಿ ಹೆಚ್ಚೆಚ್ಚು ಭಾಗವಹಿಸುವುದರ ಮೂಲಕ ಸ್ವಾವಲಂಬಿಗಳಾಗಬೇಕು. ಈ ನಿಟ್ಟಿನಲ್ಲಿ ಕ್ರಮಗಳನ್ನು ಕೈಗೊಳ್ಳಬೇಕು. ಇದು ಅಧ್ಯಯನದ ಆಶಯವಾಗಿದೆ.

ನಾನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ವಿಷಯವು ವಿಶಾಲ ಹರಿವಿನದ್ದಾದ್ದರಿಂದ ನನ್ನ ವ್ಯಾಪ್ತಿ ಮತ್ತು ಕಾಲಾವಧಿಗನುಗುಣವಾಗಿ ನನ್ನ ಪ್ರಬಂಧವನ್ನು ಮಂಡಿಸಿದ್ದೇನೆ. ಹಲವು ಆಯಾಮಗಳಲ್ಲಿ ಅಧ್ಯಯನ ಸಾಧ್ಯವಿರುವುದರಿಂದ ಅಧ್ಯಯನವನ್ನು ಆಸಕ್ತಿಗನುಗುಣವಾಗಿ ಮುಂದುವರೆಸಬಹುದು.

# ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು

೨. ವಕ್ಕ ವಿವರಗಳು

೩. ಛಾಯಾಚಿತ್ರಗಳು

೧

# ಪರಾಮರ್ಶನ ಗ್ರಂಥಗಳು


೧. ಇಂದಿರಾ ಆರ್., ೨೦೦೨, ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಉಷಾ ಎಂ., ೨೦೦೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಗಾಯತ್ರಿ ಎನ್., ೧೯೯೧, ಮಹಿಳೆ ಬಿಡುಗಡೆಯ ಹಾದಿಯಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೪. ಗೀತಾಕೃಷ್ಣಮೂರ್ತಿ, ೨೦೦೭, ಮಹಿಳೆ ಸಮಾಜ, ಕಾನೂನು, ನವಕರ್ನಾಟಕ ಪ್ರಕಾಶನ, ಬೆಂಗಳೂರು

೫. ಗೋಪಾಲರಾವ್ ವೈ.ಎಲ್., ೨೦೦೦, ಭಾರತೀಯ ನಾರಿ ಅಂದು-ಇಂದು, ಭೈರವ ಪ್ರಕಾಶನ, ಚಿಕ್ಕಮಗಳೂರು

೬. ಚಂದ್ರಶೇಖರ ಟಿ.ಆರ್., ೨೦೦೧, ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭. ಚಂದ್ರಶೇಖರ ಸಿ.ಆರ್., ೨೦೦೪, ನೀವು ಯಶಸ್ವಿ ಗೃಹಿಣಿಯೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೮. ಚಂದ್ರಶೇಖರ ಟಿ.ಆರ್., ೨೦೦೪, ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೯. ಚಂದ್ರಶೇಖರ ಟಿ.ಆರ್., ೨೦೦೫, ಜನರ ಯೋಜನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ಚಂದ್ರಶೇಖರ ಟಿ.ಆರ್., ೨೦೦೫, ಅಭಿವೃದ್ಧಿ ಅಧ್ಯಯನ, ಸಂಚಿಕೆ ೨, ಗ್ರಾಮಪಂಚಾಯಿತಿ ಪ್ರಸ್ತುತ ಸಮಸ್ಯೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧. ನಾರಾಯಣ ಎಂ., ೨೦೦೪, ಸಾಮಾಜಿಕ ಸಂಸ್ಥೆಗಳು ಮತ್ತು ಸಾಮಾಜಿಕ ಬದಲಾವಣೆ, ಲಕ್ಷ್ಮೀ ಪ್ರಿಂಟರ್ಸ್ ಮತ್ತು ಪಬ್ಲಿಕೇಷನ್ಸ್, ಮೈಸೂರು

೧೨. ನೀಲಮ್ಮ ಕತ್ನಳ್ಳಿ, ೧೯೯೭, ಮಹಿಳೆ ಹಲವು ಮುಖಗಳು, ಶ್ರೀ ರೇಣುಕಾ ಪ್ರಕಾಶನ, ಗುಲಬರ್ಗಾ

೧೩. ಪ್ರೀತಿ ಶುಭಚಂದ್ರ, ೨೦೦೨, ಮಹಿಳಾ ಅಧ್ಯಯನ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೪. ಪ್ರೇಮಾ ಸಿರ್ಸಿ, ೨೦೦೬, ಮಹಿಳೆ ಸಮಾಜ ಮತ್ತು ಸವಾಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೫. ಬಡಿಗೇರ ಜಿ.ಎಲ್., ೨೦೦೫, ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ, ಲಕ್ಷ್ಮಿ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು

೧೬. ಬೈರಪ್ಪ ಕೆ., ೧೯೯೭, ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ, ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ, ಗುಲಬರ್ಗಾ

೧೭. ಬೈರಪ್ಪ, ೨೦೦೨, ಸಮಗ್ರ ಗ್ರಾಮೀಣ ಸಮಾಜ, ಎಸ್.ಬಿ.ಎಸ್.ಪ್ರಕಾಶನ, ಬೆಂಗಳೂರು

೧೮. ಮುಳಗುಂದ, ಚ.ವಿ., ೧೯೮೬, ಆಧುನಿಕ ಮಹಿಳೆ ಮತ್ತು ಸಮಾಜ, ಮಾತೃಶ್ರೀ ಪ್ರಕಾಶನ, ಮುದ್ದೇಬಿಹಾಳ್

೧೯. ಮೂರ್ತೇಶ್ವರಯ್ಯ ಟಿ.ಕಾ., ೨೦೦೭, ಮಹಿಳಾ ಸಾಮಾಜಿಕಲೆ, ಸ್ವಪ್ನ ಬುಕ್‌ಹೌಸ್, ಬೆಂಗಳೂರು

೨೦. ರಾಜಶೇಖರ ಎನ್., ೨೦೦೧, ಭಾರತೀಯ ಸಮಾಜ, ಭ್ರಮರ ಪ್ರಕಾಶನ, ಶಿವಮೊಗ್ಗ

೨೧. ರೋಹಿಣಿ ಬಿ.ಎಂ., ೨೦೦೪-೦೫, ಸ್ತ್ರೀ ಭಿನ್ನ ಮುಖಗಳು, ಕರಾವಳಿ ಲೇಖಕಿಯರ ವಾಚಕಿಯರ ಸಂಘ(ರಿ), ಮಂಗಳೂರು

೨೨. ರೋಹಿಣಿ ಬಿ.ಎಂ., ೧೯೯೫, ಸ್ತ್ರೀ ಸಂವೇದನೆ, ಹೇಮಾಂಶು ಪ್ರಕಾಶನ, ಮಂಗಳೂರು

೨೩. ವಿಜಯಶ್ರೀ ಸಬರದ(ಸಂ), ೨೦೦೫, ಮಹಿಳೆ ಶೋಷಣೆ ಸವಾಲುಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೨೪. ಶ್ರೀಧರ ಎ., ೨೦೦೨, ವಿಕೇಂದ್ರೀಕರಣ ಮತ್ತು ಗ್ರಾಮಪಂಚಾಯತ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೫. ಶ್ರೀಧರ ಎ., ೨೦೦೬, ಅಭಿವೃದ್ಧಿ ಅಧ್ಯಯನ, ಸಂಚಿಕೆ ೨, ಸಂಪುಟ ೪, *ಪಂಚಾಯತ್ ಮತ್ತು ಮಹಿಳೆ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೬. ಶ್ರೀಮತಿ ಎಚ್.ಎಸ್.(ಅನು), ಸಿಮೋನ್ ದ ಬೋವಾ(ಮೂಲ), ೨೦೦೭, ದ ಸೆಕೆಂಡ್ ಸೆಕ್ಸ್, ಅಧ್ಯಯನ ಮಂಡಲ, ಬೆಂಗಳೂರು

೨೭. ಶ್ರೀಮತಿ ಎಚ್.ಎಸ್., ೨೦೦೪, ಹೆಣ್ಣು-ಹೆಂಗಸು, ಬ್ಯಾಲದ ಕೆರೆ ಪ್ರಕಾಶನ, ಮಂಡ್ಯ

೨೮. ಶ್ರೀಮತಿ ಎಚ್.ಎಸ್., ೨೦೦೩, ಸ್ತ್ರೀವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೯. ಶ್ರೀಮತಿ ಎಚ್.ಎಸ್.(ಸಂ), ೨೦೦೭, ಮಹಿಳೆ ದುಡಿಮೆ ಮತ್ತು ಬಿಡುವು, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೦. ಶ್ರೀಮತಿ ಎಚ್.ಎಸ್., ೨೦೦೧, ಮಹಿಳಾ ಅಧ್ಯಯನ ಸಂಚಿಕೆ(ಉತ್ತರಾಯನ ಸಂಚಿಕೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೧. ಶ್ರೀಮತಿ ಎಚ್.ಎಸ್., ೧೯೯೯, ಮಹಿಳಾ ಅಧ್ಯಯನ ಸಂಚಿಕೆ (ದಕ್ಷಿಣಾಯನ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೨. ಶ್ರೀಮತಿ ಎಚ್.ಎಸ್., ೨೦೦೦, ಮಹಿಳಾ ಅಧ್ಯಯನ(ದಕ್ಷಿಣಾಯನ ಸಂಚಿಕೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೩. ಶ್ರೀಮತಿ ಎಚ್.ಎಸ್.೨೦೦೧, ಮಹಿಳಾ ಅಧ್ಯಯನ(ದಕ್ಷಿಣಾಯನ ಸಂಚಿಕೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೪. ಶೈಲಜ ಇಂ.ಹಿರೇಮಠ, ೧೯೯೯, ಪಾತರದವರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೫. ಶೈಲಜ ಇಂ.ಹಿರೇಮಠ(ಸಂ), ೨೦೦೬, ಮಹಿಳಾ ಅಧ್ಯಯನ, ಸಂಪುಟ ೮, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೬. ಶೈಲಜ ಇಂ.ಹಿರೇಮಠ(ಸಂ), ೨೦೦೭, ಮಹಿಳಾ ಅಧ್ಯಯನ, ಸಂಪುಟ ೯, ಸಂಚಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೭. ಶೈಲಜ ಇಂ.ಹಿರೇಮಠ(ಸಂ), ೨೦೦೭, ಮಹಿಳಾ ಅಧ್ಯಯನ, ಸಂಪುಟ ೯, ಸಂಚಿಕೆ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೮. ಶೈಲಜಾ ಎಂ.ಸಿ., ೨೦೦೬, ದುಡಿಯುವ ಕೈಗಳಿಗೆ ಉದ್ಯೋಗ, ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಮೈಸೂರು

೩೯. ಹನುಮಂತು(ಅನು), ಹಿರಾಚಂದ್ ಲಕ್ಷ್ಮಿನಾಗನಾಥ ವಾಘ್ಮರೆ(ಮೂಲ), ೧೯೯೭, ಗ್ರಾಮಸಭೆಗೆ ಅಧಿಕಾರ ಏಕೆ?, ಜನ ಪ್ರಕಾಶನ, ಬೆಂಗಳೂರು

೪೦. ಹಾಲತಿ ಸೋಮಶೇಖರ್, ೨೦೦೭, ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ವಿಸ್ಮಯ ಪ್ರಕಾಶನ, ಮೈಸೂರು

ನಿಯತಕಾಲಿಕೆಗಳು

೧. ಕೇಶವ ಪ್ರಸಾದ್ ಬಿ.ಕಿದೂರು, ಫೆಬ್ರವರಿ ೨೦೦೯, ಕೆಲಸ ಮಾಡಿದ್ದಕ್ಕೆ ತಕ್ಕ ನ್ಯಾಯ ಕೊಡಿ, ಪಂಚಾಯತ್‌ರಾಜ್ ವಾರ್ತಾಪತ್ರಿಕೆ

೨. ಶರಣ್ ಎಸ್.ಬಿ.(ಸಂ), ಆಗಸ್ಟ್ ೨೦೦೮, ಯೋಜನಾ ಸಮಾಚಾರ ಮತ್ತು ಪ್ರಸಾರ ಸಚಿವಾಲಯ, ಬೆಂಗಳೂರು

೩. ವಿಜಯ ಕರ್ನಾಟಕ, ೨೧ ನವೆಂಬರ್ ೨೦೦೮, ಉದ್ಯೋಗ ಖಾತ್ರಿಯಲ್ಲಿ ದೋಷ ತನಿಖೆ

೪. ವಿಜಯಕರ್ನಾಟಕ ೨೨, ಡಿಸೆಂಬರ್ ೨೦೦೮, ಖಾತ್ರಿ ಇಲ್ಲದ ಉದ್ಯೋಗ ಯೋಜನೆ

೫. ವಿಜಯಕರ್ನಾಟಕ, ೨೮, ಫೆಬ್ರವರಿ ೨೦೦೮, ಉದ್ಯೋಗ ಖಾತ್ರಿ ಉದ್ದೇಶ ಮಾಯ

೬. ವಿಜಯಕರ್ನಾಟಕ, ೨೦, ನವೆಂಬರ್ ೨೦೦೮, ಉದ್ಯೋಗ ಖಾತ್ರಿ, ಉದ್ರಿಖಾತೆ

೭. ಮುರುಳೀಧರ ವೈ.ಜಿ., ೩ ಡಿಸೆಂಬರ್ ೨೦೦೮, ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ ಮಾಹಿತಿ ಹಕ್ಕು, ಉದಯವಾಣಿ, ಬೆಂಗಳೂರು

೮. ದುಡಿಯುವ ಕೈಗಳಿಗೆ ಸಿಗಲಿಲ್ಲ ಉದ್ಯೋಗ ಖಾತ್ರಿ, ೩ ಮಾರ್ಚ್ ೨೦೦೯, ಪ್ರಜಾವಾಣಿ

# ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಶಿಕ್ಷಣ | ಊರು |
|---|---|---|---|---|---|
| ೧ | ಮಾರೆಮ್ಮ | ೩೮ | ಹರಿಜನ | ಅನಕ್ಷರಸ್ಥೆ | ಮಾಚನೂರು |
| ೨ | ಗಂಗಮ್ಮ | ೪೦ | ಹರಜನ | ಅನಕ್ಷರಸ್ಥೆ | ಅತ್ತನೂರು |
| ೩ | ಸುಲ್ತಾನ್ ಭೀ | ೨೬ | ಪಿಂಜಾರು | ಪಿಯುಸಿ | ಮಾಚನೂರು |
| ೪ | ಲಕ್ಷ್ಮೀ | ೩೫ | ಲಿಂಗಾಯಿತ | ೭ನೇ ತರಗತಿ | ಹೊಕ್ರಾಣಿ |
| ೫ | ಪಾರ್ವತಮ್ಮ | ೩೬ | ನಾಯಕ | ಅನಕ್ಷರಸ್ಥೆ | ಹೊಕ್ರಾಣಿ |
| ೬ | ಬಸವರಾಜ | ೨೮ | ಹರಿಜನ | ಎಸ್.ಎಸ್.ಎಲ್.ಸಿ | ಅತ್ತನೂರು |
| ೭ | ಕುಬೇರಪ್ಪ | ೫೮ | ನಾಯಕ | ೨ನೇ ತರಗತಿ | ಬೇವಿನೂರು |
| ೮ | ಮಾದೇವಪ್ಪ | ೩೦ | ಚಲವಾದಿ | ಅನಕ್ಷರಸ್ಥ | ಸಿಂಗಡದಿನ್ನಿ |
| ೯ | ಯಲ್ಲಮ್ಮ | ೩೬ | ಬೋವಿ | ಅನಕ್ಷರಸ್ಥೆ | ಗಣದಿನ್ನಿ |
| ೧೦ | ರಾಧಮ್ಮ | ೩೦ | ಮಡಿವಾಳ | ಅನಕ್ಷರಸ್ಥೆ | ಜಕ್ಕಲದಿನ್ನಿ |
| ೧೧ | ಹನುಮವ್ವ | ೪೦ | ನಾಯಕ | ಅನಕ್ಷರಸ್ಥೆ | ತುಪ್ಪದೂರು |
| ೧೨ | ರಂಗಮ್ಮ | ೪೦ | ನಾಯಕ | ಅನಕ್ಷರಸ್ಥೆ | ತುಪ್ಪದೂರು |
| ೧೩ | ಭೀಮವ್ವ | ೫೦ | ಹರಿಜನ | ಅನಕ್ಷರಸ್ಥೆ | ಮಾಚನೂರು |
| ೧೪ | ಶಿವಮ್ಮ | ೩೫ | ಹರಿಜನ | ಅನಕ್ಷರಸ್ಥೆ | ಮಾಚನೂರು |
| ೧೫ | ಗೌರಮ್ಮ | ೩೦ | ಬೋವಿ | ಅನಕ್ಷರಸ್ಥೆ | ಶಾಖಾಪೂರ |
| ೧೬ | ಚನ್ನಮ್ಮ | ೪೫ | ಕುರುಬ | ಅನಕ್ಷರಸ್ಥೆ | ಶಾಖಾಪೂರ |

| ೧೭ | ಹನುಮಂತಿ | ೩೫ | ಕುರುಬ | ಅನಕ್ಷರಸ್ಥೆ | ಅತ್ತನೂರು |
|---|---|---|---|---|---|
| ೧೮ | ಶರಣಮ್ಮ | ೨೮ | ನಾಯಕ | ಅನಕ್ಷರಸ್ಥೆ | ಅತ್ತನೂರು |
| ೧೯ | ಕಮಲಮ್ಮ | ೩೮ | ಕಬ್ಬೇರ್ | ೭ನೇ ತರಗತಿ | ಅತ್ತನೂರು |
| ೨೦ | ಯಲ್ಲಪ್ಪ | ೨೮ | ಹರಿಜನ | ಅನಕ್ಷರಸ್ಥ | ಮಾಚನೂರು |
| ೨೧ | ಶ್ರೀದೇವಿ | ೩೫ | ಕುರುಬ | ಅನಕ್ಷರಸ್ಥೆ | ಜಕ್ಕಲದಿನ್ನಿ |
| ೨೨ | ಅನ್ನಮ್ಮ | ೩೩ | ನಾಯಕ | ಅನಕ್ಷರಸ್ಥೆ | ಸಿಂಗಡದಿನ್ನಿ |
| ೨೩ | ಮಾಬಮ್ಮ | ೩೫ | ಪಿಂಜಾರ | ಅನಕ್ಷರಸ್ಥೆ | ಗಣದಿನ್ನಿ |
| ೨೪ | ವಸುರಮ್ಮ | ೪೦ | ಹರಿಜನ | ಅನಕ್ಷರಸ್ಥೆ | ಗಣದಿನ್ನಿ |
| ೨೫ | ಅಂಬ್ರಮ್ಮ | ೩೫ | ಉಪ್ಪಾರ | ಅನಕ್ಷರಸ್ಥೆ | ಗಣದಿನ್ನಿ |
| ೨೬ | ದುರಗಮ್ಮ | ೩೫ | ಹರಿಜನ | ಅನಕ್ಷರಸ್ಥೆ | ಆಂಜನೇಯ ಕ್ಯಾಂಪ್ |
| ೨೭ | ಪಾರ್ವತಮ್ಮ | ೩೫ | ಜಂಗಮ | ಅನಕ್ಷರಸ್ಥೆ | ಗಣದಿನ್ನಿ |
| ೨೮ | ಲಕ್ಷ್ಮೀ | ೪೦ | ಚಲವಾದಿ | ಅನಕ್ಷರಸ್ಥೆ | ಹೊಕ್ರಾಣಿ |
| ೨೯ | ನಬೀಸಾಬ್ | ೩೫ | ಪಿಂಜಾರ | ಅನಕ್ಷರಸ್ಥ | ಮಾಚನೂರು |
| ೩೦ | ನಾಗೇಂದ್ರಪ್ಪ | ೪೦ | ಕುರುಬ | ಅನಕ್ಷರಸ್ಥ | ಮಾಚನೂರು |
| ೩೧ | ಚಂದ್ರಶೇಖರ | ೩೦ | ಮಡಿವಾಳ | ೭ನೇ ತರಗತಿ | ಜಕ್ಕಲದಿನ್ನಿ |
| ೩೨ | ಸುಭದ್ರಮ್ಮ | ೩೫ | ಲಿಂಗಾಯತ | ಅನಕ್ಷರಸ್ಥೆ | ಸಿಂಗಡದಿನ್ನಿ |
| ೩೩ | ಕಲ್ಯಾಣಮ್ಮ | ೪೨ | ಕುರುಬ | ಅನಕ್ಷರಸ್ಥೆ | ಹೊಕ್ರಾಣಿ |
| ೩೪ | ಸರೋಜ | ೩೩ | ನಾಯಕ | ಅನಕ್ಷರಸ್ಥೆ | ತುಪ್ಪದೂರು |
| ೩೫ | ಕರ್ರೆಮ್ಮ | ೪೫ | ಚಲವಾದಿ | ಅನಕ್ಷರಸ್ಥೆ | ಜಕ್ಕಲದಿನ್ನಿ |



ಹಳ್ಳದಲ್ಲಿರುವ ಗಿಡಗಂಟಿತಗಳನ್ನು ಕಡಿಯುವುದರಲ್ಲಿ ನಿರತರಾದ ಮಹಿಳೆ ಮತ್ತು ಪುರುಷರು - ಶಾಖಾಪುರ ಗ್ರಾ



ಕೃಷಿಹೊಂಡ ನಿರ್ಮಿಸುವಲ್ಲಿ ನಿರತರಾದ ಮಹಿಳೆ ಮಹಿಳೆ ಮತ್ತು ಪುರುಷರು - ಜೇವಿಸೂರು ಗ್ರಾಮ



ಚೆಕ್‌ಡ್ಯಾಮ್ ನಿರ್ಮಿಸುವಲ್ಲಿ ನಿರತರಾದ ಮಹಿಳೆ ಮತ್ತು ಪುರುಷರು - ಆಂಜನೇಯ ಕ್ಯಾಂಪ್



ಚೆಕ್‌ಡ್ಯಾಮ್ ನಿರ್ಮಿಸುವಲ್ಲಿ ನಿರತರಾದ ಮಹಿಳೆ ಮತ್ತು ಪುರುಷರು - ಹೊಕ್ರಾಣಿ ಗ್ರಾಮ



ಹಳ್ಳದಲ್ಲಿ ಗಿಡಗಂಟೆಗಳನ್ನು ಕಡಿಯುವುದರಲ್ಲಿ ನಿರತರಾದ ಮಹಿಳೆಯರು - ಜಕ್ಕಲದಿನ್ನಿ ಗ್ರಾಮ



ಚೆಕ್‌ಡ್ಯಾಮ್ ನಿರ್ಮಿಸುವಲ್ಲಿ ನಿರತರಾದ ಮಹಿಳೆ ಮತ್ತು ಪುರುಷರು - ಹೊಕ್ರಾಣಿ ಗ್ರಾಮ



ಸ್ಮಶಾನವನ್ನು ಸ್ವಚ್ಚಗೊಳಿಸುವಲ್ಲಿ ನಿರತರಾದ ಮಹಿಳೆಯರು - ಮಾಚನೂರು ಗ್ರಾಮ



ಗ್ರಾಮದ ಸುತ್ತಲಿರುವ ಜಾಲಿ ಮುಳ್ಳು ಕಡಿಯುವುದರಲ್ಲಿ ನಿರತರದ ಮಹಿಳೆಯರು -ತುಪ್ಪದೂರು ಗ್ರಾಮ



ಚೆಕ್‌ಡ್ಯಾಮ್ ನಿರ್ಮಿಸುವಲ್ಲಿ ನಿರತರಾದ ಮಹಿಳೆಯರು - ಸಿಂಗಡದಿನ್ನಿ ಗ್ರಾಮ



ಕೃಷಿಹೊಂಡ ನಿರ್ಮಿಸುವಲ್ಲಿ ನಿರತರಾದ ಮಹಿಳೆ ಮತ್ತು ಪುರುಷರು - ಗಣದಿನ್ನಿ ಗ್ರಾಮ



ಉದ್ಯೋಗ ಖಾತ್ರಿ ಯೋಜನೆಯಲ್ಲಿ ಜಾಲಿ ಮುಳ್ಳು ಕಡಿಯುವುದರಲ್ಲಿ ನಿರತರಾದ ಮಹಿಳೆಯರು - ಅತ್ತನೂರು ಗ್ರಾಮ



ಕೃಷಿಹೊಂಡ ನಿರ್ಮಿಸುವಲ್ಲಿ ನಿರತರಾದ ಮಹಿಳೆಯರು - ಅತ್ತನೂರು ಗ್ರಾಮ